ಮೊದಲನೆಯ ಮುದ್ರಣ—೧೯೫೭

ಸಂಪಾದಕರು :

**ತ. ಸು ಶಾಮರಾವ್, ಎಂ.ಎ.**

ತ. ವೆಂ ಸ್ಮಾರಕ ಗ್ರಂಥಮಾಲೆ

ಕೃಷ್ಣಮೂರ್ತಿಪುರಂ,

ಮೈಸೂರು



**ಬೆಲೆ :**

ಸಾದಾ ಪ್ರತಿ : ೨—೦—೦

**ಕ್ಯಾಲಿಕೋ ಪ್ರತಿ :** ೩—೦—೦

ಮುದ್ರಕರು

ಹಿಂದೂಸ್ಥಾನ್ ಪ್ರೆಸ್, ಮೈಸೂರು.

# ಸಂಪಾದಕನ ಅರಿಕೆ

ನನ್ನ ಮಾನ್ಯ ಮಿತ್ರರಾದ ಶ್ರೀಮಾನ್ ಜಿ. ಎಸ್. ಚಕ್ರವರ್ತಿಯವರ ಈ ಕೃತಿ "ಋಗ್ವೇದ ಸಂಹಿತೆ" ಯನ್ನು ಕನ್ನಡಿಗರಿಗೆ ಕಾಣಿಕೆಯಾಗಿ ನೀಡುವ ಭಾಗ್ಯ ನನ್ನದಾದುದಕ್ಕಾಗಿ ನಾನು ಅತ್ಯಂತ ಹರ್ಷಿಸುತ್ತೇನೆ. ಕನ್ನಡದಲ್ಲಿ ವೇದ ಸಂಹಿತೆಯ ಮೇಲಿನ ಗ್ರಂಥವೊಂದು ಹೊರಬೀಳುತ್ತಿರುವುದು ಶುಭಸೂಚನೆ. ಜನಸಾಮಾನ್ಯರಿಗೆ ಎಟುಕಲಾರದಿದ್ದ ಈ ಅಮೂಲ್ಯ ವಸ್ತುವನ್ನು ಹಿಂದೆ ಭಾಷ್ಯಕಾರರು ಜನರಿಗೆ ಪರಿಚಯಮಾಡಿಕೊಡುವ ಪವಿತ್ರಕಾರ್ಯವನ್ನು ಕೈಗೊಂಡರು. ಇಂದು ಆ ಹಾದಿಯಲ್ಲಿ ಇನ್ನೂ ಮುಂದುವರಿದು, ಸಂಸ್ಕೃತವನ್ನು ಅರಿಯದವರು ಅದರ ಪರಿಚಯವನ್ನು ಪಡೆಯಲು ಸಹಾಯಕವಾಗುವಂತೆ ಶ್ರೀಮಾನ್ ಚಕ್ರವರ್ತಿಯವರು ಈ "ಋಗ್ವೇದ ಸಂಹಿತೆ" ಯನ್ನು ಬರೆದಿದ್ದಾರೆ. ಕನ್ನಡದಲ್ಲಿ ಇಂತಹ ಭಾಷ್ಯಸಾಹಿತ್ಯ ಹೆಚ್ಚಿದಷ್ಟು ಕನ್ನಡ ಹೆಚ್ಚು ಪುಷ್ಟಿಗೊಳ್ಳುವುದೆಂದು ಹೇಳಬಹುದು. ಈ ಕಾರ್ಯಕ್ಕೆ ಹೆದ್ದಾರಿಯನ್ನು ಹಾಕಿಕೊಟ್ಟಿರುವ ಶ್ರೀಮಾನ್ ಚಕ್ರವರ್ತಿಯವರನ್ನು ನಾನು ಕನ್ನಡಿಗರೆಲ್ಲರ ಪರವಾಗಿ ಅಭಿನಂದಿಸುತ್ತೇನೆ.

ತ. ಸು. ಶಾಮರಾಯ.

# ಮುನ್ನುಡಿ.

ಶ್ರೀಮಾನ್ ಜಿ. ಎನ್. ಚಕ್ರವರ್ತಿಯವರು ತಮ್ಮ ಈ "ಋಗ್ವೇದ ಸಂಹಿತೆ"ಗೆ ಮುನ್ನುಡಿಯನ್ನು ಬರೆದುಕೊಡುವ ಹೊಣೆಯನ್ನು ನನ್ನ ಮೇಲೆ ಹೊರಿಸಿ ಒಂದು ವರುಷಕ್ಕೂ ಹೆಚ್ಚು ಕಾಲ ಸಂದಿರಬೇಕು. "ಋಗ್ವೇದ ಸಂಹಿತೆ" ಒಳಗೊಂಡಿರುವ ಅಮೂಲ್ಯ ವಸ್ತುವಿಗೆ ಸುದೀರ್ಘವಾದ ಮುನ್ನುಡಿ ಆಗತ್ಯ; ತಕ್ಕಷ್ಟು ವ್ಯವಧಾನವಿಲ್ಲದೆ ಇದು ಸಾಧ್ಯವಿಲ್ಲ; ಈಗ ವ್ಯವಧಾನವಿಲ್ಲ—ಎಂಬ ನನ್ನ ವಾದಕ್ಕೆ ಚಕ್ರವರ್ತಿಯವರು ಮಣಿಯಲಿಲ್ಲ; ನನ್ನ ಮುನ್ನುಡಿಯಿಲ್ಲದೆ ಪುಸ್ತಕದ ಪ್ರಕಟನೆಯಿಲ್ಲ—ಎಂಬ ಅವರ ಹಟಕ್ಕೆ ಸೋತು, ಹೊಸದೊಂದು ಪುಸ್ತಕ ಕನ್ನಡದಲ್ಲಿ ಬರಲೆಂಬ ಸದಾಶಯದಿಂದ ಈ ಮುನ್ನುಡಿರೂಪದ ಶಾಸ್ತ್ರಮಾಡಿ ಮುಗಿಸುತ್ತಿದ್ದೇನೆ.

"ಹೃದಿ ಪ್ರತೀಷ್ಯಾ ಕವಯೋ ಮನೀಷಾ'' ಎಂಬ ವೈದಿಕ ಸೂಕ್ತಿಯಂತೆ ಕವಿಗಳು ಸತ್ಯಶ್ರುತರು. ಆದ್ದರಿಂದಲೆ ಅವರನ್ನು 'ಋಷಿ' ವಿಶೇಷಣದಿಂದ ನಿರ್ದೇಶಿಸಿರುವುದು. ಪ್ರಪ್ರಾಚೀನರಾದ ಈ ಕವಿಮನೀಷಿಗಳು ಕಂಡ, ಕೇಳಿದ, ಪ್ರತಿಪಾದಿಸಿದ ವೈದಿಕ ವಾಕ್ಯಗಳೆ ಭಾರತೀಯ ತತ್ತ್ವಪ್ರತಿಪಾದನೆಗೆಲ್ಲ ಮೂಲ. ಉಪನಿಷದಾದಿಗಳು ಕೂಡ ತತ್ತ್ವ ಪ್ರತಿಪಾದನೆಗೆ ಆಧಾರವಾಗಿ ಈ ಸಂಹಿತಾವಾಕ್ಯಗಳನ್ನೆ ಉದ್ಧರಿಸುತ್ತವೆ. ಆದ್ದರಿಂದ ನಮ್ಮ ಸಂಸ್ಕೃತಿಗೆ ಆಧಾರಭೂತವಾಗಿರುವ ವೈದಿಕ ವಾಙ್ಮಯದ ಪ್ರಾಮುಖ್ಯತೆ ಸ್ವಯಂ ವೇದ್ಯವಾಗಿದೆ.

ವೇದವಾಙ್ಮಯವನ್ನು ಜ್ಞಾನಕಾಂಡ, ಕರ್ಮಕಾಂಡ — ಎಂದು ವಿಭಾಗಿಸಿ, ಸಂಹಿತಾ ಮತ್ತು ಬ್ರಾಹ್ಮಣಗಳನ್ನು ಕರ್ಮಕಾಂಡವೆಂದೂ ಉಪನಿಷತ್ತುಗಳನ್ನು ಜ್ಞಾನಕಾಂಡವೆಂದೂ ನಿರ್ದೇಶಿಸುವುದು ನಮ್ಮ ಸಂಪ್ರದಾಯವಾದಿಗಳ ಮತ. ಕರ್ಮಕಾಂಡವು ಕೇವಲ ಯಜ್ಞಯಾಗಾದಿ ಕರ್ಮಗಳಿಗೆ ಮೀಸಲಾದುವೆಂದು ಇವರ ಭಾವನೆ. ವೇದವಾಕ್ಯಗಳಿಂದ ಸ್ತುತವಾದ ಗುಹ್ಯತಮ ತತ್ತ್ವ ಸ್ವರೂಪವನ್ನು ಅರಿಯದೆ ಋಕ್ಕುಗಳನ್ನು ಪಠಿಸುವುದು ನಿಷ್ಪ್ರಯೋಜಕವೆಂದು ಸಂಹಿತಾವಾಕ್ಯಗಳೇ ಸಾರುತ್ತಿದ್ದರೂ ಸಂಪ್ರದಾಯವಾದಿಗಳ ಗಮನ ಅತ್ತ ಹರಿಯುವಂತಿಲ್ಲ. ಇನ್ನು ಪಾಶ್ಚಾತ್ಯ

ವಿದ್ವಾಂಸರಾದರೋ, ಕೇವಲ ಭಾಷಾದೃಷ್ಟಿಯಿಂದ ನಿರ್ವಚನವನ್ನು ಹೇಳಿ ತತ್ತ್ವಾರ್ಥ ಪ್ರತಿಪಾದಕವಾದ ವಾಕ್ಯಗಳೇ ಸಂಹಿತೆಗಳಲ್ಲಿ ಅಪೂರ್ವ ಎಂದು ತಿಳಿಸುತ್ತಾರೆ. ಅವರ ಅನುಯಾಯಿಗಳಾದ ಕೆಲವು ಭಾರತೀಯ ವಿದ್ವಾಂಸರೂ ಅದೇ ಹಾದಿಯನ್ನೆ ತುಳಿದಿದ್ದಾರೆ. ಆದರೆ ಇತ್ತೀಚಿಗೆ ಸ್ವತಃ ಮಂತ್ರದ್ರಷ್ಟಾರರೂ ಸಿದ್ಧಪುರುಷರೂ ಪ್ರಾಚ್ಯಪಾಶ್ಚಾತ್ಯ ತತ್ತ್ವಜ್ಞಾನ ಭಾಂಡಾರಿಗಳೂ ಆದ ಅರವಿಂದರ ಪೂರ್ಣದೃಷ್ಟಿಯ ದೀಪ್ತಿಯಲ್ಲಿ ವೇದಗಳು ಜೀವಂತವಾಗಿವೆ. ಅತೀಂದ್ರಿಯಾನುಭವಗಳಿಗೆ ಪ್ರತಿಮಾ ವಿಧಾನವು ಕಲ್ಪಿಸಿದ್ದ ಸಂಕೇತ ಮತ್ತು ಪ್ರತೀಕಗಳಿಗೆಲ್ಲ ನಿತ್ಯಸತ್ಯದ ಶಾಶ್ವತಾರ್ಥ ದೊರೆಕೊಳ್ಳುವಂತಾಗಿದೆ. ಆ ಸಮನ್ವಯ ದೃಷ್ಟಿಯ ಹಾದಿಯಲ್ಲಿಯೇ ಈ ಗ್ರಂಥ ಹಜ್ಜೆ ಹಾಕಿದೆ.

ಎಲ್ಲ ಭಾಷೆಯ ಎಲ್ಲ ಕೃತಿರತ್ನಗಳೂ ಕನ್ನಡಿಗರ ಸ್ವತ್ತಾಗಬೇಕೆಂಬುದು ನಮ್ಮ ಉತ್ಕಟೇಚ್ಛೆ. ಅದರಲ್ಲಿಯೂ ನಮ್ಮ ಸಂಸ್ಕೃತಿಯ ಮೂಲಶಕ್ತಿಯಂತಿರುವ ವೈದಿಕ ಸಾಹಿತ್ಯದ ಪರಿಚಯು ನಮ್ಮ ಜನರಿಗೆ ಸಾಕಷ್ಟು ಇರಬೇಕಾದುದು ಅತ್ಯಗತ್ಯ. ಶ್ರೀವರ್ಮ ಚಕ್ರವರ್ತಿಯವರ "ಋಗ್ವೇದ ಸಂಹಿತೆ" ಆ ಕೆಲಸವನ್ನು ತಕ್ಕಮಟ್ಟಿಗೆ ನೆರವೇರಿಸುವುದೆಂದು ನನ್ನ ಭರವಸೆ.

**ಕುವೆಂಪು.**

೫-೯-೧೯೫೭

# ಕೃತಜ್ಞತೆ.

ಋಕ್ಸಂಹಿತೆಯ ಮೇಲೆ ಒಂದು ಸಣ್ಣ ಪ್ರಬಂಧವನ್ನು ಬರೆದು ಅದನ್ನು ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟಿಸಬೇಕೆಂಬ ಉದ್ದಿಶ್ಯದಿಂದ ಅದನ್ನು ತಿದ್ದಿಸಲು ನನ್ನ ಪ್ರಿಯಮಿತ್ರರೂ ಹಿತೈಷಿಗಳೂ ಆದ ಶ್ರೀ|| ತ|| ಸು|| ಶಾಮರಾಯರಲ್ಲಿಗೆ ಕಳೆದ ವರ್ಷ ತೆಗೆದುಕೊಂಡು ಹೋದೆ. ಅವರು ಅದನ್ನು ಓದಿ ತಮ್ಮ ಸಂತೋಷವನ್ನು ಸೂಚಿಸಿ "ಇದನ್ನು ಪ್ರಬಂಧರೂಪದಲ್ಲಿಯೇ ಮುಗಿಸಬೇಡ, ಪುಸ್ತಕರೂಪದಲ್ಲಿ ವಿಸ್ತರಿಸು, ನಾನು ಪ್ರಕಟಿಸುತ್ತೇನೆ" ಎಂದು ಉತ್ತೇಜನಕೊಟ್ಟರು. ಈ ಪುಸ್ತಕವು ಅವರ ಆದೇಶದ ಫಲ. ಇದರಂತೆಯೇ ಇದರ ಮುಂದಿನ ನನ್ನ ಇತರ ವೈದಿಕ ಗ್ರಂಥಗಳಿಗೂ ಅವರೇ ಪ್ರೇರಕರು. ನನ್ನ ವಿಷಯದಲ್ಲಿ ಅವರ ಔದಾರ್ಯವು ಅಪಾರ.

ಅಲಸರನ್ನು ಎಬ್ಬಿಸಿ ಕ್ರಿಯಾವಂತರನ್ನಾಗಿ ಮಾಡುವುದು ಶ್ರೀ|| ಶಾಮರಾಯರ ಮುಖ್ಯ ವೃತ್ತಿಗಳಲ್ಲೊಂದು. ಅವರ ಮನಸ್ಸಿಗೂ ಕ್ಲೇಶದಾಯಕವಾಗುವ ಕೆಲವು ವೈಯಕ್ತಿಕವಾದ ನ್ಯೂನತೆಗಳು ಗ್ರಂಥಕರ್ತರಲ್ಲಿದ್ದರೂ ಅದೆಲ್ಲವನ್ನೂ ನಿರ್ಲಕ್ಷಿಸಿ ಈ ಕಾರ್ಯವನ್ನು ಅವರು ಮುಂದುವರಿಸುತ್ತಿದ್ದಾರೆ. (ಕ್ಷಾರಂ ಪಿಬತಿ ಪಯೋಧೇ ರ್ವರ್ಷತ್ಯಂಭೋಧರೋ ಮಧುರಮಂಭಃ).

ತಮ್ಮ ಕೃತಿಗಳ ಮೂಲಕ ಜನಸಮುದಾಯಕ್ಕೆ ಆಧ್ಯಾತ್ಮಿಕ ಧ್ಯೇಯವನ್ನು ತಿಳಿಸುತ್ತ ಸಾತ್ವಿಕ ಜೀವನವನ್ನು ಪ್ರತಿಬಿಂಬಿಸುವ ಶ್ರೀ|| ಕುವೆಂಪುರವರ ಮುನ್ನುಡಿಯು ಈ ಗ್ರಂಥಕ್ಕೆ ಲಭಿಸಿದುದು ನನ್ನ ಸುಯೋಗ. ಇದಕ್ಕೂ ಶ್ರೀ|| ಶಾಮರಾಯರೇ ಕಾರಣರು. ಮಮತೆಯಿಂದ ನನ್ನನ್ನು ಕರೆದುಕೊಂಡು ಹೋಗಿ ನನ್ನ ಮತ್ತು ನನ್ನ ಗ್ರಂಥದ ಪರಿಚಯವನ್ನು ಮಾಡಿಸಿ ನಾನು ಅವರ ಅಭಿಮಾನಕ್ಕೆ ಪಾತ್ರನಾಗುವಂತೆ ಮಾಡಿದರು. ವ್ಯವಧಾನವಿಲ್ಲದ ಕಾರ್ಯಗೌರವವಿದ್ದರೂ ಕುವೆಂಪುರವರು ದಯೆಮಾಡಿ ನನ್ನ ಗ್ರಂಥಕ್ಕೆ ಮುನ್ನುಡಿ

ಯನ್ನು ಬರೆದು ನನ್ನನ್ನು ಪ್ರೋತ್ಸಾಹಿಸಿದ್ದಾರೆ. ಇವರಿಬ್ಬರಿಗೂ ನಾನು ಚಿರಋಣಿ.

ನನ್ನ ಶ್ರೇಯಃಕಾಂಕ್ಷಿಗಳಾದ ಆ॥ ವಿ॥ ಶ್ರೀ॥ ತಿರು॥ ತಿರು॥ ಶ್ರೀನಿವಾಸಗೋಪಾಲಾಚಾರ್ಯರು, ಶ್ರೀ॥ ಕೆ. ಸುಬ್ರಹ್ಮಣ್ಯಂ, ಎಂ.ಎ., ಐ.ಪಿ.ಎಸ್., ಡಿ.ಎಸ್.ಪಿ. ಬೆಂಗಳೂರು ಮತ್ತು ಶ್ರೀ॥ ಎಸ್. ಪುಟ್ಟಣ್ಣಯ್ಯ, ಎಂ. ಎ., ಬಿ. ಎಸ್. ಸಿ., ಬಿ.ಎಲ್., ಅಡ್ವೋಕೇಟ್, ಮೈಸೂರು. ಇವರುಗಳು ನನಗೆ ಅನೇಕ ವಿಧದಲ್ಲಿ ಅನೇಕ ವರ್ಷಗಳಿಂದ ಸಹಾಯಮಾಡುತ್ತ ಇಂಥ ಕಾರ್ಯಗಳಿಗೆ ಪ್ರೋತ್ಸಾಹವನ್ನು ಕೊಡುತ್ತಿದ್ದಾರೆ. ಇವರಿಗೆ ನಾನು ಕೃತಜ್ಞ.

ಶ್ರೀ॥ ಎಂ. ಯಾಮುನಾಚಾರ್ಯರು, ಎಂ. ಎ. ಮತ್ತು ಶ್ರೀ॥ ಎಂ. ಎಸ್. ವೆಂಕಟರಮಣಾಚಾರ್ಯರು, ಎಂ.ಎ., ಬಿ. ಟಿ. ಇವರು ಈ ಗ್ರಂಥದ ಮೂಲಪ್ರತಿಯನ್ನು ನೋಡಿ ಉಪಯುಕ್ತವಾದ ಸಲಹೆಗಳನ್ನು ಕೊಟ್ಟಿದ್ದಾರೆ. ಇವರಿಗೆ ನನ್ನ ಅನಂತ ವನ್ದನೆಗಳು.

"ಶ್ರೀ ಜಯಚಾಮರಾಜೇನ್ದ್ರ ವೇದರತ್ನಮಾಲಾ" ಎಂಬ ಮಾಲೆಯಲ್ಲಿ ಪ್ರಕಟವಾಗಿರುವ ಮುವತ್ತು ಸಂಪುಟಗಳಲ್ಲಿರುವ ನನ್ನ ಬರೆವಣಿಗೆಗಳಲ್ಲಿ ಕೆಲವನ್ನು ಇಲ್ಲಿ ಮತ್ತು ಮುಂದಿನ ಸಂಪುಟಗಳಲ್ಲಿ ಉಪಯೋಗಿಸಿಕೊಳ್ಳಲು ಅರಮನೆ ಅಧಿಕಾರಿಗಳೂ ವಿಶ್ವವಿದ್ಯಾಲಯದ ಅಧಿಕಾರಿಗಳೂ ದಯೆಯಿಟ್ಟು ಅನುಮತಿಯನ್ನಿತ್ತಿದ್ದಾರೆ. ಹಿಂದೂಸ್ಥಾನ್ ಪ್ರೆಸ್ಸಿನ ಮಾಲೀಕರಾದ ಶ್ರೀ॥ ಎಂ. ಶಾಮರಾವ್, ಬಿ.ಇ. ಮತ್ತು ಅವರ ಸಹೋದ್ಯೋಗಿಗಳು ಬಹಳ ಅಭಿಮಾನದಿಂದ ಈ ಪುಸ್ತಕವನ್ನು ಮುದ್ರಣಮಾಡಿಕೊಟ್ಟಿದ್ದಾರೆ. ಇವರಿಗೆಲ್ಲ ನನ್ನ ಧನ್ಯವಾದಗಳು.

ಮೈಸೂರು, ಜಿ. ಎನ್. ಚಕ್ರವರ್ತಿ.
10–10–1957.

## ವಿಷಯ ಸೂಚಿಕೆ

# ಕೆಲವು ಅಚ್ಚಿನ ತಪ್ಪುಗಳು

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| 3 | ಟಿಪ್ಪಣಿ | Metce Plysies | metaphysics |
| 5 | 6 | ತತ್ತ ್ವ | ತತ್ತ್ವ |
| 7 | 2 | ಪ್ತಕ್ಷಿಪ್ತ | ಪ್ರಕ್ಷಿಪ್ತ |
| 23 | 4 | ಅಣಿಮಾದೈಶ್ವರ್ಯ | ಅಣಿಮಾದ್ಯೈಶ್ವರ್ಯ |
| 30 | 2 | ಜಗತ್ಪಾಲಕ | ಜಗತ್ಪಾಲಕ. |
| 32 | ಟಿಪ್ಪಣಿ | ಬ್ರಹ್ಮಣಾದಿ | ಬ್ರಾಹ್ಮಣಾದಿ |
| ,, | ,, | ಅನ್ಯಾತ್ಮವಾದಿಗಳ | ಅಧ್ಯಾತ್ಮವಾದಿಗಳ |
| 36 | ಟಿಪ್ಪಣಿ | ಪರಸ್ಪರೋಪಕಾರೋಪ | ಪರಸ್ಪರೋಪಕಾರ್ಯೋಪಕಾರಕ |
| 45 | 4 | ತದಧಿನ [ಕಾರಕ | ತದಧೀನ |
| 47 | 1 | Emblamatic | emblematic |
| 50 | ಟಿಪ್ಪಣಿ | ಜಾಸೇತಿ | ಭಾಸೇತಿ |
| 52 | ,, | ಮೂರ್ಧಾ ಭುಪೋ | ಮೂರ್ಧಾ ಭುವೋ |
| ,, | ,, | ತ್ವಶುಶುಕ್ಷಣಿಃ | ತ್ವಮಾಶುಶುಕ್ಷಣಿಃ |
| 53 | ,, | ಅಸ್ಯಾದಿತೋ | ಅಸ್ಯಾದಿತ್ಯೋ |
| 55 | ,, | ಕೃಣೋತೀತಿಂದಂ | ಕೃಣೋತೀತೀದಂ |
| 60 | 2 | ಸ ವತ್ಸರ | ಸಂವತ್ಸರ |
| 67 | 4 | ವ್ಯಜಿನ | ವೃಜಿನ |
| 72 | 1 | ಶಿಥಿವಾಗದೆ | ಶಿಥಿಲವಾಗದೆ |
| ,, | 5 | ನಿತ್ತು | ಮತ್ತು |
| 75 | ಟಿಪ್ಪಣಿ | ಪ್ರಾಕಾಶಿಸುವಂತೆ | ಪ್ರಕಾಶಿಸುವಂತೆ |
| 76 | 8 | ಬಕಳಿಸುವುದೂ | ಕಬಳಿಸುವುದೂ |
| 77 | 12 | ಪಾಷ್ಕಲ್ಯಕ್ಕೂ | ಪೌಷ್ಕಲ್ಯಕ್ಕೂ |
| 79 | 19 | ಪಸುಗಳೊಡನೆಯೂ | ವಸುಗಳೊಡನೆಯೂ |
| 80 | ಋಙ್ಮಂತ್ರ | ಅಶ್ವಿನೋಭ್ಯಾ | ಅಶ್ವಿನೋಭಾ । |
| ,, | ,, | ತಾಂ ಮಂ | ತಾಂ ಮಾ |
| ,, | ,, | ಯಃ ಪಾಣಿಃ | ಯಃ ಪ್ರಾಣಿತಿ ಯ ಈಂ ಶೃಣೋತ್ಯುಕ್ತಂ |
| ,, | ,, | ಅಮಂತವೋ ಎಂಬ ಮಂತ್ರಭಾಗ | ಅಮಂತವೋ ಮಾಂ ತ ಉಪ ಕ್ಷಿಯಂತಿ ಶ್ರುಧಿ ಶ್ರುತ ಶ್ರದ್ಧಿವಂ ತೇ ವದಾಮಿ. |
| 107 | 11 | ಭೋಗಬಾಗ್ಯ | ಭೋಗಭಾಗ್ಯ |
| 125 | 24 | ಯಸ್ಲಿನ್ ಯ.ಶೋ | ಯಸ್ಮಿನ್ ಯಶೋ |
| 133 | 11 | ವತ್ಯಾಸ | ವ್ಯತ್ಯಾಸ |
| 140 | 18 | ತೈತ್ತಿಕೀತಿಯ | ತೈತ್ತಿರೀಯ |
| 152 | 10 | ತಾತ್ಪರ | ತಾತ್ಪರ್ಯ |
| 153 | 1? | ಹಿರಣಗರ್ಭ | ಹಿರಣ್ಯಗರ್ಭ |
| 156 | ಟಿಪ್ಪಣಿ | ಬ್ರಹ್ಮವರ್ಚಸೀ | ಬ್ರಹ್ಮವರ್ಚಸ್ವೀ |
| 159 | 11 | ಅರಣ್ಯಕಾದಿಗಳು | ಆರಣ್ಯಕಾದಿಗಳು |
| 164 | 2 | ತ್ರಿಪೂಸ್ಯಾಮಂ | ತ್ರಿಪಾದಸ್ಯಾಮೃತಂ, |

# ಪೀಠಿಕೆ

## ೧

ಪ್ರತಿಯೊಂದು ಜನಾಂಗದ ಸಂಸ್ಕೃತಿಯೂ, ಸಮಾಜ ಸಂಸ್ಥೆಗಳೂ ಆಯಾ ಜನಾಂಗಕ್ಕೆ ಮಾರ್ಗದರ್ಶಿಗಳಾದ ತತ್ತ್ವಜ್ಞರ ತತ್ತ್ವಜ್ಞಾನ, ಅದರ ಅನುರೋಧಿಯಾದ ಧಾರ್ಮಿಕಧ್ಯೇಯ ಇವನ್ನು ಅವಲಂಬಿಸಿರುತ್ತವೆ.[1] ತತ್ತ್ವಜ್ಞಾನಪ್ರಚೋದಿತವಾದ ಸಂಕೇತ ಮತ್ತು ಶ್ರದ್ಧೆಗಳನ್ನು ಇತಿಹಾಸಕಾರರು ಸ್ಥೂಲವಾಗಿ ಮೂರು ಪಂಗಡಗಳನ್ನಾಗಿ ವಿಭಾಗಿಸಿರುತ್ತಾರೆ.[2]

(೧) ನಿತ್ಯನಾದ ಈಶ್ವರನೇ ಸತ್ಯ; ಅಸತ್ಯವಲ್ಲದಿದ್ದರೂ ಅಶಾಶ್ವತವಾದ ಜಗಜ್ಜೀವನವು ಅಪ್ರಧಾನ ಎಂಬ ಶ್ರದ್ಧೆಯು ಒಂದು ವಿಧ.

(೨) ಜಗತ್ತೆಲ್ಲವೂ ಪ್ರವಾಹರೂಪದ ಪರಂಪರೆ; ಈ ಪ್ರವಾಹಕ್ಕಿಂತ ಭಿನ್ನನಾದ ನಿತ್ಯವಸ್ತುವಿಲ್ಲ; ಐಹಿಕವೇ ಪ್ರಧಾನ ಎಂಬುದು ಎರಡನೆಯದು.

(೩) ಅನಿತ್ಯವಾದ ಜಗತ್ತು ನಿತ್ಯನಾದ ಈಶ್ವರನಿಂದ ಉತ್ಪನ್ನವಾದುದು; ಈಶ್ವರನಿಂದ ವ್ಯಾಪ್ತವಾದ ಐಹಿಕವೂ ಸತ್ಯ ಮತ್ತು ಪ್ರಧಾನ; ಐಹಿಕದ ಸಕಲ ವಿಧವಾದ ಪರಿಪೂರ್ಣತೆಯೂ ನಿತ್ಯನಾದ ಈಶ್ವರನ ಸಂಕಲ್ಪ ಮತ್ತು ಆದರ್ಶಗಳನ್ನು ಅನುಸರಿಸಬೇಕು, ಎಂಬುದು ಮೂರನೆಯದು.

---

1. "In each age of the world, distinguished by high activity, there will be found at its culmination some profound Cosmological outlook, implicitly accepted, impressing its own type upon the current springs of action."

A. N. Whitehead. Adventures of Ideas.

2. Eternalism (Ideational), Temporalism (sensate) and Mixed (Idealistic) types.

P. A. Sorokin, Social & Cultural Dynamics.

ಇವುಗಳಲ್ಲಿ ಮೊದಲನೆಯ ಶ್ರದ್ಧೆಯು ಐಹಿಕ ಜೀವನಕ್ಕೆ ಪ್ರಾಶಸ್ತ್ಯವನ್ನೇ ಕೊಡುವುದಿಲ್ಲ. ಎರಡನೆಯದು ಐಹಿಕ ಜೀವನಕ್ಕೆ ನಿತ್ಯವೂ ಪವಿತ್ರವೂ ಆದ ಆದರ್ಶವನ್ನು ತೋರಿಸುವುದಿಲ್ಲ. ಎರಡರಲ್ಲೂ ನ್ಯೂನತೆಯಿದೆ. ನಿತ್ಯವಸ್ತುವಿನ ಆದರ್ಶವನ್ನು ಅನುಸರಿಸಿ ಐಹಿಕ-ಜೀವನವು ಪರಿಷ್ಕೃತವಾಗಬೇಕು ಎಂದು ನಿತ್ಯಾನಿತ್ಯಗಳ ಸಮನ್ವಯದಲ್ಲಿ ಶ್ರದ್ಧೆಯನ್ನಿಟ್ಟಿರುವ ಸಂಸ್ಕೃತಿಯೇ ಉತ್ತಮವಾದುದು, ಹೀಗೆಂಬುದು ಇತಿಹಾಸಕಾರರ ಅಭಿಪ್ರಾಯ; ಅತ್ಯಂತ ಶ್ರೇಷ್ಠರಾದ ವೈಜ್ಞಾನಿಕರೂ ಇದೇ ಶ್ರದ್ಧೆಯನ್ನು ಇತ್ತೀಚೆಗೆ ವ್ಯಕ್ತಪಡಿಸುತ್ತಿದ್ದಾರೆ.[1]

ಮಾನವನ ಇತಿಹಾಸದಲ್ಲಿ ಅತ್ಯಂತ ಪ್ರಭಾವಶಾಲಿಯಾದ ಈ ವಿಜ್ಞಾನಯುಗದಲ್ಲಿ ಹಿಂದಿನ ದಾರ್ಶನಿಕರಿಗೆ ದೊರೆಯದ ಅನೇಕ ಸಲಕರಣೆಗಳು ಈಗಿನ ವೈಜ್ಞಾನಿಕರಿಗೆ ದೊರೆತು ಹಿಂದಿನವರೆಗೆ ಅಗೋಚರವಾಗಿದ್ದ ಅನೇಕ ರಹಸ್ಯಕ್ಷೇತ್ರಗಳನ್ನು ಪ್ರವೇಶಮಾಡುವ ಸಹಾಯಸಂಪತ್ತನ್ನು ಇವರು ಹೊಂದಿರುತ್ತಾರೆ. ಅತಿ ಪ್ರಾಚೀನಕಾಲದಿಂದಲೂ ಸಂಗ್ರಹಿಸಲ್ಪಟ್ಟ ಜ್ಞಾನ ಭಾಂಡಾರವನ್ನು ವೈಜ್ಞಾನಿಕರು ಉಪಯೋಗಿಸಿಕೊಂಡು ತಮ್ಮ ಅನ್ವೇಷಣವನ್ನು ಮುಂದುವರಿಸುತ್ತಿದ್ದಾರೆ. "ಭೌತವಾದದ ಪ್ರಭಾವದಿಂದ ಕಲುಷಿತವಾದ ಇಂದಿನ ಈ ಯುಗದಲ್ಲಿ ಶುದ್ಧಸತ್ವಯುತರಾಗಿ ವಿಶ್ವರಹಸ್ಯವನ್ನು ಅನ್ವೇಷಣಮಾಡುವ ವೈಜ್ಞಾನಿಕರೇ ನಿಜವಾದ ಧರ್ಮೋಪಾಸಕರು" ಎಂದು ಪ್ರೊಫೆಸರ್ ಆಲ್ಬರ್ಟ್ ಐನ್‌ಸ್ಟೀನ್ ಹೇಳಿರುವ ಮಾತು ಸತ್ಯವಾದುದು.

ಧರ್ಮೋಪಾಸನೆಗೆ ವೈಜ್ಞಾನಿಕರಿಂದ ಪ್ರತಿಬಂಧಕವುಂಟಾದ ಕಾಲವೂ ಇದ್ದಿತು. ಆಗ ಕೇವಲ ವ್ಯಾವಹಾರಿಕವೂ, ಇಂದ್ರಿಯ ಪ್ರತ್ಯಕ್ಷಕ್ಕೆ ಮಾತ್ರ ವಿಷಯವೂ ಆದ ವಸ್ತುಗಳ ಪರಿಶೋಧನೆಗೆ ಮಾತ್ರ ಲಕ್ಷ್ಯಗೊಟ್ಟ ವಿಜ್ಞಾನವು ಪುರುಷನ ಚರಮಧ್ಯೇಯವನ್ನು ಸಾಧಿಸಲಾರದಾಗಿತ್ತು. ಪರಮಾಣುವಿನ ರಹಸ್ಯದಿಂದ ಹಿಡಿದು ಜ್ಯೋತಿರ್ವತ್ಸರಗಳಾಚೆ ಇರುವ ನಕ್ಷತ್ರರಾಶಿಗಳ ಪರ್ಯಂತ ಶೋಧಿಸಿ ಜ್ಞಾನಜ್ಯೋತಿಯನ್ನು ಬೀರುವ ಶಕ್ತಿಯನ್ನು ಹೊಂದಿ

---

1. "The two worlds of value and action are bound together in the life of the universe, so that the immortal factor of value enters into the active creation of the temporal fact."
A. N. Whitehead, Essays on Science & Philosophy.

ದ್ದರೂ ಕೂಡ ವೈಜ್ಞಾನಿಕರು ವಿಶ್ವವನ್ನು ವಿಭಾಗಮಾಡಿ ಪ್ರತಿಯೊಂದು ವಿಭಾಗದ ರಹಸ್ಯವನ್ನೂ ವೈಯಕ್ತಿಕವಾಗಿ ಅರಿಯಲು ಪ್ರಯತ್ನಿಸಿದರೇ ವಿನಾ ಸರ್ವವಿಧವಾದ ವಿಪರ್ಯಾಸಗಳನ್ನೂ ಸಮೀಚೀನಗೊಳಿಸುವ ಸಾಮರಸ್ಯ ವನ್ನು ಅರಿಯದಾದರು. ಆದರೆ ಈಚೆಗೆ ಅನೇಕ ವಿಧವಾದ ಪರಿವರ್ತನ ವುಂಟಾಗಿದೆ. ಈಚಿನ ಕೆಲವು ವೈಜ್ಞಾನಿಕರು "ಆಧ್ಯಾತ್ಮ ಪ್ರಪಂಚಕ್ಕೆ ಅತಿ ಸಮೀಪದ ಇನ್ನೊಂದು ನೂತನ ಪ್ರಪಂಚದ ಸೀಮೆಯನ್ನು ಮುಟ್ಟಿ ದ್ದಾರೆ[1] ಪ್ರಕೃತಿಯಲ್ಲಿ ಮೂಲತಃ ಒಂದು ಏಕತ್ವವಿದೆ ಎಂಬ ಭಾವನೆಗೆ ಭೌತಶಾಸ್ತ್ರದ ಇತ್ತೀಚಿನ ಸಂಶೋಧನೆಗಳಿಂದ ಸಮರ್ಥನೆಯು ದೊರೆಯು ತ್ತಿದೆ. ಸಕಲ ಜಗತ್ತೂ ಒಂದೇ ಮೂಲವಸ್ತುವಿನಿಂದ ಉತ್ಪನ್ನವಾದುದು. ಆ ಮೂಲವಸ್ತುವು ಮಾತ್ರ ಶಾಶ್ವತವೂ ನಾಶರಹಿತವೂ ಆಗಿರುತ್ತದೆ ಎಂಬ ಶ್ರದ್ಧೆಯೂ ಬೆಳೆಯುತ್ತಿದೆ.[2]

ಯಾವ ಮೂಲತತ್ತ್ವವನ್ನು ಐನ್‌ಸ್ಟೀನ್ ಪಂಡಿತನು "The world stuff" ಎಂದು ಕರೆದಿರುವನೋ ಆ ತತ್ತ್ವವೇ ಜಗತ್ತಿಗೆ ಉಪಾದಾನ ಕಾರಣವೂ ನಿಮಿತ್ತ ಕಾರಣವೂ ಆಗಿರಬೇಕೆಂದು ಕೆಲವರ ಅಭಿಪ್ರಾಯ[3] ಅದು ಚೇತನಾತ್ಮಕವಾಗಿರಬೇಕು ಎಂದು ಕೆಲವು ಮತ.[4] ಹೀಗೆ ಯಾವ ಮೂಲತತ್ತ್ವಚಿಂತನದಿಂದ ಪುರುಷನಿಗೆ ಉತ್ತಮವಾದ ಪುರುಷಾರ್ಥಸಿದ್ಧಿಯಾಗುವುದೋ ಆ ತತ್ತ್ವವೇ ಅನ್ವೇಷಣಕ್ಕೆ ವಿಷಯ. ಆದರೆ, ಈ ಅನ್ವೇಷಣದಲ್ಲಿ ಅನೇಕ ನ್ಯೂನತೆಗಳೂ ಇವೆ. ಪರತತ್ತ್ವದ

1 E. Boodin. "A Revolution in Metcephysies and Science."

2. ". . . every theory rests ultimately on the a priori' assumption that something was already in existence whether free neutrons, energy, quanta or simply the blank inscrutable "world stuff", the cosmic essence of which the multifarious Universe was subsequently wrought."

Einstein quoted by L. Barnett.

3. Josia Royce, "The world and the Individual".

4. The Reality of Nature must behave like the mind of a mathematician.

Jeans; the Mysterious Universe.

ಸಾಕ್ಷಾತ್ಕಾರಕ್ಕೆ ಬೇಕಾದ ಪೂರ್ಣವಾದ ಸಾಮಗ್ರಿಗಳು ಈ ಅನ್ವೇಷಣ ದಲ್ಲಿರುವುದಿಲ್ಲ.

ವಿಶ್ವದ ವೈವಿಧ್ಯದಲ್ಲಿ ಏಕತ್ವವನ್ನರಿತು ಎಲ್ಲವನ್ನೂ ಸಮನ್ವಯ ಮಾಡುವ ಜ್ಞಾನ, ಎಲ್ಲವನ್ನು ಲಯಬದ್ಧವನ್ನಾಗಿ ಮಾಡುವ ಸೌಂದರ್ಯ, ಈ ಸತ್ಯ ಮತ್ತು ಸೌಂದರ್ಯಗಳನ್ನು ನೆಲೆಯಾಗಿ ನಿಲ್ಲಿಸುವ ಧರ್ಮ ಇವುಗಳೇ ಜೀವನದ ಗುರಿಯಾದರೆ ಇಂಥ ಶ್ರೇಯಸ್ಕರವಾದ ಪುರುಷ ಜೀವನಕ್ಕೆ ಪರತತ್ತ್ವವು ಪ್ರೇರಕವಾಗಿರಬೇಕು. ಅದು ಚಿದ್ವಸ್ತುವೂ, ಸಧ್ಯೇಯವೂ ಆಗಿ ಸಚ್ಚಿದಾನಂದ ರೂಪವಾಗಿಯೇ ಇ ರ ಬೇ ಕು. ಚೇತನಾಚೇತನ ರೂಪವಾದ ಸಕಲ ಜಗತ್ತಿಗೂ ಮೂಲಕಾರಣವೂ, ಸಕಲವನ್ನು ಒಳ ಗೊಂಡಿರುವುದೂ, ಅನಂತವೂ ಆದ ಈ ವಿಶ್ವತತ್ತ್ವವನ್ನು ಪ್ಲೋಟಿನಸ್ ಮುಂತಾದ ತತ್ತ್ವಜ್ಞರು ದಿವ್ಯಜ್ಯೋತಿಯೆಂದು[1] ಪೂಜಿಸಿದರು. ಆ ದಿವ್ಯ ಜ್ಯೋತಿಯ ಸಾಕ್ಷಾತ್ಕಾರವು ಬಾಹ್ಯೇಂದ್ರಿಯಗಳಿಂದಾಗಲಿ ಅ ಥ ವಾ ಇಂದ್ರಿಯ ಪ್ರತ್ಯಕ್ಷಕ್ಕೆ ಮಾತ್ರ ಸಹಾಯ ಮಾಡುವ ವಿಜ್ಞಾನದ ಉಪಕರಣ ಗಳಿಂದಾಗಲಿ ಸಾಧ್ಯವಿಲ್ಲ.[2] ಈ ದಿವ್ಯಜ್ಯೋತಿಯ ರೂಪವನ್ನು ಅರಿಯುವ ಮಹದಾ ಕಾಂಕ್ಷೆಯಿಂದ ಕೂಡಿ ಅತ್ಯಂತ ಶ್ರೇಷ್ಠವಾದ ಪ್ರತಿಭಾಶಕ್ತಿಯನ್ನು ಹೊಂದಿದ್ದರೂ ಅತ್ಯುತ್ತಮವಾದ ವೈಜ್ಞಾನಿಕರೂ ಈ ವಿಷಯದಲ್ಲಿ ತಮ್ಮ ನಿಶ್ಶಕ್ತಿಯನ್ನು ವ್ಯಕ್ತಪಡಿಸಿದ್ದಾರೆ ಅನಿರ್ದಿಷ್ಟರಹಸ್ಯ (The Principle of Indeterminacy) ಇತ್ಯಾದಿ ತತ್ತ್ವವನ್ನು ಮಾತ್ರ ಪ್ರತಿಪಾದಿಸುವ

---

1. "The sun, There, is all the stars, and every star again, is all the stars and the Sun".

Plotinus.

2. " . . . . or to admit that in these moods we catch something of the true relation of the world to ourselves—a relation not hinted at in a purely scientific analysis of its contents".

Eddington,
The nature of the Physical world.

ಅಜ್ಞೇಯವಾದಿಗಳೇ (Agnostics) ಆಗಿದ್ದಾರೆ.[1] ಹೀಗೆ ಪರತತ್ತ್ವ ಜ್ಞಾನದ ಆಕಾಂಕ್ಷೆ, ತನ್ನ ಅಸಾಮರ್ಥ್ಯ ಇವೆರಡೂ ಒಟ್ಟಿಗೆ ಅಭಿವ್ಯಕ್ತ ವಾಗುತ್ತಿವೆ.

ಶ್ರೇಯಸ್ಸೇ ಪುರುಷನ ಚರಮಧ್ಯೇಯವಾದರೆ ಪರತತ್ತ್ವಜ್ಞಾನದ ಆಧಾರವಿಲ್ಲದೆ ಶ್ರೇಯಸ್ಸಾಧನೆಯಿಲ್ಲ ಎಂಬ ಅರಿವೂ ಆಗಿರುತ್ತೆ.[2] ಉಳಿದ ತತ್ತ್ವಗಳನ್ನೆಲ್ಲ ಅರಿತು ಈ ಶ್ರೇಯಃಪ್ರದವಾದ ತತ್ತ್ವವನ್ನರಿಯದಿದ್ದರೆ ಅಂಥ ವೈಯಕ್ತಿಕ ಮತ್ತು ವಿಭಾಗಾತ್ಮಕ ಜ್ಞಾನದಿಂದೇನೂ ಪ್ರಯೋಜನವಿಲ್ಲ.[3] ಸಮ್ಯಗ್‌ಜ್ಞಾನದ ಉಪಲಬ್ಧಿಯಾಗಬೇಕಾದರೆ ಧೀಶಕ್ತಿಗಿಂತಲೂ ಮೀರಿದ ಧ್ಯಾನಚಕ್ಷುಸ್ಸಿನ ಸಾಹಾಯ್ಯದಿಂದ ಮಾತ್ರ ಸಾಧ್ಯ.[4] ಯಾವ ಮಹರ್ಷಿಗಳು ಶಮದಮಾದಿಸಾಧನ ಸಂಪದ್ಯುಕ್ತವೂ ಧ್ಯಾನರೂಪವೂ ಆದ ದಿವ್ಯ ತಪಸ್ಸಿನಿಂದ ಶುದ್ಧರಾಗಿ ಜಗನ್ಮೂಲವೂ ವಿಶ್ವಾತ್ಮಕವೂ ಆದ ದಿವ್ಯಜ್ಯೋತಿಯನ್ನು ಪ್ರವೇಶಿಸಲು ಅರ್ಹರೋ ಅವರು ಮಾತ್ರ ಈ ಪರಂಜ್ಯೋತಿಯ ಸಾಕ್ಷಾತ್ಕಾರಕ್ಕೆ ಯೋಗ್ಯರು.

ಇಂಥ ಮಹರ್ಷಿಗಳನ್ನು ಪಡೆದಿರುವ ಮತ್ತು ಪಡೆಯುವ ಭಾಗ್ಯವು ಭಾರತಕ್ಕೆ ಅಧಿಕವಾಗಿರುತ್ತದೆ. "ಇತಿಹಾಸದ ಅರುಣೋದಯದಲ್ಲಿ ಭಾರತದ ಅತ್ಯಂತ ವಿವೇಕಿಗಳಾದ ಮಹರ್ಷಿಗಳು ವೇದಗಳಲ್ಲೂ ಉಪನಿಷತ್ತುಗಳಲ್ಲೂ ನಿಗೂಢವಾದ ಈ ಮಹತ್ತತ್ತ್ವವನ್ನು ಉಪದೇಶಿಸಿರುವು

---

1. "An addition to knowledge is won at the expense of an addition to ignorance. It is hard to empty the well of truth with a leaky bucket"

Heisenberg interpreted by Eddington.

2. "Apart from it, human life is a flash of occasional enjoyments...... a bagatelle of transient experience".

Whitehead.

3. "Science can only be valuable if it is actually a search for truth in which the end can be attained".

E. W. Barness, Scientific Theory and Religion (Gifford Lectures)

4. Science, Religion and Reality. Eddington and Dean Inge.

ದನ್ನು ಪ್ರಪಂಚದ ಯಾವ ಜನಾಂಗವೂ ಮರೆಯಲಾಗುವುದಿಲ್ಲ. ವಿಶ್ರಾಂತಿಯಿಲ್ಲದೆ ತತ್ತ್ವಜ್ಞಾನದಲ್ಲೇ ನಿರತವಾದ ಅವರ ತೀಕ್ಷ್ಣವಾದ ಚಿತ್ತವು ಅಜ್ಞಾನಾಂಧಕಾರಾತ್ಮಕವಾದ ತಮಸ್ಸನ್ನು ಭೇದಿಸಿ ದಿವ್ಯ ತೇಜಸ್ಸನ್ನು ಪ್ರವೇಶಿಸುವುದರಲ್ಲಿಯೇ ಸದಾ ನಿತರವಾಗಿದ್ದಿತು. ಆತ್ಮ, ಪರಮಾತ್ಮ, ಬ್ರಹ್ಮ ಇತ್ಯಾದಿ ನಾನಾವಿಧವಾಗಿ ಕರೆದಿರುವ ಪರತತ್ತ್ವದ ಅನುಸಂಧಾನದಲ್ಲಿಯೇ ಜೀವನದ ಸಕಲ ಪುರುಷಾರ್ಥವೂ ಅಡಗಿರುತ್ತದೆ ಎಂಬುದೇ ಅವರ ಉಪದೇಶ."[1] ಈ ಮೂಲತತ್ತ್ವದ ಜ್ಞಾನಸಂಪಾದನೆ, ವಿಶ್ವಸತ್ಯದ ಸಾಕ್ಷಾತ್ಕಾರ, ವಿಶ್ವಸೌಂದರ್ಯದ ಉಪಾಸನೆ ಇವೇ ಮಾನವನ ಅಂತಿಮಧ್ಯೇಯಗಳಾಗಿದ್ದ ಹೊರತು ಮಾನವನಿಗೆ ವೈಯಕ್ತಿಕವಾಗಿಯಾಗಲಿ ಅಥವಾ ಸಾಮೂಹಿಕವಾಗಿಯಾಗಲಿ ಶ್ರೇಯಸ್ಸಿಲ್ಲವೆಂಬುದೇ ಅವರ ಖಚಿತವಾದ ಮತ.

ವಿಶ್ವಸಾಮರಸ್ಯ ಪ್ರೇರಕವಾದ ಮೂಲತತ್ತ್ವಜ್ಞಾನವೂ ಅದರ ಅನುಸಂಧಾನವೂ ಲೋಕಕಲ್ಯಾಣಕ್ಕೆ ಸಾಧಕವಾದರೆ ಈ ಜ್ಞಾನವನ್ನು ಬೋಧಿಸುವ ಆಕರವಾವುದು ? ವೇದವೇ, ವೇದಾಂತವೇ ಎಂಬ ವಾದವೂ ಈಚೆಗೆ ಅಧಿಕವಾಗಿರುತ್ತದೆ. ಉಪನಿಷತ್ತುಗಳಲ್ಲೂ ಭಗವದ್ಗೀತೆಯಲ್ಲಿಯೂ ಪರತತ್ತ್ವ ಪ್ರತಿಪಾದನವು ಎಷ್ಟು ವಿಧವಾಗಿರುವುದೋ ಆ ಸಕಲ ವಿಧವಾದ ಮತಗಳಿಗೂ ವೇದಗಳಲ್ಲೇ ಮೊದಲನೆಯದಾದ ಋಕ್ಸಂಹಿತೆಯೇ ಆಧಾರ ಎಂದು ತೋರಿಸುವುದೇ ಪ್ರಕೃತ ಲೇಖನದ ಉದ್ದಿಶ್ಯ

## ೨

ವಿಶ್ವಸಾಮರಸ್ಯಪ್ರೇರಕವಾದ ಪರತತ್ತ್ವವನ್ನುಪದೇಶಿಸುವುದೇ ಅಧ್ಯಾತ್ಮವಿದ್ಯೆಯೆನ್ನಿಸಿಕೊಳ್ಳುತ್ತದೆ. ಈ ತತ್ವಾನುಸಂಧಾನಕ್ಕೆ ಸಾಧಕವಾದುದೇ ಉತ್ತಮವಾದ ಕರ್ಮ. ಋಕ್ಸಂಹಿತೆಯು ಈ ತತ್ತ್ವೋಪದೇಶಕವೂ ಅಲ್ಲ. ಮತ್ತು ತತ್ತ್ವಜ್ಞಾನಸಾಧಕವಾದ ಕರ್ಮವನ್ನು ಬೋಧಿಸುವುದೂ ಅಲ್ಲ ಎಂದು ಋಕ್ಸಂಹಿತೆಯಲ್ಲಿ ನ್ಯೂನತೆಯನ್ನು ತೋರಿಸುವ ಎರಡು ವಿಧವಾದ ಆಕ್ಷೇಪವಿರುತ್ತದೆ, ಮೊದಲನೆಯದಾಗಿ :—

1. "The world and the Individual" Josia Royce. Vol. I. P. 141-222.

ಪರತತ್ತ್ವಪ್ರತಿಪಾದಕವಾದ ವಾಕ್ಯಗಳೇ ಋಗ್ವೇದದಲ್ಲಿಲ್ಲ. ಒಂದು ವೇಳೆ ಅಲ್ಲಲ್ಲಿ ಕೆಲವು ವಾಕ್ಯಗಳು ಕಂಡುಬಂದರೂ ಅವೆಲ್ಲವೂ ಪ್ರಕ್ಷಿಪ್ತ ಎಂಬ ಅಭಿಪ್ರಾಯವು ಹಿಂದಿನಿಂದಲೂ ಇರುತ್ತವೆ, ಆಧುನಿಕ ಪಂಡಿತರಲ್ಲಂತೂ ಇದು ನಿರ್ವಿವಾದವಾದ ವಿಷಯ. ರಾಮಮೋಹನರಾಯರು ಬ್ರಿಟಿಷ್ ಮ್ಯೂಸಿಯಮ್ಮಿಗೆ ಬೇಟಿ ಕೊಟ್ಟಾಗ ಡಾ|| ರೋಸೆನ್ ಎಂಬುವರು ಋಕ್ಸಂಹಿತೆಯ ಪ್ರಕಟನಕ್ಕಾಗಿ ಶ್ರಮಿಸುತ್ತಿದ್ದುದನ್ನು ಕಂಡು ಇವರು "ಈ ಅಪ್ರಯೋಜಕವಾದ ಕಾರ್ಯಕ್ಕಾಗಿ ಏತಕ್ಕೆ ಇಷ್ಟು ಕಾಲವನ್ನೂ ಶಕ್ತಿಯನ್ನೂ ಉಪಯೋಗಿಸುತ್ತಿರುವರು" ಎಂದು ತಮ್ಮ ವಿಷಾದಯುಕ್ತವಾದ ಆಶ್ಚರ್ಯವನ್ನು ಸೂಚಿಸಿದರಂತೆ.

'ಈಶಾವಾಸ್ಯಮಿದಂ ಸರ್ವಂ' 'ಅಯಮಾತ್ಮಾ ಬ್ರಹ್ಮ' 'ಸರ್ವಂ ಖಲ್ವಿದಂ ಬ್ರಹ್ಮ' ಇತ್ಯಾದಿ ವಾಕ್ಯಗಳು ಋಕ್ಸಂಹಿತೆಯಲ್ಲಿಲ್ಲ. ಬ್ರಹ್ಮವೇ ಸಕಲ ಪ್ರಪಂಚವೆಂದು ಅವು ಉಪದೇಶಿಸುವುದಿಲ್ಲ. ಅಗ್ನ್ಯಾದಿದೇವತೆಗಳಾರೂ ಪರತತ್ತ್ವವನ್ನು ಪ್ರತಿಬಿಂಬಿಸುವುದಿಲ್ಲ. ಈ ದೇವತೆಗಳೆಲ್ಲರೂ ಉತ್ಪನ್ನರು. ಇಂದ್ರ, ಅಗ್ನಿ, ಮರುತ್ತುಗಳು ಇವರೆಲ್ಲರೂ ಮಾತಾಪಿತೃಗಳಿಂದ ಜನಿಸಿದವರು. ವಿಶ್ವತತ್ತ್ವದ ಒಂದೊಂದಂಶವನ್ನು ಮಾತ್ರ ಪ್ರತಿಬಿಂಬಿಸತಕ್ಕವರು. ಆದುದರಿಂದ ಪೂರ್ಣತತ್ತ್ವವನ್ನು ಪ್ರತಿಬಿಂಬಿಸುವ ದೇವತೆಯಾವುದೂ ಋಕ್ಸಂಹಿತೆಯಲ್ಲಿ ಪ್ರಶಂಸಿತವಾಗಿಲ್ಲ; ಹೀಗೆಂಬುದೇ ಈ ಅಭಿಪ್ರಾಯಗಳ ಸಾರಾಂಶ.

ಆಧುನಿಕರಲ್ಲಿ ಮಾಕ್ಸ್ ಮುಲ್ಲರ್ ಮುಂತಾದ ಕೆಲವು ಆಂಗ್ಲ ಪಂಡಿತರು ಈ ಅಭಿಪ್ರಾಯದ ಮೂಲಪುರುಷರು. ಇದೇ ಅಭಿಪ್ರಾಯವನ್ನು ಬಹಳ ವಿಧೇಯತೆಯಿಂದ ಅನುಮೋದಿಸಿ ಇದೇ ಸರಿಯಾದ ಮತವೆಂದು ತಿಳಿಸುವ ಭಾರತೀಯ ಪಂಡಿತರೂ ಅನೇಕರಿದ್ದಾರೆ.[1] ಇವರೆಲ್ಲರ ಪ್ರಕಾರ ಋಕ್ಸಂಹಿತೆಯು ದೇವತೆಗಳನ್ನು ಉತ್ಪನ್ನ ಮಾಡುವ ಕಾರ್ಖಾನೆ,[2] ಋಷಿಗಳು ತಮ್ಮ ತಮ್ಮ ವೈಯಕ್ತಿಕ ಪ್ರತಿಭೆಗನುಸಾರ

---

1 ಡಾ|| ಎಸ್. ರಾಧಾಕೃಷ್ಣನ್‌ರವರೇ ಈ ಅನುಯಾಯಿಗಳಲ್ಲಿ ಅಧಿಕ ಪ್ರಭಾವಶಾಲಿಗಳು.

2. "The process of God-making in the factory of man's mind cannot be seen so clearly anywhere else as in the Rigveda" S. Radhakrishnan, Indian Philosophy, vol. I. P. 73

ವಾಗಿ ಪ್ರಕೃತಿಯಲ್ಲಿ ಕಂಡು ಬಂದ ಕೆಲವು ಶಕ್ತಿಗಳನ್ನು ದೇವತಾರೂಪ ದಿಂದ ಆರಾಧಿಸಿದರು. ಈ ಆರಾಧನೆಯಲ್ಲಿ ವೈಯಕ್ತಿಕವಾದ ಪ್ರತಿಫಲ ವನ್ನಪೇಕ್ಷಿಸುವ ಕಾಮ್ಯಾಂಶವೇ ಇರುವುದರಿಂದ ಉಪನಿಷದಾದಿಗಳಲ್ಲಿ ಉಪದೇಶಿಸಿರುವ ಪರಬ್ರಹ್ಮೋಪಾಸನೆಯ ಕ್ರಮವಿಲ್ಲ. ಒಂದು ವೇಳೆ ಏಕತತ್ತ್ವಪ್ರತಿಪಾದಕವಾದ ವಾಕ್ಯಗಳು ಅಲ್ಲಲ್ಲಿ ಒಂದೊಂದು ಕಂಡು ಬಂದರೂ ಅವೆಲ್ಲವೂ ಪ್ರಕ್ಷಿಪ್ತ, ದೇವತಾ ಸೃಷ್ಟಿಯಲ್ಲಿ ಇವು ಕೊನೆಯ ಕಾಲದ ಅಭಿಪ್ರಾಯಗಳು, ಎಂದು ನಿಷ್ಕೃಷ್ಟವಾಗಿ ಈ ಪಂಡಿತರು ತಿಳಿಸು ತ್ತಾರೆ. ಇವರ ಪ್ರಕಾರ ಋಕ್ಸಂಹಿತಾವಾಕ್ಯಗಳಲ್ಲಿ ತತ್ತ್ವಪ್ರತಿಪಾದನೆಯ ಮೂರು ಹಂತಗಳನ್ನು ಕಾಣಬಹುದು.[1]

೧) ಪ್ರಕೃತಿತತ್ತ್ವವನ್ನು ಪ್ರತಿಬಿಂಬಿಸುವ ಬಹುದೇವತಾಭಾವ

೨) ನಾನಾ ದೇವತೆಗಳಲ್ಲೂ ಐಕ್ಯವನ್ನು ತೋರಿಸುವ ಏಕ ದೇವತಾಭಾವ

೩) ಏಕತತ್ತ್ವಪ್ರತಿಪಾದಕವಾದ ಅದ್ವೈತದ ಪ್ರಶಂಸೆ

ಈ ಮೂರೂ ತತ್ತ್ವಜ್ಞಾನದ ಮೂರು ವಿಧವಾದ ಬೆಳವಣಿಗೆ ಯನ್ನು ತೋರಿಸುತ್ತವೆ.

ಅದ್ವೈತತತ್ತ್ವವನ್ನು ಪ್ರಶಂಸಿಸುವ ಪ್ರಕರಣಗಳು ಸಂಹಿತಾ ಕಾಲದ ತುತ್ತತುದಿಯ ಭಾಗಕ್ಕೆ ಸೇರಿದವು. ಋಕ್ಸಂಹಿತೆಯ ಆದಿಭಾಗದಲ್ಲಾಗಲಿ ಅಥವಾ ಮಧ್ಯಭಾಗದಲ್ಲಾಗಲಿ ಈ ಭಾವವು ಎಲ್ಲಿಯೂ ಕಾಣುವುದಿಲ್ಲವೆಂಬುದೇ ಅವರ ಖಚಿತವಾದ ಅಭಿಪ್ರಾಯ ; ಎರಡನೆಯ ದಾಗಿ,

೨ ವೇದಗಳೆಲ್ಲವೂ ಕರ್ಮಕಾಂಡಾತ್ಮಕ, ಅವುಗಳಲ್ಲಿರುವುವೆಲ್ಲವೂ ಅಲಂಕಾರಾತ್ಮಕವಾದ ಬಣ್ಣದ ಮಾತುಗಳು ; ಅವು ಕಾಮ್ಯಕರ್ಮವನ್ನು ಮಾತ್ರ ಉಪದೇಶಿಸುತ್ತವೆ. ಈ ಕಾಮ್ಯಕರ್ಮಾಚರಣೆಯಿಂದ ಒಳ್ಳೆಯ

---

1. Three strata of thought can be discerned in the religion of the hymns of the Rigveda, which are

1) Naturalistic Polytheism,
2) Monotheism
3) Monism

S Radhakrishnan, I. P.
Vol. I. P. 72.

ಫಲವು ಸಿಕ್ಕಿದರೂ ಅವು ಅಶಾಶ್ವತ. ಪುನರ್ಜನನಮರಣಗಳು ಅನಿವಾರ್ಯ, ಈ ಕರ್ಮಗಳು ಸಮಾಧಿ ಸಾಧಕವಾಗದೆ ಕೇವಲ ಭೋಗೈಶ್ವರ್ಯಗಳ ಅನ್ವೇಷಣಗಳಲ್ಲಿ ಮಾತ್ರ ಮನಸ್ಸನ್ನು ತಿರುಗಿಸುತ್ತವೆ. ಭೋಗೈಶ್ವರ್ಯಗಳ ಆಧಿಕ್ಯವನ್ನು ಕೊಂಡಾಡುವ ವಾಕ್ಯಗಳು ವ್ಯವಸಾಯಾತ್ಮಿಕಗಳಾಗಿದ್ದು 'ಬ್ರಹ್ಮಶಾಂತಿ'ಯನ್ನು ಒದಗಿಸಲಾರವು. ಇಷ್ಟಾಪೂರ್ತವೇ ಉತ್ತಮವಾದುದೆಂದೂ ಬೇರೆ ಯಾವುದೂ ಶ್ರೇಯಸ್ಕರವಲ್ಲವೆಂದೂ ನಂಬುವ ಮೂಢರು ಸ್ವರ್ಗದಲ್ಲಿದ್ದು ಸುಕೃತವನ್ನೆಲ್ಲ ತಿಂದು ಈ ಹೀನವಾದ ಲೋಕಕ್ಕೆ ಪುನಃ ಬರುತ್ತಾರೆ, ಇತ್ಯಾದಿಯಾಗಿ ವೇದೋಕ್ತವಾದ ಕರ್ಮದ ನ್ಯೂನತೆಯನ್ನು ಅನೇಕ ಕಡೆಗಳಲ್ಲಿ ಹೇಳಿದೆ. ಈ ಅಭಿಪ್ರಾಯವೂ ಬಹಳ ಹಿಂದಿನಿಂದ ಇದೆ.[1]

---

1 ಪ್ಲವಾ ಹ್ಯೇತೇ ಅದೃಢಾ ಯಜ್ಞರೂಪಾ ಅಷ್ಟಾದಶೋಕ್ತಮವರಂ ಯೇಷು ಕರ್ಮ |
ಏತಚ್ಛ್ರೇಯೋ ಯೇಽಭಿನಂದಂತಿ ಮೂಢಾ ಜರಾಮೃತ್ಯುಂ ತೇ ಪುನರೇವಾಪಿ ಯಂತಿ ||

(ಮುಂಡಕ. ೧.೨.೭).

ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನನ್ದನ |
ಬಹುಶಾಖಾಹ್ಯನನ್ತಾಶ್ಚ ಬುದ್ಧಯೋಽವ್ಯವಸಾಯಿನಾಂ ||
ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ |
ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ ||
ಕಾಮಾತ್ಮಾನಃ ಸ್ವರ್ಗಪರಾ ನಾನ್ಯದಸ್ತೀತಿ ವಾದಿನಃ |
ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ ||
ಭೋಗೈಶ್ವರ್ಯ ಪ್ರಸಕ್ತಾನಾಂ ತಯಾಪಹೃತಚೇತಸಾಂ |
ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ||

(ಭ. ಗೀ. ೨. ೪೧-೪೪).

" The simple religion of the Vedic hymns was one of sacrifices. Men's relations with the gods were mechanical a question of give and take, profit and loss".

S. Radhakrishnan,
Indian Philosophy, Vol. I. P. 147

ಆದ್ದರಿಂದ, ಋಕ್ಸಂಹಿತೆ ಪರತತ್ತ್ವೋಪದೇಶಕವೂ ಅಲ್ಲ, ತದುಕ್ತವಾದ ಕರ್ಮಗಳಾಗಲಿ ಅಥವಾ ಉಪಾಸನಾಕ್ರಮಗಳಾಗಲಿ ತತ್ತ್ವಾನುಸಂಧಾನ ಸಾಧಕವೂ ಅಲ್ಲ ಎಂಬುದೇ ಮುಖ್ಯ ತಾತ್ಪರ್ಯ. ಈ ಅಭಿಪ್ರಾಯವು ಅಸಾಧು ಮತ್ತು ಅಹೇತುಕ.

ಋಗ್ವೇದವು ಪರವಿದ್ಯೆಯ ಗುಂಪಿಗೆ ಸೇರತಕ್ಕದ್ದಲ್ಲ ಎಂದು ಮೇಲೆ ವಿವರಿಸಿದಂತೆ ಋಕ್ಸಂಹಿತೆಯ ನ್ಯೂನತೆಯನ್ನು ತಿಳಿಯಪಡಿಸತಕ್ಕವರು ಉಪನಿಷದ್ವಾಕ್ಯಗಳನ್ನು ಉದಾಹರಿಸಿ ತಮ್ಮ ಅಭಿಪ್ರಾಯಕ್ಕೆ ಅವು ಪ್ರಮಾಣವಾಕ್ಯಗಳಾಗಿರುವುವೆಂಬುದನ್ನು ತೋರಿಸುತ್ತಾರೆ. ಇತರ ವೇದಗಳಂತೆಯೇ ಋಗ್ವೇದವೂ ಅಪರವಿದ್ಯೆಗಳ ಗುಂಪಿಗೆ ಸೇರಿರುವುದು ಎಂದು ಮುಂಡಕಾದ್ಯುಪನಿಷತ್ತುಗಳು ತಿಳಿಸುತ್ತವೆ. ಆದುದರಿಂದಲೇ ಸಕಲ ವೇದಗಳನ್ನೂ ಸಕಲ ಶಾಸ್ತ್ರಗಳನ್ನೂ, ಸಕಲ ಕಲೆಗಳನ್ನೂ ಅರಿತ ನಾರದನೂ ಆತ್ಮಜ್ಞಾನವಿಲ್ಲದುದರಿಂದ ಸನತ್ಕುಮಾರನಲ್ಲಿಗೆ ತತ್ತ್ವೋಪದೇಶಕ್ಕಾಗಿ ಬಂದನು ಎಂದು ಛಾಂದೋಗ್ಯ ತಿಳಿಸುತ್ತದೆ[1] "ಮಹಾತ್ಮನೂ ಸರ್ವವ್ಯಾಪಿಯೂ ಆದ ಈ ಪರಮಾತ್ಮನ ಸಾಕ್ಷಾತ್ಕಾರವು ಪ್ರವಚನಾದಿಗಳಿಂದ ದೊರೆಯುವುದಿಲ್ಲ"ವೆಂದು ಕಠವು ಸಾರುತ್ತದೆ.[2] ಹೀಗೆ ಅನೇಕವಾದ ಶ್ರುತಿವಾಕ್ಯಗಳನ್ನೇ ಪ್ರಮಾಣವನ್ನಾಗಿ ಇಟ್ಟುಕೊಂಡು ಈ ಪಂಡಿತರು ತಮ್ಮ ಅಭಿಪ್ರಾಯಗಳನ್ನು ಸಮರ್ಥಿಸಬಹುದು. ಇವು ಸರಿಯಾದ ಆಧಾರಗಳೆಂದೂ, ಈ ಆಧಾರಗಳನ್ನು ಪ್ರಮಾಣವನ್ನಾಗಿಟ್ಟುಕೊಂಡಿರುವ ಮೇಲಿನ ಅಭಿಪ್ರಾಯಗಳು ಸರಿಯಾದವೆಂದೂ ಸ್ಥೂಲವಾದ ದೃಷ್ಟಿಗೆ ತಿಳಿಯುತ್ತದೆ, ಆದರೆ, ಸೂಕ್ಷ್ಮವಾಗಿ ಪರಿಶೀಲಿಸಿದರೆ, ಈ ವಾಕ್ಯಗಳ ತಾತ್ಪರ್ಯವೇ ಬೇರೆಯೆಂದು ಸ್ಪಷ್ಟವಾಗಿ ತಿಳಿಯುತ್ತದೆ.

ಋಗಾದಿವೇದಗಳು ಅಪರವಿದ್ಯೆಯೆಂದು ತಿಳಿಯಲು ಉಪನಿಷತ್ತಿನವರೆಗೆ ಹೋಗಬೇಕಾಗಿಲ್ಲ. ಋಗ್ವೇದವೇ ಇದನ್ನು ಸ್ಪಷ್ಟವಾಗಿ ತಿಳಿಸು

1 "ಋಗ್ವೇದಂ ಭಗವೋಽಧ್ಯೇಮಿ ಯಜುರ್ವೇದಂ ಸಾಮವೇದಂ . . . ....................ಸೋಽಹಂ ಭಗವೋ ಮನ್ತ್ರವಿದೇವಾಸ್ಮಿ ನಾತ್ಮವಿತ್ "
(ಛಾಂದೋಗ್ಯ ಉಪನಿಷತ್ ೭. ೨.೩)

2 " ನಾಯಮಾತ್ಮಾ ಪ್ರವಚನೇನ ಲಭ್ಯಃ "
(ಕಠ. ೧. ೨-೨೩)

ತ್ತದೆ. ಇದು ಕೇವಲ ಅಪರಾವಿದ್ಯೆ ಮಾತ್ರವಲ್ಲ. ಅಪ್ರಯೋಜಕವೆಂದೂ ಋಕ್ಸಂಹಿತಾವಾಕ್ಯಗಳೇ ತಿಳಿಸುತ್ತವೆ. "ಎಲ್ಲಿಯವರೆಗೆ ವೇದಾಧ್ಯಯನವು ಬ್ರಹ್ಮಸಾಕ್ಷಾತ್ಕಾರಕ್ಕೆ ಸಾಧಕವಾಗುವುದಿಲ್ಲವೋ ಅಲ್ಲಿಯವರೆಗೆ ಅದು ಅಪ್ರಯೋಜಕ. ಗುರಿಯನ್ನು ಬಿಟ್ಟು ಕೇವಲ ಸಾಧನವನ್ನೇ ನಂಬಿ ಅದರಲ್ಲೇ ನಿಂತು ಮುಖ್ಯವಾದ ಲಕ್ಷ್ಯವನ್ನೇ ಮರೆತರೆ ಆಗ ವೇದಾಧ್ಯಯನ ವಾಗಲಿ ಅಥವಾ ವೇದೋಕ್ತವಾದ ಕರ್ಮಾಚರಣೆಯಾಗಲಿ ನಿಷ್ಪ್ರ ಯೋಜನ" ಎಂಬ ಅಭಿಪ್ರಾಯದಿಂದಲೇ "ಯಸ್ತನ್ನ ವೇದ ಕಿಮೃಚಾ ಕರಿಷ್ಯತಿ"[1]; ಪರಮವ್ಯೋಮಸ್ಥನೂ, ಅಕ್ಷರಾಖ್ಯನೂ ಆದ ಪರಬ್ರಹ್ಮ ನನ್ನರಿಯದೆ ಋಙ್ಮಂತ್ರಗಳನ್ನು ಪಠಿಸುವುದರಿಂದ ಏನು ಪ್ರಯೋಜನ ಎಂದು ಋಕ್ಸಂಹಿತೆಯಲ್ಲಿಯೇ ಪ್ರಶ್ನಿಸಿದೆ, ಅಲ್ಲದೆ,

"ವೇದಾಧ್ಯಯನವನ್ನು ಮಾತ್ರ ಮಾಡಿ ಅದರ ಅರ್ಥವನ್ನು ತಿಳಿಯ ದಿದ್ದರೆ ಅಂತಹ ಪುರುಷನಿಗೆ ಅಧ್ಯಯನವು ಕೇವಲ ಭಾರವಾಗಿರುತ್ತದೆ. ಅವನು ವೃಥಾ ಭಾರವನ್ನು ಹೊತ್ತಿರುವ ದಡ್ಡ. ಆದರೆ ವೇದಾರ್ಥವನ್ನು ಪೂರ್ಣವಾಗಿ ಅರಿತು ವೇದಾಧ್ಯಯನವನ್ನು ಮಾಡತಕ್ಕವನು ಸಕಲ ವಿಧ ವಾದ ಶ್ರೇಯಸ್ಸುಗಳನ್ನೂ ಪಡೆಯುತ್ತಾನೆ, ಪೂರ್ಣಜ್ಞಾನವು ಅವನ ಎಲ್ಲ ದೋಷಗಳನ್ನೂ ನಾಶಪಡಿಸುತ್ತದೆ, ಅರ್ಥಮಾಡಿಕೊಳ್ಳದೆ ಯಾವ ವಾಕ್ಯ ವನ್ನು ಪಠಿಸಿದರೂ ಅದು ಕೇವಲ ಶಬ್ದಜಾಲವಾಗುತ್ತದೆ. ಆರಿದ ಬೆಂಕಿ ಯಲ್ಲಿ ಹಾಕಿದ ಶುಷ್ಕವಾದ ಕಟ್ಟಿಗೆಯು ಯಾವ ರೀತಿ ಪ್ರಜ್ವಲಿಸು ವುದಿಲ್ಲವೋ ಅದೇ ರೀತಿ ಅರ್ಥಜ್ಞಾನವಿಲ್ಲದ ಚೇತಸ್ಸೂ ಪ್ರಕಾಶಿಸಲ ಸಮರ್ಥವಾಗುತ್ತದೆ"[2] ಎಂದು ಹೇಳಿರುವ ನಿರುಕ್ತಕಾರರ ವಾಕ್ಯಗಳನ್ನು ಸಮರ್ಥಿಸುವ ಋಕ್ಸಂಹಿತೆಯ ಅಭಿಪ್ರಾಯವೂ ಇದೇ ರೀತಿ ಇದೆ.

"ಅರ್ಥಜ್ಞಾನ ರಹಿತವಾದ ವೇದಾಧ್ಯಯನದಿಂದ ಅದರ ಮುಖ್ಯ ಫಲದ ಅಭಾವವಿರುವುದರಿಂದ[3] ಅವನಿಗೆ ಕಣ್ಣಿದ್ದರೂ ಅವನು ಕುರುಡನೇ ಸರಿ. ವೇದವಾಕ್ಯವನ್ನು ಕೇಳುತ್ತಿದ್ದರೂ ಶ್ರವಣಫಲದ ಅಭಾವದಿಂದ

---

1 ಋ. ಸಂ. ೧. ೧೬೪. ೩೯

2 ನಿರುಕ್ತ

3 ವೇದಾಧ್ಯಯನಕ್ಕೂ ಫಲವಿದ್ದೇ ಇದೆಯೆಂಬ ವೈದಿಕರ ಮತಕ್ಕೆ ಇದು ವಿರುದ್ಧವಲ್ಲ.

ಕಿವುಡನಂತೆಯೇ ಆಗುತ್ತಾನೆ. ಆದರೆ, ವೇದಾರ್ಥವನ್ನು ಪೂರ್ಣವಾಗಿ ಅರಿತವನಿಗೆ ದಿವ್ಯಾನಂದವು ಲಭಿಸುತ್ತದೆ. ಅಂಥ ಪುರುಷನಿಗೆ ವಿದ್ವತ್ಸಭೆಗಳಲ್ಲಿ ಗೌರವ ದೊರೆಯುತ್ತದೆ. ದೇವತೆಗಳೂ ಸಂಭಾವಿಸುತ್ತಾರೆ. ಚರ್ಚೆ ನಡೆಯುವ ಸಂದರ್ಭದಲ್ಲಿ ಇವನನ್ನು ಸೋಲಿಸುವವರು ಯಾರೂ ಇರುವುದಿಲ್ಲ. ಆದರೆ, ಅರ್ಥಜ್ಞಾನವಿಲ್ಲದವನು ಫಲಪುಷ್ಪಾದಿಗಳಿಂದ ರಹಿತವಾದ ಕೇವಲ ಶಬ್ದಜಾಲದಲ್ಲಿ ಮುಳುಗುತ್ತ ನಿಷ್ಪ್ರಯೋಜಕವಾದ ಭಾರವನ್ನು ವಹಿಸುತ್ತ ವಿದ್ವಾಂಸರುಗಳ ನಡುವೆ ಅಲೆಯುತ್ತಿರುವನು."[1] ಅಕ್ಷರಾತ್ಮಕವಾದ ಪರಬ್ರಹ್ಮತತ್ತ್ವವನ್ನು ಧೀಮಂತನಾದವನು ತನ್ನ ವಿಮರ್ಶಾತ್ಮಕವೂ ಸಾಕ್ಷಾತ್ಕಾರ ಸಾಧಕವೂ ಆದ ಪ್ರಜ್ಞೆಯಿಂದ ಸಫಲಗೊಳಿಸಬೇಕು. ಒಳಹೊಕ್ಕು ಪ್ರವೇಶಮಾಡದೆ ಕೇವಲ ಶಬ್ದಾಡಂಬರಗಳಲ್ಲಿಯೇ ತೇಲುತ್ತಿರಬಾರದು. ಬರಿಯಶಬ್ದವು ಆಯಾಸಕಾರಿಯಾಗುತ್ತದೆ. ಅರ್ಥಾನುಸಂಧಾನುವಿಲ್ಲದ ಕೇವಲ ವಾಕ್ಕಾದರೆ ಅದು ಪರಬ್ರಹ್ಮವನ್ನು ಸಮೀಪಿಸುವುದೇ ಇಲ್ಲ. ಅಂಥ ಮನಸ್ಸೂ ಪರಬ್ರಹ್ಮವನ್ನು ಸಮೀಪಿಸಲಾರದು.

ಹೀಗೆ ಹೇಳುವುದರಿಂದ, ಪರತತ್ತ್ವಸಾಕ್ಷಾತ್ಕಾರವಾಗಬೇಕಾದರೆ ಅರ್ಥಜ್ಞಾನವಿಲ್ಲದ ವೇದಾಧ್ಯಯನಕ್ಕಿಂತಲೂ ಮೀರಿದುದೂ ಅದಕ್ಕಿಂತಲೂ ಉತ್ತಮವಾದುದೂ ಆದ ಸಾಧನವನ್ನು ಹೊಂದಬೇಕೆಂಬುದರಲ್ಲಿ ತಾತ್ಪರ್ಯವೇ ವಿನಾ ಋಕ್ಸಂಹಿತಾ ವಾಕ್ಯಗಳು ಪರತತ್ತ್ವ ಪ್ರತಿಪಾದಕವಲ್ಲವೆಂಬ ಅಭಿಪ್ರಾಯವು ಎಲ್ಲಿಯೂ ತಿಳಿಯುವುದಿಲ್ಲ. ಹಾಗೆ ತಿಳಿದರೆ ಅದು ಕೇವಲ ತಪ್ಪಾಗುತ್ತದೆ. ಬ್ರಹ್ಮತತ್ತ್ವಪ್ರತಿಪಾದಕವಾದ ಉಪನಿಷತ್ತುಗಳಿಗೆಲ್ಲ ವೇದವೇ ಮೂಲವಾದುದರಿಂದಲೇ ತತ್ತ್ವಶಾಸ್ತ್ರಕ್ಕೆ ವೇದಾಂತವೆಂಬ ಹೆಸರು ಪ್ರಸಿದ್ಧವಾಯಿತು. " ವೇದಾಂತವಿಜ್ಞಾನ ಸುನಿಶ್ಚಿತಾರ್ಥಾಃ " ಎಂಬ ಮುಂಡಕೋಪನಿಷತ್ತಿನ ವಾಕ್ಯಕ್ಕೆ[2] ಇದೇ ತಾತ್ಪರ್ಯ, ಉಪನಿಷತ್ತುಗಳಿಗೆ

---

1 " ಉತ ತ್ವಃ ಪಶ್ಯನ್ನ ದದರ್ಶ ವಾಚಮುತ ತ್ವಃ ಶೃಣ್ವನ್ನ ಶೃಣೋತ್ಯೇನಾಂ |

ಉತೋ ತ್ವಸ್ಮೈ ತನ್ವಂ ವಿ ಸಸ್ರೇ ಜಾಯೇವ ಪತ್ಯ ಉಶತೀ ಸುವಾಸಾಃ ||
ಉತ ತ್ವಂ ಸಖ್ಯೇ ಸ್ಥಿರಪೀತಮಾಹುರ್ನೈನಂ ಹಿನ್ವಂತ್ಯಪಿ ವಾಜಿನೇಷು |
ಅಧೇನ್ವಾ ಚರತಿ ಮಾಯಯೈಷ ವಾಚಂ ಶುಶ್ರುವಾಂ ಅಫಲಾಮಪುಷ್ಪಾಂ ||
(ಋ. ಸಂ. ೧೦-೭೧-೪-೫)

2 ಮುಂಡಕ ೩.೨.೬ ; ಬೃ.ಉ. ೪.೪. ೨೨

ವೇದವೇ ಪ್ರತಿಷ್ಠೆಯೆಂದೂ, ವೇದಗಳ ಆಧಾರದ ಮೇಲೆಯೇ ಉಪನಿಷತ್ತತ್ತ್ವವು ಸ್ಥಾಪಿತವೆಂದೂ ಕೇನವು ತಿಳಿಸುತ್ತದೆ. “ವೇದವೇ ಅಮೃತ; ಉಪನಿಷತ್ತುಗಳು ಈ ದಿವ್ಯಾಮೃತದ ಸಾರ” ಎಂಬುದು ಛಾಂದೋಗ್ಯದ ಅಭಿಪ್ರಾಯ. ಪರಬ್ರಹ್ಮ ಪ್ರತಿಪಾದಕವಾದ ಉಪನಿಷದಾದಿಗಳಿಗೆ ವೇದವೇ ಆಧಾರವೆಂಬುದನ್ನು ಉಪನಿಷದ್ವಾಕ್ಯಗಳೇ ತಿಳಿಸುತ್ತವೆ. ಪರಬ್ರಹ್ಮ-ಸಾಕ್ಷಾತ್ಕಾರಕ್ಕೆ ಮುಖ್ಯಸಾಧನವನ್ನು ಹೊಂದದೆ ಇರುವ ವೇದಾಧ್ಯಯನವಾಗಲಿ, ಅಥವಾ ವೇದೋಕ್ತವಾದ ಕರ್ಮಾಚರಣೆಯಾಗಲಿ ಅಪ್ರಯೋಜಕ ಎಂಬುದೇ ಮೇಲಿನ ಆಕ್ಷೇಪಗಳ ಮುಖ್ಯತಾತ್ಪರ್ಯವು.[1]

ಪರತತ್ತ್ವಜ್ಞಾನವೇ ಪುರುಷನ ಚರಮಧ್ಯೇಯ; ವೇದಾಧ್ಯಯನ ಮತ್ತು ವೇದೋಕ್ತವಾದ ಕರ್ಮ ಇವು ಈ ಜ್ಞಾನದ ಸಾಧನಗಳು; ಇದೇ ಋಕ್ಸಂಹಿತಾವಾಕ್ಯಗಳ ಮುಖ್ಯ ಆಶಯ; “ಯ ಇತ್ತದ್ವಿದುಸ್ತ ಇಮೇ ಸಮಾಸತೇ” ಇತ್ಯಾದಿ ವಾಕ್ಯಗಳ ಸಾರ.

ಏಕತತ್ತ್ವಪ್ರತಿಪಾದಕ ವಾಕ್ಯಗಳೆಲ್ಲವೂ ಅರ್ವಾಚೀನ ಮತ್ತು ಪ್ರಕ್ಷಿಪ್ತ ಎಂಬುದರಲ್ಲಿ ಅರ್ಥವಿಲ್ಲ. ಅದ್ವೈತಪ್ರತಿಪಾದಕವಾಗಿರುವ ಪ್ರಕರಣಗಳೆಲ್ಲವೂ ಅರ್ವಾಚೀನವೆನ್ನುವ ಪಕ್ಷಕ್ಕೆ ಋಕ್ಸಂಹಿತೆಯ ಪ್ರತಿಯೊಂದು ಮಂಡಲವನ್ನೂ, ಪ್ರತಿಯೊಂದು ಅಧ್ಯಾಯವನ್ನೂ, ಪ್ರತಿಯೊಂದು ಸೂಕ್ತವನ್ನೂ ಪ್ರಾಚೀನ ಮತ್ತು ಅರ್ವಾಚೀನ ಎಂದು ಎರಡು ಎರಡು ವಿಭಾಗ ಮಾಡಬೇಕಾಗುತ್ತದೆ. ಕೆಲವೆಡೆಗಳಲ್ಲಿ ಒಂದೇ ಸೂಕ್ತದಲ್ಲಿ ಕೊಂಚಭಾಗ ವೈಯಕ್ತಿಕವಾದ ಇಂದ್ರಾದಿ ದೇವತಾಪ್ರಶಂಸೆಯೂ ಇನ್ನುಳಿದ ಭಾಗವು ಪರತತ್ತ್ವಪ್ರತಿಪಾದಕವೂ ಆಗಿದ್ದರೆ ಆಗ ಅದರಲ್ಲಿ ಕೊಂಚಭಾಗ ಪ್ರಾಚೀನ ಮತ್ತು ಇನ್ನುಳಿದ ಭಾಗ ಅರ್ವಾಚೀನ ಎಂದು ಹೇಳಬೇಕಾಗುತ್ತದೆ.[2] ಅದ್ವೈತ ಪ್ರತಿಪಾದನವು ಋಕ್ಸಂಹಿತೆಯ ಸಕಲ ಭಾಗಗಳಲ್ಲಿಯೂ ಸ್ಪಷ್ಟವಾಗಿಯೇ ಇದೆ.

---

1 ಋ. ಸಂ. ೧. ೧೬೪. ೪೯.

2 **ಉದಾಹರಣೆಗೆ :—**

ಬೃಹದಾರಣ್ಯಕೋಪನಿಷತ್ತಿನ ಮಧುವಿದ್ಯಾ ಪ್ರಕರಣದಲ್ಲಿ ಅದ್ವೈತತತ್ತ್ವವನ್ನು ಪ್ರತಿಪಾದಿಸಲು “ರೂಪಂ ರೂಪಂ ಪ್ರತಿರೂಪೋ ಬಭೂವ” (ಋ. ಸಂ. ೬.೪೭.೧೮) ಎಂಬ ಯಾವ ಮಂತ್ರವನ್ನುದಾಹರಿಸಿ ಯಾವ ತತ್ತ್ವವನ್ನು ಪ್ರಶಂಸಿಸಿ

ದೆಯೋ ಅದೇ ತತ್ತ್ವಪ್ರಶಂಸೆಯು "ರೂಪಂ ರೂಪಂ ಮಘವಾ ಬೋಭವೀತಿ" ಎಂಬ ಮಂತ್ರದಲ್ಲಿರುತ್ತದೆ.

(ಋ. ಸಂ. ೩.೫೩.೮)

ಇದೇ ಸೂಕ್ತದ ಕೊನೆಯ ಭಾಗದಲ್ಲಿ,

"ಬಲಂ ಧೇಹಿ ತನೂಷು ನೋ ಬಲಮಿಂದ್ರಾನಳುತ್ಸು ನಃ |
ಬಲಂ ತೋಕಾಯ ತನಯಾಯ ಜೀವಸೇ ತ್ವಂ ಹಿ ಬಲದಾ ಅಸಿ"

(೩.೫೩.೧೮)

ಎಲೈ ಇಂದ್ರನೇ, ನಮ್ಮ ಶರೀರದಲ್ಲಿ ಬಲವನ್ನು ತುಂಬು. ನಮ್ಮ ಪುತ್ರಪೌತ್ರಾದಿಗಳಲ್ಲೂ, ಪಶ್ವಾದಿಗಳಲ್ಲೂ ಬಲವನ್ನು ತುಂಬು ಇತ್ಯಾದಿಯಾದ ಪ್ರಾರ್ಥನೆಯಿದೆ. ೬ ನೆ ಮಂಡಲದ ೪೭ ನೇ ಸೂಕ್ತದಲ್ಲಿ,

೧೧, ೧೨ ನೇ ಮಂತ್ರಗಳು ಐಹಿಕಸಂಪತ್ತನ್ನು ಪ್ರಾರ್ಥಿಸುವುವಾಗಿವೆ.

"ಹ್ವಯಾಮಿ ಶಕ್ರಂ ಪುರುಹೂತಮಿಂದ್ರಂ ಸ್ವಸ್ತಿ ನೋ ಮಘವಾ ಧಾತ್ವಿಂದ್ರಃ |
ಬಾಧತಾಂ ದ್ವೇಷೋ ಅಭಯಂ ಕೃಣೋತು ಸುವೀರ್ಯಸ್ಯ ಪತಯಃ ಸ್ಯಾಮ ||

(೬.೪೭.೧೧-೧೨)

ಧನವಂತನಾದ ಇಂದ್ರನು ನಮಗೆ ಕಲ್ಯಾಣವನ್ನುಂಟುಮಾಡಲಿ; ನಮ್ಮ ಶತ್ರುಗಳನ್ನು ನಾಶಮಾಡಲಿ; ನಾವು ಉತ್ತಮವಾದ ಶಕ್ತಿ ಸಂಪತ್ತಿಗೆ ಒಡೆಯರಾಗೋಣ ಎಂಬ ಪ್ರಾರ್ಥನೆಯಿರುವ ಇದೇ ಸೂಕ್ತದ ಇನ್ನೊಂದು ಭಾಗದಲ್ಲಿ,

"ರೂಪಂ ರೂಪಂ ಪ್ರತಿರೂಪೋ ಬಭೂವ" ಎಂಬ (೧೮) ತತ್ತ್ವ ಪ್ರತಿಪಾದಕವಾದ ವಾಕ್ಯವಿದೆ.

ಪರಂಜ್ಯೋತಿಯನ್ನು ಪ್ರಶಂಸಿಸುವ "ತತ್ಸವಿತುರ್ವರೇಣ್ಯಂ" ಎಂಬ ಮಂತ್ರವುಳ್ಳ (೩.೬೨) ಸೂಕ್ತದಲ್ಲಿ,

"ಸೋಮೋ ಅಸ್ಮಭ್ಯಂ ದ್ವಿಪದೇ ಚತುಷ್ಪದೇ ಚ ಪಶವೇ |
ಅನಮೀವಾ ಇಷಸ್ಕರತ್"

(೩.೬೨.೧೪)

" ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ "; " ಏಕಂ ಸದ್ವಿಪ್ರಾ ಬಹುಧಾ ವದಂತಿ " ಎಂಬ ವಾಕ್ಯಗಳು ಮೊದಲನೆಯ ಮಂಡಲಕ್ಕೆ ಸೇರಿದವು. " ಮಹದ್ದೇವಾನಾಮಸುರತ್ವಮೇಕಂ " ಎಂಬುವು ಮೂರನೆಯ ಮಂಡಲ. " ಅಹಂ ಮನುಃ " ಎಂಬುದು ನಾಲ್ಕನೆಯದು. " ಯಾದೃಗೇವ ದದೃಶೇ " ಎಂಬ ವಾಕ್ಯವು ಐದನೆಯ ಮಂಡಲ. " ರೂಪಂ ರೂಪಂ ಪ್ರತಿರೂಪೋ ಬಭೂವ " ಎಂಬುದು ಆರನೆಯ ಮಂಡಲ. " ಏಕಂ ವಿ ಬಭೂವ ಸರ್ವಂ " ಎಂಬ ವಾಕ್ಯವು ಎಂಟನೆಯದು. " ಏಕಂ ಸಂತಂ ಬಹುಧಾ ಕಲ್ಪಯಂತಿ " ಎಂಬುದು ಹತ್ತನೆಯ ಮಂಡಲಕ್ಕೆ ಸೇರಿದುದು. ಹೀಗೆ ಮೊದಲಿನಿಂದ ಕೊನೆಯವರೆವಿಗೂ ಏಕತತ್ತ್ವಪ್ರತಿಪಾದಕವಾದ ವಾಕ್ಯಗಳೇ ಇರುತ್ತವೆ. ಅದ್ವೈತತತ್ತ್ವಪ್ರತಿಪಾದನವೇ ಉಪನಿಷತ್ತುಗಳ ವೈಶಿಷ್ಟ್ಯವಾದರೆ, ಇದಕ್ಕೆ ಆಧಾರವು ಋಕ್ಸಂಹಿತೆಯ ವಾಕ್ಯಗಳೇ ಆಗಿವೆ.[1] ಎಲ್ಲೆಲ್ಲಿ ಈ ಪ್ರಕರಣವನ್ನು ಸಂಕ್ಷಿಪ್ತವಾಗಿ ಹೇಳಿದೆಯೋ ಅಲ್ಲೆಲ್ಲ " ತದೇತದೃಚಾಭ್ಯುಕ್ತಂ " ಎಂಬ ಪೀಠಿಕೆಯೊಡನೆ ಆಯಾ ಸಂದರ್ಭಕ್ಕೆ ಆಧಾರ.

---

ನಮ್ಮ ಪುತ್ರಾದಿಗಳಿಗೂ ಪಶ್ವಾದಿಗಳಿಗೂ ಸೋಷಸು ರೋಗರಹಿತವಾದ ಅನ್ನವನ್ನು ಕೊಡಲಿ ಇತ್ಯಾದಿಯಾದ ಪ್ರಾರ್ಥನೆ ಇದೆ. ಮತ್ತು ವಿಶ್ವಸೃಷ್ಟಿಯನ್ನು ವರ್ಣಿಸುವ **ಹಿರಣ್ಯಗರ್ಭ** ಸೂಕ್ತದ ಕೊನೆಯ ಭಾಗದಲ್ಲಿ " ಯತ್ಕಾಮಾಸ್ತೇ ಜುಹುಮಸ್ತನ್ನೋ ಅಸ್ತು ವಯಂ ಸ್ಯಾಮ ಪತಯೋ ರಯೀಣಾಂ||

(೧೦.೧೨೧.೧೦)

ಎಲೈ ಪ್ರಜಾಪತಿಯೇ ನಮ್ಮ ಸುಖಸಂಪತ್ತುಗಳನ್ನಿಚ್ಛಿಸಿ, ನಿನಗೆ ಹವಿಸನ್ನರ್ಪಿಸುತ್ತೇವೆ, ನಮ್ಮ ಇಷ್ಟಾರ್ಥಗಳು ನೆರವೇರಲಿ.—

ಇತ್ಯಾದಿಯಾಗಿ ಅದ್ವೈತತತ್ತ್ವಪ್ರತಿಪಾದಕವಾದ ವಾಕ್ಯಗಳೂ ಇಷ್ಟಾರ್ಥಸಿದ್ಧಿಗಾಗಿ ಇಂದ್ರಾದಿವ್ಯಕ್ತಿಕದೇವತಾ ಪ್ರಾರ್ಥನಾ ಮತ್ತು ಪ್ರಶಂಸೆಗಳೂ ಒಂದೇ ಸೂಕ್ತದಲ್ಲಿರುವ ಸನ್ನಿವೇಶಗಳು ಅನೇಕವಾಗಿವೆ—ಇಂಥ ಸಂದರ್ಭಗಳಲ್ಲಿ ತತ್ತ್ವಪ್ರತಿಪಾದಕವಾದ ವಾಕ್ಯಗಳು ಅರ್ವಾಚೀನ, ಉಳಿದವು ಪ್ರಾಚೀನ ಎಂದು ಹೇಳುವುದು ಬಹಳ ತಪ್ಪಾಗುತ್ತದೆ.

ಭಾಷಾದೃಷ್ಟಿಯಿಂದಲೂ ಈ ವಿಭಾಗಗಳನ್ನು ಕಲ್ಪಿಸುವುದು ಅನುಚಿತ.

1 ಇದಕ್ಕೆ ಅನೇಕ ಸಂದರ್ಭಗಳನ್ನು ಉದಾಹರಿಸಬಹುದು. ಆದರೆ ಪ್ರಕೃತದಲ್ಲಿ ಒಂದೆರಡು ಉದಾಹರಣೆಗಳನ್ನು ಮಾತ್ರ ತೋರಿಸಿದೆ. [P.T.O]

ಭೂತವಾದ ಋಙ್ಮಂತ್ರಗಳನ್ನುದಾಹರಿಸಿ ಉಪನಿಷತ್ತುಗಳಲ್ಲಿ ಸಮರ್ಥಿಸಿದೆ.[1]

ಅಲ್ಲದೆ —

ತತ್ತ್ವಪ್ರತಿಪಾದನವಾಗಲಿ, ತತ್ತ್ವಾನುಸಂಧಾನವಾಗಲಿ, ಅದರ ಅನುಸಂಧಾನ ಫಲವಾದ ವಿಶ್ವಸಾಮರಸ್ಯ ಸಾಕ್ಷಾತ್ಕಾರ ಕ್ರಮವಾಗಲಿ ಋಕ್ಸಂಹಿತೆಯಲ್ಲಿ ಹೇಳದ ಹೊಸ ವಿಷಯಗಳಾವುವೂ ಉಪನಿಷದಾದಿಗಳಲ್ಲಿಲ್ಲ, ಇಲ್ಲಿರುವ ಅಭಿಪ್ರಾಯಗಳನ್ನೇ ಅಲ್ಲಿಯೂ ವಿಸ್ತೃತವಾಗಿಯೂ ಬೇರೆ ರೀತಿಯಲ್ಲಿಯೂ ಹೇಳಿದೆ.

---

| | |
|---|---|
| ೧) ಕಠ, ೧.೧.೧೫, ಲೋಕಾದಿಮಗ್ನಿಂ<br>ಬೃ. ಉ. ೧.೨.೭.<br>ಅಗ್ನಿರರ್ಕಸ್ತಸ್ಯೇಮೇ ಲೋಕಾ<br>ಆತ್ಮಾನಃ | ಋ. ಸಂ. ೨.೨.೯.<br>ತ್ಮನಾ ಶತಿನಂ ಪುರುರೂಪ<br>ಇಷಣಿ |
| ೨) ಬೃ. ಉ. ೧'೨.೩.<br>ಸ ತ್ರೇಧಾತ್ಮಾನಂ ವ್ಯಕುರುತ | ಋ. ಸಂ. ೩. ೨೬ ೭-೮<br>ಅಗ್ನಿರಸ್ಮಿ ಜನ್ಮನಾ |
| ೩) ಬೃ. ಉ. ೧.೨.೫.<br>ತಯಾ ವಾಚಾ ತೇನಾತ್ಮನೇದಗ್ಂ<br>ಸರ್ವಮಸೃಜತ ................<br>ತದದಿತೇರದಿತಿತ್ವಂ | ಋ. ಸಂ. ೧.೮೯.೧೦<br>ಆದಿತಿರ್ದ್ಯೌಃ |
| ಬೃ. ಉ. ೨.೫.೧೬<br>ಇಯಂ ವೈ ತನ್ಮಧು<br>ಬೃ. ಉ. ೨.೫.೧೯ | ಋ. ಸಂ. ೧.೧೧೬-೧೧೭<br>ಋ. ಸಂ. ೬.೪೭.೧೮. |
| ಬೃ. ಉ. ೧.೪.೧೦<br>ಅಹಂ ಮನುಃ | ಋ. ಸಂ. ೪.೨೬<br>ಇತ್ಯಾದಿ |

**ತದೇತದೃಚಾಭ್ಯುಕ್ತಂ** **ಋಙ್ಮನ್ತ್ರ**

೧ ಛಾ. ಉ ೩.೧೨.೫————೧೦.೯೦. (ಏತಾವಾನಸ್ಯ)

೨ ಬೃ. ಉ. ೪.೪ ೨೩——— ಏಷ ನಿತ್ಯಃ

೩ ಮು. ಉ. ೩.೨.೧೦———— ಕ್ರಿಯಾವಂತಃ
೪ ಪ್ರ. ಉ. ೧.೮————ವಿಶ್ವರೂಪಂ ಹರಿಣಂ (ವಿಶ್ವತಶ್ಚಕ್ಷುಃ)

ಇತ್ಯಾದಿ—

**ಸೂಚನೆ** :—ಯಾವುದಾದರೂ ತತ್ತ್ವವನ್ನು ಪ್ರತಿಪಾದಿಸುವಾಗ ಅದನ್ನು ಸಮರ್ಥಿಸಲು ಋಙ್ಮಂತ್ರವನ್ನು ಉದಾಹರಿಸಿದೆ. ಆದರೆ, ಅಲ್ಲಿ ಉದಾಹರಿಸಿರುವ ಮಂತ್ರವು ಈಗ ಉಪಲಬ್ಧವಾಗಿರುವ ಮಂತ್ರಗಳಲ್ಲಿ ಸಿಕ್ಕದಿರಬಹುದು. ವೇದರಾಶಿಯು ಅನಂತ ; ಈಗ ಉಪಲಬ್ಧವಾಗಿರುವುದೇ ಸಕಲ ವೇದಗಳ ಕೊನೆಯೆಂದು ಹೇಳಲಾಗುವುದಿಲ್ಲ. ಅನಂತವಾದ ವೇದ ರಾಶಿಯಲ್ಲಿರುವ ಮಂತ್ರಗಳು ಇಲ್ಲಿ ಉದಾಹೃತವಾಗಿವೆಯೆಂದು ಸಾಧಾರಣವಾಗಿ ಹೇಳಬಹುದು. ಈ ಸಂದರ್ಭದಲ್ಲಿ ಮಾಕ್ಸ್‌ಮುಲ್ಲರ್ ಪಂಡಿತನ ವಾಕ್ಯವು ಈ ವಿಷಯವನ್ನು ಸ್ಪಷ್ಟಪಡಿಸುತ್ತದೆ.

"We have no right to suppose that we have even a hundredth part of the religious and popular poetry that existed during the Vedic age."

Six systems of Indian Philosophy P. 41.

# ಈಶ್ವರತತ್ತ್ವ.

ಉಪನಿಷತ್ತುಗಳಲ್ಲಿರುವ ಆಧ್ಯಾತ್ಮಿಕ ತತ್ತ್ವಚಿಂತನವು ಋಕ್ಸಂಹಿತೆಯಲ್ಲಿ ಕಂಡು ಬರುವುದಿಲ್ಲ; ವಿಶ್ವಸಾಮರಸ್ಯಕ್ಕೆ ಮೂಲವೂ ಪ್ರೇರಕವೂ ಆದ ತತ್ತ್ವಾನ್ವೇಷಣ ಮತ್ತು ತದನುಸಂಧಾನ ಇವು ಇಲ್ಲ ಎಂಬ ಅಭಿಪ್ರಾಯಕ್ಕೆ ಋಕ್ಸಂಹಿತೆಯ ದೇವತಾವೈವಿಧ್ಯವೂ ಪ್ರತ್ಯೇಕಸ್ಥಿತಿಗತಿಗಳುಳ್ಳ ದೇವತೆಗಳ ನಾನಾತ್ವವೂ ಕಾರಣವಾಗಿರುತ್ತೆ. ಈ ವೈವಿಧ್ಯವೇ ಪಾರಮಾರ್ಥಿಕ ಸತ್ಯವೆಂದು ಋಕ್ಸಂಹಿತೆಯ ನಂಬಿಕೆಯೇ, ಎಂಬುದು ಪರಿಶೀಲಿಸಬೇಕಾದ ವಿಷಯ.

ವೈಯಕ್ತಿಕಸ್ಥಿತಿಸ್ವರೂಪಗಳುಳ್ಳ ದೇವತೆಗಳ ಸಂಖ್ಯೆ ಅಪಾರವೆಂಬುದು ನಿರ್ವಿವಾದವಾದ ವಿಷಯ. ಅನೇಕ ಸಂಖ್ಯೆಗಳುಳ್ಳ ದೇವತೆಗಳನ್ನು ಋಕ್ಸಂಹಿತಾವಾಕ್ಯಗಳ ಆಧಾರದ ಮೇಲೆ ಮೂರು ಗುಂಪಾಗಿ ವಿಭಾಗಿಸಬಹುದು.

೧. ದ್ಯುಲೋಕಸ್ಥರು.
೨. ಅಂತರಿಕ್ಷಸ್ಥರು.
೩. ಪೃಥ್ವೀಸ್ಥರು.

ಈ ವಿಭಾಗಗಳೂ ದೇವತೆಗಳ ನಾನಾತ್ವವೂ ಋಕ್ಸಂಹಿತೆಯಲ್ಲಿ ಈ ರೀತಿ ವರ್ಣಿತವಾಗಿದೆ.

" ಎಲೈ ಅಶ್ವಿನೀ ದೇವತೆಗಳೇ, ಮುವತ್ತುಮೂರು ದೇವತೆಗಳೊಡಗೂಡಿ ನಮ್ಮಿಂದ ಅರ್ಪಿತವಾಗುವ ಸೋಮದ ಪಾನಕ್ಕಾಗಿ ಬನ್ನಿರಿ''[1]

" ಎಲೈ ಅಗ್ನಿಯೇ, ಮುವತ್ತುಮೂರು ದೇವತೆಗಳೊಡಗೂಡಿ ನಮ ಯಜ್ಞಕ್ಕೆ ಬಾ "[2]

" ಈ ಮುವತ್ತುಮೂರು ದೇವತೆಗಳಲ್ಲಿ ದ್ಯುಲೋಕಸ್ಥರು ಹನ್ನೊಂದು, ಅಂತರಿಕ್ಷಸ್ಥರು ಹನ್ನೊಂದು, ಪೃಥ್ವೀಸ್ಥರು ಹನ್ನೊಂದು "[3]

---

1 ಆ ನಾಸತ್ಯಾ ತ್ರಿಭಿರೇಕಾದಶೈರಿಹ ದೇವೇಭಿರ್ಯಾತಂ ಮಧುಪೇಯಮಶ್ವಿನಾ | (ಋ. ಸಂ. ೧.೩೪-೧೧)

2 ಶ್ರುಷ್ಟೀವಾನೋ ಹಿ ದಾಶುಷೇ ದೇವಾ ಅಗ್ನೇ ವಿಚೇತಸಃ |
ತಾನ್ರೋಹಿದಶ್ವ ಗಿರ್ವಣಸ್ತ್ರಯಸ್ತ್ರಿಂಶತಮಾ ವಹ || (೧.೪೫-೨)

3 ಯೇ ದೇವಾಸೋ ದಿವ್ಯೇಕಾದಶ ಸ್ಥ ಪೃಥಿವ್ಯಾಮಧ್ಯೇಕಾದಶ ಸ್ಥ |
ಅಪ್ಸುಕ್ಷಿತೋ ಮಹಿನೈಕಾದಶ ಸ್ಥ ತೇ ದೇವಾಸೋ ಯಜ್ಞಮಿಮಂ ಜುಷಧ್ವಂ || (೧.೧೩೯.೧೧)

" ಮೂರುನೂರು ಸಂಖ್ಯೆಯುಳ್ಳವರೂ, ಮೂರು ಸಹಸ್ರ ಸಂಖ್ಯೆಯುಳ್ಳವರೂ, ಮುವತ್ತುಮೂರು ಸಂಖ್ಯೆಯುಳ್ಳವರೂ ಆದ ಸಕಲ ದೇವತೆಗಳೂ ಅಗ್ನಿಯನ್ನು ಪೂಜಿಸಿದ್ದಾರೆ.''[1] ಎಲೈ ಅಗ್ನಿಯೇ, ಸಕಲ ದೇವತೆಗಳೊಡನೆ ಅವರವರ ಪತ್ನಿಯರನ್ನು ಯಜ್ಞಕ್ಕೆ ಕರೆದುಕೊಂಡು ಬಾ ''[2]

ಇತ್ಯಾದಿಯಾಗಿ ದೇವತೆಗಳ ಮತ್ತು ದೇವಪತ್ನಿಯರ ಸಂಖ್ಯಾ ಪ್ರಭೇದಗಳನ್ನು ತಿಳಿಸಿರುವುದಲ್ಲದೆ,

" ಅತ್ಯಧಿಕವಾದ ಗುಣವುಳ್ಳವರೂ, ನ್ಯೂನವಾದ ಗುಣವುಳ್ಳವರೂ, ತರುಣರೂ, ವೃದ್ಧರೂ ಆದ ಸಕಲವಿಧವಾದ ದೇವತೆಗಳಿಗೂ ನಮಸ್ಕಾರ "[3] ವೆಂದು ಹೇಳುವಾಗ ದೇವತೆಗಳಲ್ಲಿ ಸ್ವರೂಪವೈವಿಧ್ಯವಿದೆಯೆಂದೂ ಸ್ಪಷ್ಟವಾಗಿ ತಿಳಿಯುತ್ತದೆ, ಅಲ್ಲದೆ,

ಸ್ವರೂಪದಿಂದಲೇ ದೇವತ್ವದೊಡನೆ ಉತ್ಪನ್ನರೂ ತಮ್ಮ ತಮ್ಮ ಉತ್ತಮವಾದ ಕರ್ಮಗಳಿಂದ ದೇವತ್ವವನ್ನು ಪಡೆದವರೂ ಆದ ದೇವತೆಗಳಿಗೆ ಆಜಾನದೇವಾಃ, ಕರ್ಮದೇವಾಃ ಎಂಬ ವಿಭಾಗಸೂಚಕವಾದ ಹೆಸರುಗಳಿರುತ್ತವೆ. (ವಾ. ಸಂ. ೩೧.೧೭)

ಎರಡನೆಯದಾಗಿ, ದೇವತೆಗಳು ಅಮರರು ಎಂದು ಪ್ರಶಂಸಿತರಾಗಿದ್ದರೂ ಅವರು ಸ್ವಯಂಭುಗಳೆಂದು ಪ್ರಸಿದ್ಧರಾಗಿಲ್ಲ. ಅವರೆಲ್ಲರೂ ಉತ್ಪ

---

1 ತ್ರೀಣಿ ಶತಾ ತ್ರೀ ಸಹಸ್ರಾಣ್ಯಗ್ನಿಂ ತ್ರಿಂಶಚ್ಚ ದೇವಾ ನವ ಚಾಸಪರ್ಯನ್ | (೩.೯.೯)

2 ಪತ್ನೀವತಸ್ತ್ರಿಂಶತಂ ತ್ರೀಂಶ್ಚ ದೇವಾನನುಷ್ವಧಮಾ ವಹ ಮಾದಯಸ್ವ | (೩.೬.೯)

3 ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯೋ ನಮೋ ಯುವಭ್ಯೋ ನಮ ಆಶಿನೇಭ್ಯಃ |
ಯಜಾಮ ದೇವಾನ್ ಯ... ಶಕ್ನವಾಮ ಮಾ ಜ್ಯಾಯಸಃ ಶಂಸಮಾ ವೃಕ್ಷಿ ದೇವಾಃ ||

(೧.೨೭.೧೩)

ನ್ನರು, ಮಾನವಾದಿಗಳಿಗಿರುವಂತೆಯೇ ಅವರಿಗೂ ಮಾತಾಪಿತೃಗಳಿಂದ ಉತ್ಪತ್ತಿಯಿರುತ್ತದೆ.[1]

"ಅದಿತಿಯೆಂದು ನಾಮಾಂತರವುಳ್ಳ ಉಷೋದೇವಿಯೇ ದೇವತೆಗಳಿಗೆಲ್ಲ ನಿರ್ಮಾತ್ರೀ"[2]

"ಬ್ರಹ್ಮಣಸ್ಪತಿಯು ದೇವತೆಗಳಿಗೆ ಪಿತೃ"[3]

ಈ ದೇವತೆಗಳಿಗಿಂತಲೂ ಪೂರ್ವಭಾವಿಯಾಗಿ ಉತ್ಪನ್ನವಾದ ಪದಾರ್ಥಗಳಿವೆ. "ಕೆಲವು ಓಷಧಿಗಳು ದೇವತೆಗಳಿಗಿಂತಲೂ ಮೂರು ಯುಗಗಳ ಮೊದಲು ಉತ್ಪನ್ನವಾದವು"[4] "ವಿಶ್ವಸೃಷ್ಟಿಯು ದೇವತೆಗಳ ಸೃಷ್ಟಿಗಿಂತ ಪ್ರಾಚೀನ, ಆದುದರಿಂದ ಅವರಿಗೂ ವಿಶ್ವಸೃಷ್ಟಿಯ ಮರ್ಮವು ಗೊತ್ತಿಲ್ಲ."[5]

---

1 ವಿಶ್ವಾ ಹಿ ವೋ ನಮಸ್ಯಾನಿ ವಂದ್ಯಾ ನಾಮಾನಿ ದೇವಾ ಉತ ಯಜ್ಞಿಯಾನಿ ವಃ |
ಯೇ ಸ್ಥ ಜಾತಾ ಅದಿತೇರದ್ಭ್ಯಸ್ಪರಿ ಯೇ ಪೃಥಿವ್ಯಾಸ್ತೇ ಮ ಇಹ ಶ್ರುತಾ ಹವಂ ||
(೧೦.೬೩.೨)

"Neither in the Philosophical hymns nor in the mythology are the Gods treated as existing from all eternity to eternity. The Gods are born from Aditi, from the waters and from the earth"

Wallis
Cosmology of the Rigveda.

2 "ಮಾತಾ ದೇವಾನಾಮದಿತೇರನೀಕಂ" (೧.೧೧೩.೧೯)

3 ದೇವಾನಾಂ ಯಃ ಪಿತರಮಾವಿವಾಸತಿ ಶ್ರದ್ಧಾಮನಾ ಹವಿಷಾ ಬ್ರಹ್ಮಣಸ್ಪತಿಂ || (೨.೨೬.೩)

4 ಯಾ ಓಷಧೀಃ ಪೂರ್ವಾ ಜಾತಾ ದೇವೇಭ್ಯಸ್ತ್ರಿಯುಗಂ ಪುರಾ | (೧೦.೯೭.೧).

5 ಕೋ ಅದ್ಧಾ ವೇದ ಕ ಇಹ ಪ್ರ ವೋಚತ್ಕುತ ಆಜಾತಾ ಕುತ ಇಯಂ ವಿಸೃಷ್ಟಿಃ |
ಅರ್ವಾಗ್ದೇವಾ ಅಸ್ಯ ವಿಸರ್ಜನೇನಾಥಾ ಕೋ ವೇದ ಯತ ಆಬಭೂವ||
(೧೦.೧೨೯.೬)

ಈ ದೇವತೆಗಳಲ್ಲಿ ಕೆಲವರು ಪ್ರಾಚೀನರು, ಮತ್ತೆ ಕೆಲವರು ಅರ್ವಾಚೀನರು; ಕೆಲವರು ಅನುಗ್ರಹ ಮಾಡತಕ್ಕವರು, ಉಳಿದವರು ಅವರ ಆಶ್ರಿತರು. ಶಕ್ತಿ ವಿಶೇಷಗಳಿಂದ ಉತ್ತಮವಾದ ದಿವ್ಯತ್ವವನ್ನು ಹೊಂದಿದ ದೇವತೆಗಳು ತಮ್ಮ ಅತಿಶಯವಾದ ಕರ್ಮಗಳಿಂದ ಅಮೃತತ್ವವನ್ನು ಪಡೆಯುತ್ತಾರೆ. ಆದುದರಿಂದ ದೇವತೆಗಳ ಮರಣರಾಹಿತ್ಯವೂ ಸ್ವರೂಪಸಿದ್ಧವಾದುದಲ್ಲ. ಅದು ಕರ್ಮಾಧೀನ, ಅಥವಾ ದೇವತಾಂತರದ ಅನುಗ್ರಹಾಧೀನ. "ಸವಿತೃವು ದೇವತೆಗಳಿಗೆ ಅಮೃತತ್ವವನ್ನು ಅನುಗ್ರಹಿಸುತ್ತಾನೆ"[1] "ಸೋಮಪಾನದಿಂದ ದೇವತೆಗಳಿಗೆ ಅಮೃತತ್ವವು ಲಭಿಸುತ್ತದೆ"[2] "ತಮ್ಮ ತಪಃಕರ್ಮಗಳಿಂದ ದೇವತೆಗಳು ಉತ್ತಮವಾದ ಸ್ಥಾನವನ್ನು ಪಡೆದರು"[3] ಇತ್ಯಾದಿ ವರ್ಣನಗಳಿಂದ, ದೇವತೆಗಳಿಗೆ ಸ್ವರೂಪಸಿದ್ಧವಲ್ಲವ ಮಹತ್ವವು ಅವರವರ ಕರ್ಮಾಧೀನವಾಗಿರುತ್ತದೆಂಬ ವಿಷಯವು ಸ್ಪಷ್ಟವಾಗಿದೆ.

ಹೀಗೆ, ದೇವತೆಗಳ ಸಂಖ್ಯೆ ಅನಂತ, ಅವರೆಲ್ಲರೂ ಕರ್ಮಾಧೀನರು ಮತ್ತು ಅವರ ಮಹತ್ವವು ಸ್ವರೂಪಸಿದ್ಧವಲ್ಲ. ಈ ರೀತಿಯಾದ ರಚನೆಯಲ್ಲಿ ವಿಶ್ವಮೂಲವೂ ಸರ್ವಾಂತರ್ಯಾಮಿಯೂ, ಸರ್ವಗತವೂ ಆದ ತತ್ತ್ವಭಾವನೆಯು ಅಸಂಭವ. ಅಲ್ಲದೆ, ಇಂದ್ರಾದಿ ದೇವತೆಗಳು ಆಯಾ ಲೋಕದ ಸಾರ್ವಭೌಮತ್ವವನ್ನು ಮಾತ್ರ ಹೊಂದಿದವರು ವೈಯಕ್ತಿಕವಾದ ಲೋಕಗಳೂ ಪ್ರತ್ಯೇಕ. ಆಯಾ ಲೋಕಾಧಿಪತಿಗಳೂ ಪ್ರತ್ಯೇಕ. ಅಗ್ನಿಯು ಪೃಥ್ವಿಗೆ ಅಧಿಪತಿ, ವಾಯುವು ಅಂತರಿಕ್ಷಾಧಿಪತಿ, ಮತ್ತು ಆದಿತ್ಯನು ದ್ಯುಲೋಕಾಧಿಪತಿ. ವೈವಿಧ್ಯವನ್ನು ಹೊಂದಿರುವ ದೇವತೆಗಳ ನಡುವೆಯೂ ಬೇರೆ ಬೇರೆಯಾಗಿ ವಿಭಾಗಮಾಡಲ್ಪಟ್ಟಿರುವ ಸಕಲ ಲೋಕಗಳ ನಡುವೆಯೂ 'ಸಾಮರಸ್ಯವನ್ನು ಕಲ್ಪಿಸುವ ಅದ್ವೈತತತ್ತ್ವವಾವುದೂ ಇಲ್ಲ. ಚರಾಚರಾತ್ಮಕವಾಗಿರುವ ಸಕಲ ಜಗತ್ತಿಗೂ ಒಂದೇ ಮೂಲವಿದೆಯೆಂದಾ

---

1 ದೇವೇಭ್ಯೋ ಹಿ ಪ್ರಥಮಂ ಯಜ್ಞಿಯೇಭ್ಯೋಽಮೃತತ್ವಂ ಸುವಸಿ ಭಾಗಮುತ್ತಮಂ |

(೪.೫೪.೨)

2 ತ್ವಾಂ ದೇವಾಸೋ ಅಮೃತಾಯ ಕಂ ಪಪುಃ |

(೯.೧೦೬.೮)

3 "ತಪಸಾ ದೇವಾ ದೇವತಾಮಗ್ರ ಆಯನ್"

(ತೈ.ಬಾ. ೩.೧೨.೩.೧)

ಗಲಿ, ಸಕಲವೂ ಒಂದರಲ್ಲೇ ಐಕ್ಯವನ್ನು ಹೊಂದಿರುತ್ತದೆಯೆಂದಾಗಲಿ ಋಕ್ಸಂಹಿತಾವಾಕ್ಯಗಳು ತಿಳಿಸುವುದಿಲ್ಲ ಎಂದು ಹೇಳುವುದಕ್ಕೆ ಅನೇಕ ಆಧಾರಗಳು ಸಿಕ್ಕುತ್ತವೆ. ಈ ಆಧಾರಗಳಮೇಲೆ ಈಗಿನ ವಿದ್ವಾಂಸರು ತಮ್ಮ ಅಭಿಪ್ರಾಯಗಳನ್ನುಮೇಲೆ ಹೇಳಿದಂತೆ ತಿಳಿಸಿರುತ್ತಾರೆ. ಋಕ್ಸಂಹಿತಾ ವಾಕ್ಯಗಳಿಂದ ಪ್ರತಿಪಾದಿತವಾಗಿರುವ ತತ್ತ್ವವೇನು ಎಂಬುದನ್ನು ಅರ್ಥ ಮಾಡಿಕೊಳ್ಳದಿರುವುದೇ ಈ ಅಭಿಪ್ರಾಯಗಳಿಗೆ ಕಾರಣ.

ಸಕಲ ವೈವಿಧ್ಯಗಳ ನಡುವೆಯೂ ಒಂದು ಸಮಗ್ರತೆಯನ್ನೂ, ಸಾಮ ರಸ್ಯವನ್ನೂ ತೋರಿಸುವ ಅದ್ವೈತ ತತ್ತ್ವಪ್ರತಿಪಾದನವು ಉಪನಿಷತ್ತುಗಳಲ್ಲಿ ಎಲ್ಲೆಲ್ಲಿರುವುದೋ ಅಲ್ಲೆಲ್ಲ ಅನೇಕವಾಗಿ ಋಕ್ಸಂಹಿತಾವಾಕ್ಯಗಳನ್ನೇ ಆಧಾರ ವನ್ನಾಗಿ ತೋರಿಸಿ ಮೂಲತತ್ತ್ವ ಪ್ರತಿಪಾದನವಿರುವುದು ಉಪನಿಷತ್ತು ಗಳನ್ನು ಪಠಿಸಿದವರಿಗೆ ವಿದಿತವಾಗಿದೆ.[1]

" ನೇಶ್ವರಾದನ್ಯಃ ಸಂಸಾರೀ " ಎಂದು ಶ್ರೀ ಶಂಕರಾಚಾರ್ಯರು ಯಾವ ಅದ್ವೈತ ತತ್ತ್ವವನ್ನು ಪ್ರಶಂಸಿಸಿರುವರೋ ಅದೇ ತತ್ತ್ವವು ಸೂರ್ಯ, ಆತ್ಮಾ, ಇಂದ್ರ, ವಿಶ್ವಕರ್ಮಾ, ಪ್ರಜಾಪತಿ, ಅಗ್ನಿ, ಸವಿತೃ ಇತ್ಯಾದ್ಯನೇಕ ನಾಮ ಗಳಿಂದ ವೇದಪ್ರತಿಪಾದ್ಯವಾಗಿರುತ್ತದೆ. ಈ ಅಂಶವು ಋಕ್ಸಂಹಿತೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಅರ್ಥಮಾಡಿಕೊಂಡವರಿಗೆ ತಿಳಿಯುತ್ತದೆ. " ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ" ಎಂಬ ಯಾವ ಸೂತ್ರಾತ್ಮನು ಋಕ್ಸಂ ಹಿತೆಯಲ್ಲಿ ಪ್ರಶಂಸಿತವಾಗಿದೆಯೋ ಅದೇ ತತ್ತ್ವದ ವಿಭೂತಿ ವಿಶೇಷಗಳೇ ಉಳಿದ ದೇವತಾರೂಪಗಳಿಂದ ವರ್ಣಿತವಾಗಿವೆ. ಮೂರು, ಮುವತ್ತು ಮೂರು, ಮೂರು ಸಹಸ್ರ ಇತ್ಯಾದಿ ಸಂಖ್ಯೆಗಳೆಲ್ಲವೂ ವ್ಯಾವಹಾರಿಕ ಮತ್ತು

---

1 " ರೂಪಂ ರೂಪಂ ಪ್ರತಿರೂಪೋ ಬಭೂವ "
(ಬೃ. ಉ. ೨.೫.೧೯)
" ಅಹಂ ಮನುಃ " (ಬೃ. ಉ. ೧.೪.೧೦)
ಇತ್ಯಾದಿ

ಆಯಾ ವಿಭೂತಿ ವಿಶೇಷಗಳನ್ನು ತಿಳಿಸತಕ್ಕವು.[1] ಋಕ್ಸಂಹಿತಾವ್ಯಾಕ್ಯಗಳಲ್ಲಿ ಪ್ರತಿಪಾದಿತವಾಗಿರುವ ತತ್ತ್ವದ ಸ್ವರೂಪವೇನೆಂಬುದನ್ನು ನಿರುಕ್ತಕಾರರೂ, ಬೃಹದ್ದೇವತಾಕಾರರೂ ಸ್ಪಷ್ಟಪಡಿಸಿದ್ದಾರೆ.

" ದೇವತೆಯ ಸಂಖ್ಯೆಯು ಒಂದು, ಅಣಿಮಾದ್ಯೈಶ್ವರ್ಯಗಳನ್ನು ಹೊಂದಿರುವುದರಿಂದಲೂ, ತನ್ನ ಶಕ್ತಿವಿಶೇಷಗಳಿಂದ ನಾನಾ ರೂಪಗಳನ್ನು ಹೊಂದಿರುವುದರಿಂದಲೂ ವಿಶ್ವಕ್ಕೆಲ್ಲ ಒಂದೇ ಆತ್ಮರೂಪವಾದ ಈ ಮೂಲತತ್ತ್ವವು ಬೇರೆಬೇರೆ ಹೆಸರುಗಳಿಂದ ಪ್ರಶಂಸಿತವಾಗಿದೆ. ಉಳಿದ ದೇವತೆಗಳೆಂದು ಯಾರ ಯಾರು ಪ್ರಶಂಸಿತರೋ ಅವರೆಲ್ಲರೂ ಈ ಪರಮಾತ್ಮನ ಅಂಶಗಳೇ.[2] ವೈಯಕ್ತಿಕವಾಗಿ ಪ್ರಶಂಸಿತವಾಗಿರುವ ದೇವತೆಗಳಲ್ಲೂ ಒಬ್ಬರ ಸ್ವರೂಪ

---

1 ಬೃಹದಾರಣ್ಯಕೋಪನಿಷತ್ತಿನಲ್ಲಿ ವಿದಗ್ಧಶಾಕಲ್ಯನಿಗೂ ಯಾಜ್ಞವಲ್ಕ್ಯನಿಗೂ ನಡೆಯುವ ಪ್ರಶ್ನೋತ್ತರ ರೂಪವಾದ ಸಂಭಾಷಣೆಯಲ್ಲಿ ಈ ವಿಷಯವು ನಿಷ್ಕೃಷ್ಟವಾಗಿ ತಿಳಿಯುತ್ತದೆ.

ಪ್ರ. ಯಾಜ್ಞವಲ್ಕ್ಯನೇ, ದೇವತೆಗಳೆಷ್ಟು ಮಂದಿ ?
ಉ. ಮುನ್ನೂರ ಮೂರು ಮತ್ತು ಮೂರುಸಾವಿರದ ಮೂರು.
ಪ್ರ. ದೇವತೆಗಳೆಷ್ಟು ?
ಉ. ಮೂವತ್ತುಮೂರು.
ಪ್ರ. ದೇವತೆಗಳೆಷ್ಟು ?
ಉ. ಮೂರು.
ಪ್ರ. ದೇವತೆಗಳೆಷ್ಟು ?
ಉ. ಎರಡು.
ಪ್ರ. ದೇವತೆಗಳೆಷ್ಟು ?
ಉ. ಒಂದೂವರೆ.
ಪ್ರ. ದೇವತೆಗಳೆಷ್ಟು
ಉ. ಒಂದು
ಪ್ರ. ಒಬ್ಬನೇ ದೇವನು ಯಾರು ?
ಉ. ಅವನೇ ಪ್ರಾಣನು ಅವನೇ ಬ್ರಹ್ಮನು. ಅವನೇ ತ್ಯತ್ತು.

(ಬೃ.ಉ. ೩.೯)

2 " ಸ ಹೋವಾಚ ಮಹಿಮಾನ ಏವೈಷಾಮೇತೇ............"

ಇವೆಲ್ಲವೂ ಮೂವತ್ತುಮೂರು ರೂಪಗಳಲ್ಲಿ ವಿಭಕ್ತವಾಗಿರುವ ಒಂದೇ ತತ್ತ್ವದ ಮಹಿಮಾ ವಿಶೇಷಗಳಲ್ಲದೆ ಬೇರೆಯಲ್ಲ.

(ಬೃ.ಉ. ೩.೯.೨)

ವನ್ನು ಇನ್ನೊಬ್ಬರು ಹೊಂದಿರುತ್ತಾರೆ ಎಂದು ಋಕ್ಸಂಹಿತೆಯ ಮೂಲಾತ್ಮನ ಮಹತ್ವವನ್ನು ವರ್ಣಿಸುತ್ತ ಬೃಹದ್ದೇವತಾಕಾರರು ಈ ರೀತಿ ತಿಳಿಸಿದ್ದಾರೆ.

"ವರ್ತಮಾನಕಾಲ, ಭೂತಕಾಲ ಮತ್ತು ಭವಿಷ್ಯತ್ಕಾಲಗಳಲ್ಲಿರುವ ಸಕಲ ಪ್ರಪಂಚದ ಚರಾಚರಸ್ಥಿತಿಗೂ ಲಯಕ್ಕೂ ಸೂರ್ಯನೊಬ್ಬನೇ ಕಾರಣ. ಈ ಸೂರ್ಯನೇ ಪ್ರಜಾಪತಿವಾಚ್ಯ.[1] "ಅವ್ಯಕ್ತ ಮತ್ತು ವ್ಯಕ್ತಸ್ವರೂಪದಿಂದಿರುವ ಅಸತ್, ಸತ್ ಎಂಬ ತತ್ತ್ವಗಳಿಗೆ ಪ್ರಜಾಪತಿಯೇ ಮೂಲ, ಎಂದರೆ, ಪ್ರಜಾಪತಿಯಿಂದಲೇ ವ್ಯಕ್ತಾವಕ್ತಗಳ ಆವಿರ್ಭಾವ. ಈ ಪ್ರಜಾಪತಿಯೇ ನಾಶರಹಿತನಾದ (ಪರ) ಬ್ರಹ್ಮಶಬ್ದವಾಚ್ಯನಾಗಿದ್ದಾನೆ."[2]

"ಪ್ರಜಾಪತಿರೂಪನಾದ ಸೂರ್ಯನು ತನ್ನ ಸ್ವರೂಪವನ್ನೇ ಮೂರಾಗಿ ವಿಭಾಗಿಸಿಕೊಂಡು ಈ ಲೋಕದಲ್ಲಿ ಸ್ಥಾಪಿತನಾಗಿದ್ದಾನೆ. ಸಕಲ ದೇವತೆಗಳನ್ನೂ ತನ್ನ ರಶ್ಮಿಗಳಲ್ಲಿ ಎಂದರೆ ತನ್ನ ಅಧೀನದಲ್ಲಿಟ್ಟಿದ್ದಾನೆ.[3]

ಈ ಪ್ರಜಾಪತಿಯೇ ಅಥವಾ ಸೂರ್ಯನೇ ಈ ಲೊಕದಲ್ಲಿ ಮೂರು ವಿಧದಲ್ಲಿ ಸ್ಥಾಪಿತನು. ಋಷಿಗಳು ಇವನನ್ನೇ ವೇದವಾಕ್ಯಗಳಿಂದಲೂ, ಸಾಮಗಾನಗಳಿಂದಲೂ ಸ್ತುತಿಸಿ ಆರಾಧಿಸುತ್ತಾರೆ. ಮೂರು ಪ್ರಕಾರವಾಗಿರುವ ಈ ತತ್ತ್ವದ ಮಹಿಮೆಯಿಂದಲೇ ಅವರವರ ನಾನಾವಿಧವಾದ ಮಹಿಮೆಗಳಿಗನುಸಾರ ಅವರಿಗೆ ಅನೇಕ ಹೆಸರುಗಳಿರುತ್ತವೆ. ಈ ದೇವತೆ

---

1 ಭವದ್ಭೂತಸ್ಯ ಭವ್ಯಸ್ಯ ಜಂಗಮಸ್ಥಾವರಸ್ಯ ಚ |
ಅಸ್ಯೈಕೇ ಸೂರ್ಯಮೇವೈಕಂ ಪ್ರಭವಂ ಪ್ರಲಯಂ ವಿದುಃ ||

(ಬೃಹದ್ದೇವತಾ. ೧.೬೧.೬೧)

2 ಅಸತಶ್ಚ ಸತಶ್ಚೈವ ಯೋನಿರೇಷಾ ಪ್ರಜಾಪತಿಃ |
ಯದಕ್ಷರಂ ಚ ವಾಚ್ಯಂ ಚ ಯಥೈತದ್ಬ್ರಹ್ಮ ಶಾಶ್ವತಂ ||

3 ಕೃತ್ವೈಷ ಹಿ ತ್ರಿಧಾತ್ಮಾನಮೇಷು ಲೋಕೇಷು ತಿಷ್ಠತಿ |
ದೇವಾನ್ಯಥಾಯಥಂ ಸರ್ವಾನ್ನಿವೇಶ್ಯ ಸ್ವೇಷು ರಶ್ಮಿಷು ||

ಗಳ ಆಯಾ ಸ್ಥಾನವಿಭಾಗಕ್ಕನುಸಾರವಾಗಿ ಇವರು ವಿಧವಿಧವಾದ ಹೆಸರುಗಳಿಂದ ಪ್ರಸಿದ್ಧಿಯನ್ನು ಪಡೆದಿದ್ದಾರೆ.[1]

ಲೋಕಾಧಿಪತಿಗಳಾದ ಈ ಮೂರು ದೇವತೆಗಳೂ ಬೇರೆ ಬೇರೆಯೆಂದು ಹಿಂದೆ ಹೇಳಿದ್ದರೂ ಅವರ ಆತ್ಮವೆಲ್ಲ ಒಂದೇ ಭಕ್ತಿಭಾವದಿಂದ ಪ್ರಶಂಸಿತವಾಗಿದೆ. ದೇವತೆಗಳ ಆಯುಧಗಳೆಂದು ಎಲ್ಲೆಲ್ಲಿ ಹೇಳಿದೆಯೋ ಅದು ಆಯಾ ದೇವತೆಯ ಅಥವಾ ಆತ್ಮದ ತೇಜಸ್ಸಲ್ಲದೆ ಬೇರೆಯಲ್ಲ. ವಾಹನಗಳ ವಿಷಯದಲ್ಲೂ ಈ ನಿಯಮವೇ ಅನ್ವಯಿಸುತ್ತದೆ.[2] ಎಂದು ವಿಶ್ವೈಕ್ಯವನ್ನು ವಿವರಿಸಿದೆ. "ಜ್ಯೋತಿಷಾಂ ಜ್ಯೋತಿಃ" ಎಂದು ಉಪನಿಷದಾದಿಗಳಲ್ಲಿ ಯಾವ ಮಹತ್ವವು ವರ್ಣಿತವಾಗಿದೆಯೋ ಅದಲ್ಲದೆ ಬೇರೆ ಸ್ವತಂತ್ರವಾದ ಇನ್ನೊಂದು ತತ್ತ್ವವಿಲ್ಲ. ಇಂದ್ರಾದಿ ಸಕಲ ದೇವತೆಗಳೂ ಆದಿತ್ಯಾದಿ ತೇಜೋಮಂಡಲಗಳೂ ಈಜ್ಯೋತಿಯ ಅಂಶವಲ್ಲದೆ ಬೇರೆಯಲ್ಲ ಎಂಬುದೇ ಋಕ್ಸಂಹಿತೆಯ ನಿಷ್ಕೃಷ್ಟವಾದ ಅಭಿಪ್ರಾಯ.[3]

---

1 ಏತದ್ಭೂತೇಷು ಲೋಕೇಷು ಅಗ್ನಿಭೂತಂ ಸ್ಥಿತಂ ತ್ರಿಧಾ |
ಋಷಯೋ ಗೀರ್ಭಿರರ್ಚಂತಿ ವ್ಯಂಜನಂ ನಾಮಭಿಸ್ತ್ರಿಭಿಃ ||
ಏತಾಸಾಮೇವ ಮಾಹಾತ್ಮ್ಯಾನ್ನಾಮಾನ್ಯತ್ವಂ ವಿಧೀಯತೇ |
ತತ್ತತ್ಸ್ಥಾನ ವಿಭಾಗೇನ ತತ್ರ ತತ್ರೇಹ ದೃಶ್ಯತೇ ||
ತಾಸಾಮಿಯಂ ವಿಭೂತಿರ್ಹಿ ನಾಮಾನಿ ಯದನೇಕಶಃ |
ಆಹುಸ್ತಾಸಾಂ ತು ಮಂತ್ರೇಷು ಕವಯೋಽನ್ಯೋನ್ಯಯೋನಿತಾಂ ||
ಯಥಾಸ್ಥಾನಂ ಪ್ರದಿಷ್ಟಾಸ್ತಾ ನಾಮಾನ್ಯತ್ವೇನ ದೇವತಾಃ |
ತದ್ಭಕ್ತಾಸ್ತತ್ಪ್ರಧಾನಾಶ್ಚ ಕೇಚಿದೇವಂ ವದಂತಿ ತಾಃ ||
ಪೃಥಕ್ಪ್ರಸ್ತಾದ್ಯೇ ತೂಕ್ತಾ ಲೋಕಾಧಿಪತಯಸ್ತ್ರಯಃ |

2 ತೇಷಾಮಾತ್ಮೈವ ತತ್ಸರ್ವಂ ಯದ್ಯದ್ಭಕ್ತಿಃ ಪ್ರಕೀರ್ತ್ಯತೇ ||
ತೇಜಸ್ತ್ವೇವಾಯುಧಂ ಪ್ರಾಹುರ್ವಾಹನಂ ಚೈವ ಯಸ್ಯ ಯತ್ |
(ಬೃಹದ್ದೇವತಾ ೧.೬೧–೭೪)

3 "ವಿಶ್ವಮೇಕಂ" "ಇದೇಕಂ" (೩.೫೪.೮ ; ೧೦.೧೨೯.೨)
ಇತ್ಯಾದಿ ಪ್ರಯೋಗಗಳು ವೈವಿಧ್ಯದಲ್ಲಿ ಒಂದು ಸಮಗ್ರತೆ ಮತ್ತು ಸಮವಾಯವನ್ನು ತಿಳಿಸುತ್ತವೆ.—

" ವಿಶ್ವರೂಪನೂ, ಸರ್ವಪ್ರೇರಕನೂ, ವಿಶ್ವಕರ್ಮಾದಿನಾಮ ಪ್ರಭೇದಗಳುಳ್ಳವನೂ ಆದ ತ್ವಷ್ಟೃವು ಸಕಲ ಪ್ರಜೆಗಳನ್ನೂ ಉತ್ಪನ್ನಮಾಡಿದನು. ಅವೆಲ್ಲಕ್ಕೂ ನಾಮರೂಪಗಳನ್ನು ಕೊಟ್ಟನು. ಸಕಲ ಚರಾಚರ ಜಗತ್ತೂ ಅವನಿಗೆ ಸೇರಿದವು. ಅವನು ಬೇರೆಯಲ್ಲ, ಜಗತ್ತು ಬೇರೆಯಲ್ಲ."[1]

" ಎಲೈ ಪ್ರಜಾಪತಿಯೇ, ನೀನಲ್ಲದೆ ಈ ಸಲಕ ಜಗತ್ತನ್ನೂ ಆವರಿಸುವವರು ಇನ್ನಾರೂ ಇಲ್ಲ. ಸಕಲ ಜಗತ್ತೂ ನೀನೇ. ಜಗದತಿರಿಕ್ತನೂ ನೀನೇ "[2]

" ಚರಾಚರಾತ್ಮಕವಾದ ಮತ್ತು ನಿತ್ಯಾನಿತ್ಯಸ್ವರೂಪವುಳ್ಳ ಸಕಲ ಜಗತ್ತಿಗೂ ಪರತತ್ತ್ವವು ಒಂದೇ ಅದ್ವಿತೀಯವಾದ ಪ್ರಭುತ್ವವನ್ನು ಹೊಂದಿರುತ್ತದೆ."[3]

" ಈಶ್ವರನು ಒಬ್ಬನೇ ಅವನು ವಿಶ್ವರೂಪನು. ಯಾವ ರೂಪವನ್ನು ಧರಿಸಿದರೆ ಅದಕ್ಕನುಗುಣವಾದ ಸಂಜ್ಞೆಯಿಂದ ವ್ಯವಹರಿಸಲ್ಪಡುತ್ತಾನೆ."[4]

---

1 ದೇವಸ್ತ್ವಷ್ಟಾ ಸವಿತಾ ವಿಶ್ವರೂಪಃ ಪುಪೋಷ ಪ್ರಜಾಃ ಪುರುಧಾ ಜಜಾನ |
ಇಮಾ ಚ ವಿಶ್ವಾ ಭುವನಾನ್ಯಸ್ಯ ಮಹದ್ದೇವಾನಾಮಸುರತ್ವಮೇಕಂ |
(೩.೫೫.೧೯)

2 ಪ್ರಜಾಪತೇ ನ ತ್ವದೇತಾನ್ಯನ್ಯೋ ವಿಶ್ವಾ ಜಾತಾನಿ ಪರಿ ತಾ ಬಭೂವ |
ಯತ್ಕಾಮಾಸ್ತೇ ಜುಹುಮಸ್ತನ್ನೋ ಅಸ್ತು ವಯಂ ಸ್ಯಾಮ ಪತಯೋ ರಯೀಣಾಂ ||
(೧೦.೧೨೧.೧೦)

3 ವಿಶ್ವೇದೇತೇ ಜನಿಮಾ ಸಂ ವಿವಿಕ್ತೋ ಮಹೋ ದೇವಾನ್ಬಿಭ್ರತೀ ನ ವ್ಯಥೇತೇ |
ಏಜದ್ಧ್ರುವಂ ಪತ್ಯತೇ ವಿಶ್ವಮೇಕಂ ಚರತ್ಪತತ್ರಿ ವಿಷುಣಂ ವಿ ಜಾತಂ ||
(೩.೫೪.೮)

4 ಯಾದೃಗೇವ ದದೃಶೇ ತಾದೃಗುಚ್ಯತೇ ಸಂ ಛಾಯಯಾ ದಧಿರೇ ಸಿಧ್ರಯಾಪ್ಸ್ವಾ |
ಮಹೀಮಸ್ಮಭ್ಯಮುರುಷಾಮುರು ಜ್ರಯೋ ಬೃಹತ್ಸುವೀರಮನಪಚ್ಯುತಂ ಸಹಃ ||
(೫.೪೪.೬)

ಈ ಪ್ರಭಾವದಿಂದಲೇ ಇವನ ರೂಪಾಂತರಗಳಾದ ದೇವತೆಗಳೂ ಅವರವರ ಸ್ವರೂಪಕ್ಕನುಗುಣವಾದ ಸಂಪತ್ತನ್ನು ಲೋಕಕ್ಕೆ ಒದಗಿಸುತ್ತಾರೆ. ಇಂದ್ರಾದಿ ಸಕಲ ಹೆಸರುಗಳೂ ಒಂದೇ ತತ್ತ್ವದ ನಾಮಾಂತರಗಳು. ಆದುದರಿಂದಲೇ,

" ಸುಪರ್ಣಂ ವಿಪ್ರಾಃ ಕವಯೋ ವಚೋಭಿರೇಕಂ ಸಂತಂ ಬಹುಧಾ ಕಲ್ಪಯಂತಿ "

(ಋ. ಸಂ. ೧೦.೧೧೪.೫)

ಎಂದಿರುತ್ತದೆ. ಒಬ್ಬನೇ ಆದ ಪರಮಾತ್ಮನನ್ನು ಕ್ರಾಂತಪ್ರಜ್ಞರಾದ ಋಷಿಗಳು ತಮ್ಮ ಸ್ತುತಿಗಳಿಂದ ಅನೇಕ ಪ್ರಕಾರವಾಗಿ ವರ್ಣಿಸುತ್ತಾರೆ. ಒಂದೇ ತತ್ತ್ವಕ್ಕೆ ಅನೇಕ[1] ಹೆಸರುಗಳನ್ನು ಕೊಟ್ಟು ಪ್ರಶಂಸಿಸುತ್ತಾರೆ. ಆಯಾ ಕರ್ಮಾನುಸಾರವಾಗಿ ಇವನಿಗೆ ಆಯಾ ಸಂಜ್ಞೆಗಳ ವ್ಯವಹಾರವಿರುತ್ತದೆ. ಪಿತಾ, ಜನಿತಾ, ವಿಧಾತಾ ಇತ್ಯಾದ್ಯನೇಕ ವಿಶೇಷಣಗಳು ಇವನ ಜಗದುಪಕಾರಕ ಕ್ರಿಯೆಗಳನ್ನು ತೋರಿಸುತ್ತವೆ. ಇನ್ನು ಕೆಲವು ವಿಶೇಷಣಗಳು ಇವನ ಸರ್ವಾಂತರ್ಯಾಮಿತ್ವವನ್ನು ತಿಳಿಸುತ್ತವೆ.[2]

" ಇವನು ಹಂಸನು. (ಹಂತಿ–ಹೋಗುತ್ತಾನೆ). ಇವನು ಆಕಾಶದಲ್ಲಿ ಆದಿತ್ಯರೂಪದಿಂದ ಇರುವವನಾದುದರಿಂದ ಶುಚಿಷತ್. ವಸುವಾಗಿ

---

1 " ತಾನ್ಯಸ್ಯೈತಾನಿ ಕರ್ಮನಾಮಾನ್ಯೇವ "

(ಬೃ. ಉ. ೧.೪.೭)

2 ಯಜುರಿತ್ಯೇಷ ಹೀದಗ್ಂ ಸರ್ವಂ ಯುನಕ್ತಿ ಸಮಿತಿ ಛಂದೋಗಾ ಏತಸ್ಮಿನ್ನಿದಗ್ಂ ಸರ್ವಂ ಸಮಾನಮುಕ್ಥಮಿತಿ .................... ....................ಯಥಾಯಥೋಪಾಸತೇ ತದೇವ ಭವತಿ "

(ಶತಪಥಬ್ರಾಹ್ಮಣ. ೧೦.೫.೨.೨೦).

ಸಕಲ ವಿಶ್ವವನ್ನೂ ಒಂದಾಗಿ ಯೋಜಿಸುವುದರಿಂದ ಇವನಿಗೆ " ಯಜುಃ " ಎಂದು ಅಧ್ವರ್ಯುಗಳು ನಿರ್ದೇಶಿಸುತ್ತಾರೆ. ಇವನಲ್ಲಿ ಎಲ್ಲವೂ ಅಡಕವಾಗಿದ್ದು ವಿಶ್ವದ ಸಕಲ ವಸ್ತುಗಳೂ ಸಮಾನವಾದ ಸ್ಥಿತಿಯನ್ನು ಹೊಂದಿರುವುದರಿಂದ ಇವನನ್ನು ಸಾಮವೇದಿಗಳು " ಸಾಮನ್ " ಎಂದು ನಿರ್ದೇಶಿಸಿರುತ್ತಾರೆ,....................

........................................................ ಯಾವ ಯಾವ ರೂಪಕ್ರಿಯೆಗಳಿರುವುವೊ ಯಾವ ಯಾವ ಭಾವನೆಯಿಂದ ಇವನನ್ನು ಉಪಾಸಿಸುವರೋ ಅದೇ ಪ್ರಭೇದಗಳಿಗನುಗುಣವಾಗಿಯೂ, ಆಯಾ ವ್ಯಕ್ತಿಗಳ ಜ್ಞಾನ ಶಕ್ತಿಗಳಿಗನುಗುಣವಾಗಿಯೂ ಅನೇಕ ವಿಧವಾಗಿ ನಿರ್ದಿಷ್ಟನಾಗಿದ್ದಾನೆ.

ಎಂದರೆ, ಎಲ್ಲವನ್ನೂ ವ್ಯಾಪಿಸಿಕೊಂಡಿರುವವನಾಗಿ ವಾಯುರೂಪದಿಂದ ಅಂತರಿಕ್ಷಸ್ಥನಾದುದರಿಂದ ಅಂತರಿಕ್ಷಸತ್. ಅಗ್ನಿಯ ರೂಪದಲ್ಲಿ ವೇದಿಯಲ್ಲಿರುವುದರಿಂದ ವೇದಿಷತ್. ಮಾನವರಲ್ಲಿ ಅತಿಥಿಯಾಗಿರುವುದರಿಂದ ದುರೋಣಸತ್ ಮತ್ತು ನೃಷತ್. ಶ್ರೇಷ್ಠವಾದ ದೇವತೆಗಳಲ್ಲಿರುವುದರಿಂದ ವರಸತ್. ಸತ್ಯಾತ್ಮಕನಾಗಿ ಯಜ್ಞಸ್ಥನಾದುದರಿಂದ ಋತಸತ್. ನೀರಿನಲ್ಲಿ ಶಂಖ, ಮೊಸಳೆ, ಇತ್ಯಾದಿರೂಪದಿಂದ ಹುಟ್ಟುವವನಾದುದರಿಂದ ಅಬ್ಜನು. ಭೂಮಿಯಲ್ಲಿ ಭತ್ತ, ರಾಗಿ ಮುಂತಾದ್ದಾಗಿ ಹುಟ್ಟುವುದರಿಂದ ಗೋಜನು. ಪರ್ವತಗಳಲ್ಲಿ ನದಿಯೇ ಮುಂತಾದ ರೂಪಗಳಲ್ಲಿ ಹುಟ್ಟುವುದರಿಂದ ಅದ್ರಿಜನು. ಈ ಎಲ್ಲ ರೂಪಗಳಿಂದ ಇರುತ್ತಿದ್ದರೂ ತನ್ನ ಸತ್ಯಸ್ವರೂಪವನ್ನೇ ಉಳಿಸಿಕೊಂಡಿರುವುದರಿಂದ "ಋತ"ನೆಂದು ಪ್ರಸಿದ್ಧನು; "ಮಹತೋ ಮಹೀಯಾನ್ ಆದುದರಿಂದ 'ಬೃಹತ್'"[1]

ಹೀಗೆ, ಪ್ರಜಾಪತಿಯ ಶಕ್ತಿ ವಿಶೇಷಗಳೇ ಇಂದ್ರಾದಿಗಳೆಂದು ಬೇರೆ ಬೇರೆ ತೋರಿದರೂ ಅಥವಾ ದಿವ್ಯದೃಷ್ಟಿಯುಳ್ಳ ಋಷಿಗಳು ತಮ್ಮ ಜ್ಞಾನಶಕ್ತಿಗಳಿಗನುಸಾರವಾಗಿ ಒಂದೇ ತತ್ತ್ವಕ್ಕೆ ಬೇರೆ ಬೇರೆ ಹೆಸರುಗಳನ್ನು ಕೊಟ್ಟರೂ ಈ ದೇವತಾ ವೈವಿಧ್ಯವು ಕೇವಲ ವ್ಯಾವಹಾರಿಕವೇ ಹೊರತು ಸತ್ಯವಲ್ಲ.

"ಒಬ್ಬನೇ ಆದ ಆದಿತ್ಯನನ್ನು ಇಂದ್ರನೆಂದೂ ಮಿತ್ರನೆಂದೂ ವರುಣನೆಂದೂ ಅಗ್ನಿಯೆಂದೂ ಕರೆಯುತ್ತಾರೆ. ಇವನೇ ದಿವ್ಯಾತ್ಮನೂ ಶ್ರೇಷ್ಠವಾದ ಪತನವುಳ್ಳವನೂ ಆದ ಗುರುತ್ಮಂತನು. ಮೇಧಾವಿಗಳಾದ

---

1 **ಹಂಸಃ ಶುಚಿಷದ್ವಸುರಂತರಿಕ್ಷಸದ್ಧೋತಾ ವೇದಿಷದತಿಥಿರ್ದುರೋಣಸತ್ |**

**ನೃಷದ್ವರಸದೃತಸದ್ವ್ಯೋಮಸದಬ್ಜಾ ಗೋಜಾ ಋತಜಾ ಅದ್ರಿಜಾ ಋತಂ. (ಬೃಹತ್).**

**(ಋ. ಸಂ. ೪.೪೦.೫ ; ಕಠ. ಉ. ೨.೨.೨.)**

**"ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷಃ"**

**ಎಂಬ ಛಾಂದೋಗ್ಯೋಪನಿಷತ್ತಿನ (೧.೬.೬) ವಾಕ್ಯವನ್ನು ಉದಾಹರಿಸಿ, ಆದಿತ್ಯಾಂತರ್ಗತವೂ, ಹಿರಣ್ಮಯಪುರುಷನೆಂದು ಪ್ರಶಂಸಿತವೂ ಆದ ಪರಬ್ರಹ್ಮತತ್ತ್ವವೇ ಈ ಮಂತ್ರದಲ್ಲಿ ಸ್ತುತವಾಗಿದೆಯೆಂದು ಸಾಯಣರು ವಿವರಿಸಿದ್ದಾರೆ.**

ಋಷಿಗಳು ಒಬ್ಬನೇ ಆದ ಪರಮಾತ್ಮನನ್ನು ಅಗ್ನಿಯೆಂದೂ, ಯಮನೆಂದೂ, ಮಾತರಿಶ್ವನೆಂದೂ ನಾನಾವಿಧವಾಗಿ ಕರೆಯುತ್ತಾರೆ"[1]

" ದ್ಯಾವಾಪೃಥಿವಿಗಳನ್ನು ಸೃಜಿಸಿದ ದೇವತೆಗಳೇ ವಿಶ್ವದಲ್ಲಿ ಅಧಿಕವಾದ ತತ್ತ್ವಗಳಲ್ಲ, ಅವಕ್ಕಿಂತಲೂ ಮೀರಿದ ತತ್ತ್ವ ಇನ್ನೊಂದು ಇದೆ. ಜಗತ್ತಿನ ಉತ್ಪತ್ತಿಗೆ ಮೂಲಕಾರಣವಾದ ಹಿರಣ್ಯಗರ್ಭರೂಪವಾದ ಪರತತ್ತ್ವವು ಇವೆಲ್ಲಕ್ಕಿಂತಲೂ ಅಧಿಕ. ಅದು ದ್ಯಾವಾಪೃಥಿವಿಗಳನ್ನೂ ಸಕಲ ದೇವತೆಗಳನ್ನೂ ಧರಿಸಿ ಪೋಷಿಸುತ್ತದೆ."[2]

ಸಕಲ ಜಗತ್ತೂ ಈ ಮೂಲತತ್ತ್ವದಲ್ಲಿ ಓತಪ್ರೋತ ( ಹಾಸುಹೊಕ್ಕು )ಗಳಂತೆ ಸೇರಿಕೊಂಡಿವೆ. " ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ"[3] ಎಂಬ ಯಾವ ಸೂತ್ರಾತ್ಮನನ್ನು ವರ್ಣಿಸಿದೆಯೋ ಆ ಸೂತ್ರಾತ್ಮನನ್ನು ಜೇಡರ ಹುಳುವಿಗೂ ಅವನಿಂದ ಸೃಷ್ಟವಾದ ಜಗತ್ತನ್ನು ಊರ್ಣೆಗೂ ಹೋಲಿಸಿದೆ. ಯಾವ ರೀತಿ ಊರ್ಣನಾಭಿಯು ತನ್ನ ಸೂತ್ರವನ್ನು ವಿಸ್ತರಿಸಿ ಅನಂತರ ಅದನ್ನು ಹಿಂದಕ್ಕೆ ತೆಗೆದುಕೊಳ್ಳುವುದೋ ಹಾಗೆಯೇ ಪ್ರಜಾಪತಿಯು ಜಗತ್ತನ್ನು ವಿಸ್ತರಿಸಿ ಪುನಃ ತನ್ನಲ್ಲೇ ಲೀನಮಾಡಿಕೊಳ್ಳುತ್ತಾನೆ. ತನ್ನಿಂದಲೇ ಉತ್ಪನ್ನವಾದ ಮತ್ತು ತನ್ನಿಂದಲೇ ಪೋಷಿತವಾದ ಸಕಲವನ್ನೂ ಕ್ಷಯಕಾಲದಲ್ಲಿ ತಾನೇ ಭಕ್ಷಿಸುವುದರಿಂದ (ತನ್ನಲ್ಲೇ ಲೀನಮಾಡಿಕೊಳ್ಳುವುದರಿಂದ) ಪ್ರಜಾಪತಿಗೆ 'ಅದಿತಿ' ಯೆಂಬ ವಿಶೇಷಣವು

---

1 ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಃ ಸ ಸುಪರ್ಣೋ ಗರುತ್ಮಾನ್ |
ಏಕಂ ಸದ್ವಿಪ್ರಾ ಬಹುಧಾ ವದನ್ತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ || (೧.೧೬೪.೪೬)

cf ೧೦.೧೧೪.೪-೫ ; ೧೦.೫. ೧-೩. ಇತ್ಯಾದಿ

2 ನೈತಾವದೇನಾ ಪರೋ ಅನ್ಯದಸ್ತ್ಯುಕ್ಷಾ ಸ ದ್ಯಾವಾಪೃಥಿವೀ ಬಿಭರ್ತಿ |
ತ್ವಚಂ ಪವಿತ್ರಂ ಕೃಣುತ ಸ್ವಧಾವಾನ್ಯದೀಂ ಸೂರ್ಯಂ ನ ಹರಿತೋ ವಹಂತಿ || (೧೦.೩೧.೮)

3 ಋ. ಸಂ. ೧.೧೧೫.೧
ಕತ್ಯಗ್ನಯಃ ಕತಿ ಸೂರ್ಯಾಸಃ ಕತ್ಯುಷಾಸಃ ಕತ್ಯುಸ್ವಿದಾಪಃ |
(೧೦.೮೮.೧೮)

ಅಗ್ನಿಗಳ ಸಂಖ್ಯೆಯೆಷ್ಟು ? ಸೂರ್ಯರು ಎಷ್ಟು ಮಂದಿ ? ಎಷ್ಟು ಜನ ಉಷಸ್ಸುಗಳು ಇತ್ಯಾದಿಯಾಗಿ ಪ್ರಶ್ನೆ. ಇದಕ್ಕೆ 'ಉತ್ತರವಾಗಿ,

ಪ್ರಸಿದ್ಧವಾಗಿದೆ.[1] “ ಈ ಅದಿತಿಯೇ ದ್ಯುಲೋಕವು. ಅಂತರಿಕ್ಷ. ಅದಿತಿಯೇ ಜಗನ್ನಿರ್ಮಾತ್ರೀ. ಜಗತ್ಪಾಲಕ[2] ದೇವಮಾನವಾದಿಗಳೆಲ್ಲ ಒಳ

---

ಏಕ ಏವಾಗ್ನಿರ್ಬಹುಧಾ ಸಮಿದ್ಧ ಏಕಃ ಸೂರ್ಯೋ ವಿಶ್ವಮನು ಪ್ರಭೂತಃ |
ಏಕೈವೋಷಾಃ ಸರ್ವಮಿದಂ ವಿ ಭಾತ್ಯೇಕಂ ವಾ ಇದಗ್ಂ ವಿ ಬಭೂವ
ಸರ್ವಂ || (೮.೫೮.೨)

ಅಗ್ನಿಯು ಒಬ್ಬನೇ ಅವನೇ ಅನೇಕ ರೂಪಗಳಲ್ಲಿ ಪ್ರಜ್ವಲಿತನಾಗುತ್ತಾನೆ. ಸಕಲ ವಿಶ್ವವನ್ನೂ ಬೆಳಗತಕ್ಕ ಸೂರ್ಯನು ಒಬ್ಬನೇ, ಉಷಸ್ಸಿನ ಸಂಖ್ಯೆಯೂ ಒಂದೇ. ಯಾವ ಮೂಲತತ್ತ್ವದಿಂದ ಇವು ಉತ್ಪನ್ನವೋ ಅದು ಒಂದಲ್ಲದೇ ಬೇರೆಯಲ್ಲ ಎಂದಿರುತ್ತದೆ.

1 “ ತಸ್ಯ ವಾಮಸ್ಯ ಪಲಿತಸ್ಯ ಹೋತುಃ ” ಎಂಬ ವಿಶೇಷಣಗಳು ಪ್ರಜಾಪತಿಯ ಸ್ವರೂಪವನ್ನು ತಿಳಿಸುತ್ತವೆ.

(ಋ. ಸಂ. ೧.೧೬೪.೧)

**ವಾಮಸ್ಯ**—ವಿಶ್ವಸ್ಯ ಉದ್ಗರಿತುಃ ಸ್ರಷ್ಟುಃ || ಬ್ರಹ್ಮಾಂಡರೂಪದಲ್ಲಿ ವಿಶ್ವವನ್ನೆಲ್ಲ ಪ್ರಕಾಶಪಡಿಸಿ ಉತ್ಪನ್ನಮಾಡಿದ,

**ಪಲಿತಸ್ಯ**— ಸ್ವಸೃಷ್ಟ ಜಗತ್ಪಾಲನಸ್ಯ || ತಾನು ಉತ್ಪನ್ನಮಾಡಿದ ಜಗತ್ತನ್ನು ತಾನೇ ಪಾಲಿಸಲು ಸಮರ್ಥನಾದ,

**ಹೋತುಃ**—ಆದಾತುಃ, ಸೃಷ್ಟಿನ್ ಸಂಹರ್ತುಃ | ತನ್ನಲ್ಲೇ ಎಲ್ಲವನ್ನೂ ಲಯಮಾಡಿಕೊಳ್ಳತಕ್ಕ ಎಂದು ಈ ಮೂರು ಪದಗಳ ತಾತ್ಪರ್ಯವನ್ನೂ ಸಾಯಣರು ವಿವರಿಸಿದ್ದಾರೆ.

“ ಯದ್ಯದೇವಾಸೃಜತ ತತ್ತದತ್ತುಮಧ್ರಿಯತ ಸರ್ವಂ ವಾ ಅತ್ತೀತಿ ತದದಿತೇರದಿತಿತ್ವಂ ಸರ್ವಸ್ಯೈತಸ್ಯಾತ್ತಾ ಭವತಿ ಸರ್ವಮಸ್ಯಾನ್ನಂ ಭವತಿ ಯ ಏವಮೇತದದಿತೇರದಿತಿತ್ವಂ ವೇದ ”.

(ಬೃ. ಉ. ೧.೨.೫)

2 “ ಅದಿತಿರ್ದ್ಯೌರದಿತಿರಂತರಿಕ್ಷಂ ಅದಿತಿರ್ಮಾತಾ ಸ ಪಿತಾ ಸ ಪುತ್ರಃ |
ಅದಿತಿರ್ಜಾತಮದಿತಿರ್ಜನಿತ್ವಂ ವಿಶ್ವೇ ದೇವಾ ಅದಿತಿಃ ಪಂಚಜನಾಃ ||

(ಋ. ಸಂ. ೧.೮೯.೧೦)

**ಅದಿತಿ**—ನಿಘಂಟುವಿನಲ್ಲಿ **ಅದಿತಿ** ಪದವನ್ನು (೧) **ಪೃಥ್ವೀ** ನಾಮಗಳಲ್ಲೂ (೨) **ವಾಙ್ನಾಮಗಳಲ್ಲೂ** (೩) **ಗೋ** ನಾಮಗಳಲ್ಲೂ (೪) **ದ್ಯಾವಾ**

**ಪೃಥಿವೀ** ನಾಮಗಳಲ್ಲೂ ಸೇರಿಸಿ ಪಠಿಸಿದೆ. (ನಿರುಕ್ತ. ೧-೧ ; ೧-೧೧ ; ೨.೧೧; ೪-೪೦). ಅಂತರಿಕ್ಷಸ್ಥರಾದ ದೇವತೆಗಳ ವಿಷಯವನ್ನು ವಿವರಿಸುವಾಗ **ಅದಿತಿಗೆ** ಸ್ತ್ರೀದೇವತೆಗಳಲ್ಲಿ ಅಗ್ರಸ್ಥಾನವನ್ನು ಕೊಟ್ಟಿದೆ. (ನಿ. ೧೧-೨೨). **ಅದೀನಾ ದೇವಮಾತಾ** ಎಂಬ ನಿರುಕ್ತದ ನಿರ್ವಚನವು ಅದಿತಿಯು ದೇವಮಾತೃತ್ವವನ್ನು ತಿಳಿಸುತ್ತದೆ. ಈ ದೇವತೆಯು ಸ್ವರೂಪವನ್ನು ವಿವರಿಸುವ ಸಂದರ್ಭದಲ್ಲಿ ಕೆಲವು ಭಿನ್ನಾಭಿಪ್ರಾಯಗಳೂ ಇರುತ್ತವೆ.

**ಅದಿತಿ** ಎಂಬ ಪದಕ್ಕೆ ಅಲಂಘ್ಯ, ಅನತಿಕ್ರಮಣೀಯ, ಅಕ್ಷಯ, ಪ್ರಮಾಣಾತೀತ ಎಂಬರ್ಥಗಳು ಸಹಜವಾಗಿವೆ. ನಿಯಮಿತವಾದ ಸೀಮಾಪ್ರದೇಶಗಳುಳ್ಳ ದ್ಯಾವಾಪೃಥಿವಿಗಳಿಗಿಂತಲೂ ಅಧಿಕವಾದ ಮಹತ್ವವನ್ನು ಹೊಂದಿ, ಮಾನಾತೀತವಾದ ವಿಸ್ತೃತಿಯನ್ನು ಹೊಂದಿ ಅನಂತತ್ವವನ್ನು ಪ್ರತಿಬಿಂಬಿಸುವ ದೇವತಾ ವಿಶೇಷವೆಂದು ಅನೇಕರ ಅಭಿಪ್ರಾಯ. ಈ ರೂಪದಲ್ಲಿಯೇ ಈ ದೇವತೆಯು ಋಗಾದಿ ಶ್ರುತಿ ವಾಕ್ಯಗಳಲ್ಲಿ ಪ್ರಶಂಸಿತಳಾಗಿದ್ದಾಳೆ.

“ಮಾನಾತೀತವೂ, ಲೌಕಿಕಪ್ರತ್ಯಕ್ಷಕ್ಕೆ ಅತೀತವೂ ಆದ ನಿತ್ಯತತ್ತ್ವವನ್ನು ಪ್ರತಿಬಿಂಬಿಸುವುದರಿಂದಲೇ ವೈದಿಕ ಸಾಹಿತ್ಯದಲ್ಲಿ ಈ ದೇವತೆಯ ನಿರ್ದಿಷ್ಟವಾದ ರೂಪವು ವರ್ಣಿತವಾಗಿರಲು ಸಾಧ್ಯವಿಲ್ಲ. ದಿವ್ಯತೇಜೋರೂಪರಾದ ಆದಿತ್ಯರನ್ನು ಧಾರಣಮಾಡತಕ್ಕದ್ದೂ, ಆದಿತ್ಯರಿಂದಲೇ ಧರಿಸಲ್ಪಡತಕ್ಕದ್ದೂ ಆದ ಈ ನಿತ್ಯತತ್ತ್ವವು ಆದಿತ್ಯರಿಗೆಲ್ಲ ಆಶ್ರಯಭೂತವಾಗಿದೆ. ಇದೇ ದಿವ್ಯಜ್ಯೋತಿಯು ಅವರೆಲ್ಲರ ಸಾರಭೂತ” ಎಂದು Roth ಎಂಬ ಪಂಡಿತನ ಅಭಿಪ್ರಾಯ.

(Journal of the German Oriental Society. Vol. 6 P. 68)

“ಅದಿತಿರ್ದ್ಯೌಃ” (ಋ. ಸಂ. ೧.೮೯.೧೦) ಇತ್ಯಾದಿ ಮಂತ್ರಗಳು ವಿಶ್ವವ್ಯಾಪಿಕಳಾದ ಅದಿತಿಯನ್ನು ಪ್ರಶಂಸಿಸುತ್ತವೆ. ದೈವೀ ಮತ್ತು ಮಾನುಷ ಎಂಬ ಯಾವ ಪ್ರಜಾಭೇದಗಳುಂಟೋ, ದ್ಯಾವಾಪೃಥಿವಿಗಳಿಂದ ಅಡಕವಾದ ಯಾವ ಯಾವ ತತ್ತ್ವಗಳುಂಟೋ, ಭೂತ, ಭವಿಷ್ಯತ್ತು ಮತ್ತು ವರ್ತಮಾನಗಳನ್ನೆಲ್ಲ ಒಳಗೊಂಡ ಯಾವ ಕಾಲತತ್ತ್ವವುಂಟೋ ಅವೆಲ್ಲಕ್ಕೂ ಅದಿತಿಯೇ ಮೂಲಳು, ಅವಳೇ ಸರ್ವಾತ್ಮಳು.

(ಅದಿತಿ ಮತ್ತು ದಕ್ಷ ಇವರ ಸಂಬಂಧವಿಶೇಷವನ್ನು ಮುಂದೆ ತಿಳಿಸಲಾಗುತ್ತದೆ).

ಗೊಂಡ ಪಂಚಜನಾತ್ಮಕ "[1]

ಸೃಷ್ಟವಾದ ಜಗತ್ತಿನಲ್ಲಿ ಇವನೇ ಅಗ್ನಿಸ್ವರೂಪದಲ್ಲಿ ದಹಿಸುತ್ತಾನೆ. ಆದಿತ್ಯರೂಪದಲ್ಲಿ ಪ್ರಕಾಶಿಸುತ್ತಾನೆ. ಇವನೇ ಪರ್ಜನ್ಯನು, ಇವನೇ ವಾಯುವು. " ಸದ್ರೂಪನು. ಅಸದ್ರೂಪನು. ಸೃಷ್ಟಿಸಾಧಕವಾದ ಪುರುಷ

---

[1] **ಪಂಚಜನಾಃ**—ಎಂಬ ಪದಕ್ಕೆ ಐದು ವಿಧವಾದ ಜನರೆಂದರ್ಥ. ಗಂಧರ್ವರು, ಪಿತೃಗಳು, ದೇವತೆಗಳು, ಅಸುರರು ಮತ್ತು ರಾಕ್ಷಸರು ಎಂಬ ಐದು ವಿಧವಾದ ಜನರೆಂದು ಕೆಲವರು, ಬ್ರಹ್ಮಣಾದಿ ನಾಲ್ಕು ವರ್ಣದವರೊಂದಿಗೆ ನಿಷಾದರೆಂಬ ಐದನೆಯ ಗುಂಪೂ ಸೇರಿ ಪಂಚ ಜನರೆಂದು ಉಪಮನ್ಯುವೇ ಮುಂತಾದವರೂ ಅಭಿಪ್ರಾಯಪಡುತ್ತಾರೆ. ಚಕ್ಷುಸ್, ಶ್ರೋತ್ರ, ಮನಸ್ಸು, ವಾಕ್ ಮತ್ತು ಪ್ರಾಣ ಈ ಐದೂ ಪಂಚಜನರೆಂದು ಅಧ್ಯಾತ್ಮವಾದಿಗಳ ವಾದ.

ದಶವಿಧವಾದ ಲೋಕಪಾಲಾದಿಗಳು ಜಗದ್ವ್ಯವಹಾರಕ್ಕೆ ಕಾರಣರಾಗಿಯೂ, ಮೂಲತತ್ತ್ವಕ್ಕೆ ಅಧೀನರಾಗಿಯೂ ಆದರ ಅನುಶಾಸನವನ್ನು ಪಾಲಿಸುತ್ತಾರೆಂದು ಛಾಂದೋಗ್ಯಾದ್ಯುಪನಿಷತ್ತುಗಳಲ್ಲಿಯೂ ತಿಳಿಸಿದೆ.

**ತಸ್ಮಾ ಉ ಹ ದದುಸ್ತೇ ವಾ ಏತೇ ಪಂಚಾನ್ಯೇ ಪಂಚಾನ್ಯೇ ದಶ ಸಂತಃ ||**

**(ಛಾ. ಉ. ೪.೩.೮)**

ಇತ್ಯಾದಿ ಸನ್ನಿವೇಶಗಳಲ್ಲಿ ಮೊದಲನೆಯ ಪಂಚಶಬ್ದಕ್ಕೆ ಅಗ್ನಿ, ಸೂರ್ಯ, ವಾಯು, ಚಂದ್ರ ಮತ್ತು ಉದಕವೆಂದೂ, ಎರಡನೇ ಪಂಚ ಶಬ್ದಕ್ಕೆ ಪ್ರಾಣ, ವಾಕ್, ಚಕ್ಷುಸ್ಸು, ಶೋತ್ರ ಮತ್ತು ಮನಸ್ಸೆಂದೂ ತಾತ್ಪರ್ಯ. " ಉತ್ತಾನಾಯಾಂ ದಶಯುಕ್ತಾ ವಹಂತಿ" ಎಂಬ ಋಕ್ಸಂಹಿತಾ ವಾಕ್ಯದ **ದಶಯುಕ್ತಾಃ** ಎಂಬ ಪದಕ್ಕೂ ಇದೇ ತಾತ್ಪರ್ಯವನ್ನು ಹೇಳಿದೆ.

ದೇವಮಾನವರಾದ ಸಕಲ ಭೂತಗಳೂ ವಿಶ್ವತತ್ತ್ವದ ಸಂಕಲ್ಪ ಮತ್ತು ನಿಯಮಗಳನ್ನು ಪಾಲಿಸಿ ವಿಶ್ವತತ್ವದ ಆಜ್ಞಾನುವರ್ತಿಗಳಾಗಿ ಲೋಕ ವ್ಯವಹಾರವನ್ನು ನಿರ್ವಹಿಸುತ್ತಾರೆ.

ಶಕ್ತಿಯೂ ಇವನೇ, ಶ್ರೀಯೋನಿಯೂ ಇವನೇ "[1] "ಅಪ್ರಾಕೃತರೂಪವುಳ್ಳ ಬ್ರಹ್ಮತತ್ತ್ವವು ಪ್ರಾಕೃತರೂಪವುಳ್ಳ ಸಕಲ ಜಗತ್ತನ್ನೂ ನಿರ್ಮಿಸುತ್ತದೆ. ಕಾರಣರೂಪದಿಂದಿರುವ ಈ ತತ್ತ್ವವು ಕಾರ್ಯರೂಪದ ಜಗತ್ತಿಗೆ ಆಧಾರವಾಗಿದೆ. "[2]

'ಸೃಷ್ಟಿ' ಎಂದರೆ, ಸೂಕ್ಷ್ಮರೂಪವಾದ ತತ್ತ್ವವು ಸ್ಥೂಲರೂಪದಲ್ಲಿ ವಿಸ್ತೃತವಾಗುವುದೆಂದರ್ಥ. ಹೊಸವಸ್ತುವಿನ ಸೃಷ್ಟಿಯಲ್ಲ. "ಪುರುಷ ಏವೇದಗ್ಂ ಸರ್ವಂ", "ಅತೋ ಜ್ಯಾಯಾಗ್ಂಶ್ಚ ಪೂರುಷಃ" ಇತ್ಯಾದಿ ವಾಕ್ಯಗಳಿಂದ ಈಶ್ವರ ಮತ್ತು ಜಗತ್ತಿನ ಸಂಬಂಧವು ವಿವೃತವಾಗಿದೆ ಜಗತ್ತಿನ ಸಕಲ ವ್ಯಾಪಾರಗಳೂ ಈಶ್ವರನ ಲೀಲೆ; ಈಶ್ವರನು ಜಗತ್ತಿಗಿಂತಲೂ ಅಧಿಕ. ಅವ್ಯಕ್ತವಾದ ತತ್ತ್ವದ ಅಂಶವು ಜಗದ್ರೂಪದಲ್ಲಿ ವ್ಯಕ್ತವಾಗುವುದೇ ಸೃಷ್ಟಿ. "ಅವ್ಯಕ್ತ" ಮತ್ತು "ವ್ಯಕ್ತ" ರೂಪಗಳನ್ನೇ 'ಅಸತ್' ಮತ್ತು 'ಸತ್' ಎಂಬೀ ಪದಗಳಿಂದಲೂ ನಿರ್ದೇಶಿಸಿದೆ.[3] 'ಅಸತ್' ಎಂದರೆ ಅಭಾವವೆಂದಲ್ಲ. ನಾಮರೂಪರಹಿತವೂ ಅನಿರ್ವಾಚ್ಯವೂ ಆದ ಬ್ರಹ್ಮತತ್ತ್ವವೆಂದರ್ಥ.[4] 'ಅಸತ್' ಎಂದರೆ 'ಅವ್ಯಾಕೃತ,'; 'ಸತ್' ಎಂದರೆ

---

1 ಅಸಚ್ಚ ಸಚ್ಚ ಪರಮೇ ವ್ಯೋಮನ್ದಕ್ಷಸ್ಯ ಜನ್ಮನ್ನದಿತೇರುಪಸ್ಥೇ |
ಅಗ್ನಿರ್ಹ ನಃ ಪ್ರಥಮಜಾ ಋತಸ್ಯ ಪೂರ್ವ ಆಯುನಿ ವೃಷಭಶ್ಚ
ಧೇನುಃ ||
(೧೦ ೫.೭)

ಜಗತ್ಸೃಷ್ಟಿ ಸಂಕಲ್ಪಕ್ಕನುಗುಣವಾಗಿ ಒಂದೇ ತತ್ತ್ವವು ಸ್ತ್ರೀಪುಂರೂಪಗಳೆರಡನ್ನೂ ಹೊಂದಿ ಜಗತ್ತಿನಲ್ಲಿ ಆವಿರ್ಭಾವವನ್ನು ಹೊಂದುತ್ತದೆ ಎಂಬ ಅಂಶವನ್ನು ಮುಂದೆ ವಿವರಿಸಲಾಗುತ್ತದೆ.

2 ಅಹಮೇವ ವಾತ ಇವ ಪ್ರ ವಾಮ್ಯಾರಭಮಾಣಾ ಭುವನಾನಿ ವಿಶ್ವಾ |
ಪರೋ ದಿವಾ ಪರ ಏನಾ ಪೃಥಿವ್ಯೈತಾವತೀ ಮಹಿನಾ ಸಂ ಬಭೂವ ||
(೧೦.೧೨೫.೮)

3 ೧೦.೫.೭.
"ದೇವಾನಾಂ ಪೂರ್ವ್ಯೇ ಯುಗೇಽಸತಃ ಸದಜಾಯತ"
(೧೦.೭೨.೨.)

4 "ನಾಮರೂಪರಹಿತತ್ವಾದಸತ್ತ್ವಮಾನಾದ್ಬ್ರಹ್ಮಣಃ ಸಕಾಶಾತ್"
ಸಾಯಣಭಾಷ್ಯ

'ವ್ಯಾಕೃತ'.1 ನಾಮರೂಪರಹಿತವಾದ ಬ್ರಹ್ಮತತ್ತ್ವವು ನಾಮರೂಪಗಳಿಂದ ಕೂಡಿದ ವ್ಯವಹಾರಸ್ಥಿತಿಯಲ್ಲಿ ಪ್ರಸರಿಸುವುದೆಂದರ್ಥ. ಇದೇ ಸೃಷ್ಟಿ. "ವ್ಯಕ್ತರೂಪದಲ್ಲಿರುವಾಗ ಯಾವುದನ್ನು ಪ್ರಕೃತಿಯೆನ್ನುತ್ತೇವೆಯೋ ಅದು ಸೃಷ್ಟಿಗೆ ಪೂರ್ವದಲ್ಲಿ ಅವ್ಯಾಕೃತನಾದ ಪರತತ್ತ್ವದಲ್ಲಿಯೇ ಅಡಗಿರುತ್ತದೆ."[2] ಸೃಷ್ಟಿ ಸ್ಥಿತಿಲಯಗಳಿಗೆಲ್ಲ ಇದೊಂದೇ ಕಾರಣವಾಗಿರುವುದರಿಂದ ಇದನ್ನೇ 'ವಾಮಸ್ಯ, ಪಲಿತಸ್ಯ, ಹೋತುಃ' ಎಂಬ ವಿಶೇಷಣಗಳಿಂದ ವರ್ಣಿಸಿದೆ.3

ತಂತುವಾಯುವಿನಿಂದ (ಜೇಡರಹುಳು) ತಂತುಗಳು ಹೊರಕ್ಕೆಬಂದು ಬಲೆಯು ನಿರ್ಮಿತವಾಗುವಂತೆಯೂ, ಅಗ್ನಿಯಿಂದ ಕಣಗಳು ಹೊರಕ್ಕೆ ಬಂದು ತೇಜೋರಾಶಿಗಳಾಗುವಂತೆಯೂ ಈ ಮೂಲಾತ್ಮನಿಂದ ಸಕಲ ಪ್ರಾಣಿಗಳೂ, ಸಕಲ ಲೋಕಗಳೂ ಸಕಲ ದೇವತೆಗಳೂ ನಿಷ್ಪನ್ನರಾಗುತ್ತಾರೆ. ಇವನೇ ಸತ್ಯಕ್ಕೂ ಮೂಲವಾದ ಸತ್ಯ. ಮರ್ತ್ಯನೂ ಇವನೇ; ಅಮರ್ತ್ಯನೂ ಇವನೇ. ದೇಹವೂ ಇವನೇ; ಆತ್ಮನೂ ಇವನೇ. ಅಮರ್ತ್ಯನಾದ ಈಶ್ವರನು ತನ್ನ ಸಂಕಲ್ಪಾನುರೋಧವಾಗಿ ಮರ್ತ್ಯವಾದ ಜಗತ್ತಿನಲ್ಲಿ ವ್ಯಾಪಿಸಿರುತ್ತಾನೆ. "ಅಮರ್ತ್ಯೋ ಮರ್ತ್ಯೇನಾ ಸಯೋನಿಃ," "ಅವರಾನ್ ಆವಿವೇಶ" ಇತ್ಯಾದಿ ನಾನಾವಾಕ್ಯಗಳಿಂದ[4] ಈ ವಿಷಯವು ಸ್ಪಷ್ಟವಾಗಿ ತಿಳಿಯುತ್ತದೆ.

---

1 "ಅಸದವ್ಯಾಕೃತಂ, ಸಚ್ಚ ವ್ಯಾಕೃತಂ"

ಸಾ. ಭಾ- ೧೦.೫.೭.

cf. ಅಸದೇವೇದಮಗ್ರ ಆಸೀತ್ | ತತ್ಸದಾಸೀತ್ ||

ಛಾ. ಉ. ೩.೧೯.೧.

2 ಯಸ್ಮಾನಕ್ಷ್ಯಾ ದುಹಿತಾ ಜಾತ್ವಾಸ ಕಸ್ತಾಂ ವಿದ್ವಾನ್ ಅಭಿಮನ್ಯಾತೇ ಅಂಧಾಂ |

ಕತರೋ ಮೇನಿಂ ಪ್ರತಿ ತಂ ಮುಚಾತೇ ಯ ಈಂ ವಹಾತೇ ಯ ಈಂ ವಾ ವರೇಯಾತ್ ||

(ಋ. ಸಂ. ೧೦.೨೭.೧೧)

3 ೧.೧೬೪.೧

4 ೧.೧೬೪.೩೮; ೧.೩೫.೨; ೮.೪೮.೧೨; ೧೦.೮೧.೧.

"ಮಹೋ ದೇವೋ ಮರ್ತ್ಯಾನ್ ಆವಿವೇಶ"

೪.೫೮.೩.

ಯಾವುದನ್ನು ವ್ಯವಹಾರದಲ್ಲಿ ವೈಯಕ್ತಿಕವಾದ ದೇಹ ಅಥವಾ ವೈಯಕ್ತಿಕವಾದ ಆತ್ಮ ಎನ್ನುತ್ತೇವೆಯೋ ಅವೆಲ್ಲವೂ ಈಶ್ವರನ ಆವಿರ್ಭಾವಗಳೇ ಆಗಿರುವುದರಿಂದ ಇಲ್ಲಿ ಅಮರ್ತ್ಯನಾದ ಪರಮಾತ್ಮನು ಮರ್ತ್ಯವಾದ ದೇಹಾದಿಗಳೊಡನೆ ಸೇರಿಕೊಳ್ಳುತ್ತಾನೆ ಎಂದರ್ಥಮಾಡಬಹುದು.

ಅಮರ್ತ್ಯನಾದ ಈಶ್ವರನು ಮರ್ತ್ಯವಾದ ದೇಹಾದಿಗಳೊಡನೆ ಸೇರದಿದ್ದರೆ ಪ್ರಾಪಂಚಿಕ ವ್ಯವಹಾರವೇ ಇರುವುದಿಲ್ಲ ಆದರೆ, ಆದ್ಯಂತಗಳುಳ್ಳ ಪ್ರಾಪಂಚಿಕ ವ್ಯವಹಾರದಲ್ಲಿ ಮಗ್ನನಾದ ಈಶ್ವರನೂ ಇದರಲ್ಲಿಯೇ ಮುಳುಗಿರುತ್ತಾನೆಯೇ ಎಂದರೆ, ಅದಲ್ಲ. ಈಶ್ವರನು ಅನಾದ್ಯನಂತನು. ಪ್ರಾಪಂಚಿಕ ವ್ಯವಹಾರವು ಆದ್ಯಂತಗಳುಳ್ಳದ್ದು. ಅನಾದ್ಯನಂತನಾದ ಈಶ್ವರನ ಅಧೀನದಲ್ಲಿಯೂ, ಅವನಲ್ಲಿಯೇ ವ್ಯಾಪ್ತವಾಗಿಯೂ ಇರುವ ಜಗತ್ತು ಆದಿಯಲ್ಲಿಯೂ, ಅಂತ್ಯದಲ್ಲಿಯೂ ಅವಧಿಯೊಡನೆ ಕೂಡಿದೆ. ಈ ವಿಷಯವು 'ಸತ್ಯ' ಎಂಬ ಶಬ್ದದ ನಿರ್ವಚನದಿಂದ ತಿಳಿಯುತ್ತದೆ.

**ಸ**, **ತಿ**, **ಯಂ** ಎಂಬ ಮೂರು ಅಕ್ಷರಗಳಿಂದ ಕೂಡಿದ '**ಸತ್ಯಂ**' ಎಂಬ ಪದದಲ್ಲಿ **ಸ** ಮತ್ತು **ಯಂ** ಎರಡು ಅಕ್ಷರಗಳೂ ಸತ್ಯಾತ್ಮಕವು ಮಧ್ಯದ '**ತಿ**' ಎಂಬಕ್ಷರವು ಅನತ್ಯಾತ್ಮಕವು. ಅಸತ್ಯಾತ್ಮಕವಾದ ತತ್ತ್ವವು ಎರಡು ಕಡೆಗಳಲ್ಲಿಯೂ ಸತ್ಯಾತ್ಮಕವಾದ ತತ್ತ್ವದಿಂದ ಆವೃತವಾಗಿದೆ.[1] ಆದುದರಿಂದ ಅದೂ ಸತ್ಯಸ್ವರೂಪವನ್ನೇ ಹೊಂದುತ್ತದೆ. ಆದ್ಯಂತಗಳುಳ್ಳ ಈ ಜಗತ್ತು ಅನಾದ್ಯನಂತನಾದ ಈಶ್ವರನಿಂದ ಆವೃತವಾಗಿದೆಯೆಂದು ತಾತ್ಪರ್ಯ. "ಮಹೋದೇವೋ ಮರ್ತ್ಯಾನ್ ಆವಿವೇಶ," "ಅಮರ್ತ್ಯೋ ಮರ್ತ್ಯೇನಾ ಸಯೋನಿಃ" ಇತ್ಯಾದಿ ವರ್ಣನೆಗಳಲ್ಲಿ ಮರ್ತ್ಯ ಮತ್ತು ಅಮರ್ತ್ಯಗಳೆರಡೂ ಪರಬ್ರಹ್ಮರೂಪವಾದ ಒಂದೇ ಯೋನಿಯುಳ್ಳವು ಎಂದು ಅರ್ಥ. ಪ್ರಜಾಪತಿಯು ಜಗತ್ತನ್ನು ಸೃಜಿಸಿದನಂತರ "ನಾನೇ ಸೃಷ್ಟಿ, ನನ್ನಿಂದ ಸೃಷ್ಟವಾದ

---

1 "ತದೇತತ್ತ್ರ್ಯಕ್ಷರಗ್ಂ ಸತ್ಯಮಿತಿ ಸ ಇತ್ಯೇಕಮಕ್ಷರಂ ತೀತ್ಯೇಕಮಕ್ಷರಂ ಯಮಿತ್ಯೇಕಮಕ್ಷರಂ ಪ್ರಥಮೋತ್ತಮೇ ಅಕ್ಷರೇ ಸತ್ಯಂ ಮಧ್ಯತೋಽನೃತಂ ತದೇತದನೃತಮುಭಯತಃ ಸತ್ಯೇನ ಪರಿಗೃಹೀತಗ್ಂ ಸತ್ಯಭೂಯಮೇವ ಭವತಿ ||

(ಬೃ. ಉ. ೫.೫.೧)

ಜಗತ್ತು ನನಗಿಂತ ಅಭಿನ್ನವಾಗಿರುವುದರಿಂದ ನಾನೇ ಅದಾಗಿದ್ದೇನೆ, ಅದು ನನಗಿಂತ ಬೇರೆಯಲ್ಲ," ಎಂದು ಅರಿತನು.

ಸಕಲ ವಿಧವಾದ ಜಗತ್ಸೃಷ್ಟಿಗೂ ಈಶ್ವರನ ಸಂಕಲ್ಪವೇ ಮೂಲ. "ಇಂದ್ರನು ತನ್ನ ಅಸಾಧಾರಣವಾದ ಶಕ್ತಿಯಿಂದ ತಾನು ಯಾವ ರೂಪವನ್ನು ಹೊಂದಬೇಕೆಂದಿಚ್ಛಿಸುವನೋ ಆಯಾ ರೂಪಗಳನ್ನು ಪಡೆಯುತ್ತಾನೆ"[1] ಇತ್ಯಾದಿ ಸಂಹಿತಾವಾಕ್ಯಗಳೇ ಬೃಹದಾರಣ್ಯಕಾದ್ಯುಪನಿಷತ್ತುಗಳ ಪರಬ್ರಹ್ಮತತ್ತ್ವಪ್ರತಿಪಾದನೆಗೆ ಆಧಾರ. ಈ ವಾಕ್ಯಗಳ ಆಧಾರದ ಮೇಲೆಯೇ ಮಧುವಿದ್ಯಾದಿ ಪ್ರಕರಣಗಳು ವಿವೃತವಾಗಿವೆ.[2]

---

1 "ಉಗ್ರಸ್ತುರಾಷಾಳಭಿಭೂತ್ಯೋಜಾ ಯಥಾ ವಶಂ ತನ್ವಂ ಚಕ್ರ ಏಷಃ"||
ಋ.೪೮.೪.

ರೂಪಂ ರೂಪಂ ಮಘವಾ ಬೋಭವೀತಿ ಮಾಯಾಃ ಕೃಣ್ವಾನಸ್ತನ್ವಂ ಪರಿ ಸ್ವಾಂ |
ಋ.೫೩.೮.

cf. VII. 101.3 ; X 15.14 ; X. 168.4.

2 ಜಗತ್ತೆಲ್ಲವೂ ಪರಸ್ಪರೋಪಕಾರೋಪಕಾರಕವಾಗಿರುವುದರಿಂದ ಒಂದೇ ಮೂಲದಿಂದ ಉತ್ಪನ್ನವಾದ ಇವೆಲ್ಲವೂ ಮೂಲಕ್ಕಿಂತ ಭಿನ್ನವಲ್ಲ ಎಂದು ತೋರಿಸುವುದೇ ಮಧುವಿದ್ಯಾಪ್ರಕರಣದ ಉದ್ದಿಶ್ಯ "ರೂಪಂ ರೂಪಂ ಪ್ರತಿರೂಪೋ ಬಭೂವ" ಎಂಬ ಋಕ್ಸಂಹಿತಾವಾಕ್ಯದ ಆಧಾರದ ಮೇಲೆ ಬೃಹದಾರಣ್ಯಕದಲ್ಲಿ ಮಧುವಿದ್ಯೆಯನ್ನು ವಿಸ್ತೃತವಾಗಿ ಹೇಳಿದೆ.

ಇದಂ ಬ್ರಹ್ಮೇದಂ ಕ್ಷತ್ರಮಿಮೇ ಲೋಕಾ ಇಮೇ ದೇವಾ ಇಮಾನಿ ಭೂತಾನೀದಗ್ಂ ಸರ್ವಂ ಯದಯಮಾತ್ಮಾ ||
(ಬೃ. ಉ. ೨.೪.೬.)

ಇತ್ಯಾದಿ ವಾಕ್ಯಗಳಲ್ಲಿ ಅಡಕವಾಗಿರುವ ಆತ್ಮತತ್ತ್ವದ ವಿವರಣೆಯೇ ಬ್ರಹ್ಮವಿದ್ಯೆ. ಈಶ್ವರನಿಂದ ಉತ್ಪನ್ನವಾದ ಸಕಲ ವೈಯಕ್ತಿಕ ಕಾರ್ಯಗಳೂ ಪರಸ್ಪರ ಉಪಕಾರ್ಯೋಪಕಾರಕ ಸಂಬಂಧವನ್ನು ಹೊಂದಿವೆ. ಹೇಗೆಂದರೆ—

"ಪೃಥ್ವಿಯು ಸಕಲ ಭೂತಗಳಿಗೂ ಮಧು, ಸಕಲ ಭೂತಗಳೂ ಪೃಥ್ವಿಗೆ ಮಧು. ಆಧಿದೈವಿಕವಾಗಿ ಪೃಥ್ವಿಯೊಳಗೂ, ಆಧ್ಯಾತ್ಮಿಕವಾಗಿ ಶರೀರದೊಳಗೂ ಇರುವ ತೇಜೋಮಯನೂ ಅಮೃತಮಯನೂ ಆದ ಪುರುಷನೇ ಸಕಲ ಜಗತ್ತು. ಈ ಆತ್ಮನೇ ಪರಬ್ರಹ್ಮ."

ಹೀಗೆಯೇ, ಅಪ್ಪು, ಅಗ್ನಿ, ವಾಯು, ಆದಿತ್ಯ, ಸಕಲ ದಿಕ್ಕುಗಳ, ಚಂದ್ರ, ಮಿಂಚು, ಗುಡುಗು, ಆಕಾಶ, ಧರ್ಮ, ಸತ್ಯ ಮತ್ತು ಆತ್ಮ ಇವೆಲ್ಲವೂ ವೈಯಕ್ತಿಕವಾಗಿಯೂ, ಸಮಷ್ಟಿಯಾಗಿಯೂ ಎಲ್ಲ ಭೂತಗಳಿಗೂ ಮಧು, ಸಕಲ ಭೂತಗಳೂ ಇವಕ್ಕೆ ಮಧು.

"ಸ ವಾ ಅಯಮಾತ್ಮಾ ಸರ್ವೇಷಾಂ ಭೂತಾನಾಮಧಿಪತಿಃ ಸರ್ವೇಷಾಂ ಭೂತಾನಾಂ ರಾಜಾ, ತದ್ಯಥಾ ರಥನಾಭೌ ಚ ರಥನೇಮೌ ಚಾರಾಃ ಸರ್ವೇ ಸಮರ್ಪಿತಾ ಏವಮೇವಾಸ್ಮಿನ್ನಾತ್ಮನಿ ಸರ್ವಾಣಿ ಭೂತಾನಿ ಸರ್ವೇ ದೇವಾಃ ಸರ್ವೇ ಲೋಕಾಃ ಸರ್ವೇ ಪ್ರಾಣಾಃ ಸರ್ವ ಏವ ಆತ್ಮಾನಃ ಸಮರ್ಪಿತಾಃ ||

(ಬೃ. ಉ. ೨.೫.೧೫)

ಈ ಆತ್ಮನು ಸಕಲ ಭೂತಗಳಿಗೂ ಪ್ರಭು. ರಥದ ಗುಂಬದಲ್ಲಿಯೂ ರಥದ ಹಳಿಯಲ್ಲಿಯೂ ಹೇಗೆ ಹಾರೆಕೋಲುಗಳೆಲ್ಲವೂ ಇಡಲ್ಪಟ್ಟಿರುವುವೋ ಹಾಗೆಯೇ, ಈ ಆತ್ಮನಲ್ಲಿ ಎಲ್ಲ ಭೂತಗಳೂ, ಎಲ್ಲಾ ದೇವತೆಗಳೂ ಎಲ್ಲ ಪ್ರಾಣಗಳೂ ಸಕಲ ಆತ್ಮರುಗಳೂ ಅರ್ಪಿತರಾಗಿದ್ದಾರೆ. ಇದನ್ನೇ ಋಕ್ಸಂಹಿತೆಯಲ್ಲಿ,

"ತ್ರಿನಾಭಿ ಚಕ್ರಮಜರಮನರ್ವಂ ಯತ್ರೇಮಾ ವಿಶ್ವಾ ಭುವನಾನಿ ತಸ್ಥುಃ"

೧ ೧೬೪.೨.

"ಪಂಚಾರೇ ಚಕ್ರೇ ಪರಿವರ್ತಮಾನೇ ತಸ್ಮಿನ್ನಾತಸ್ಥುರ್ಭುವನಾನಿ ವಿಶ್ವಾ

೧ ೧೬೪.೧೩.

"ಸೂರ್ಯಸ್ಯ ಚಕ್ಷೂ ರಜಸೈತ್ಯಾವೃತಂ ತಸ್ಮಿನ್ನಾರ್ಪಿತಾ ಭುವನಾನಿ ವಿಶ್ವಾ"

೧.೧೬೪.೧೪.

ಇತ್ಯಾದಿ ವಾಕ್ಯಗಳಿಂದ ತಿಳಿಸಿದೆ.

ಈ ವಿಶ್ವೈಕ್ಯತತ್ತ್ವವನ್ನೇ ದಧ್ಯಙ್ಙಾಥರ್ವಣನು ಅಶ್ವಿನೀದೇವತೆಗಳಿಗೆ ಉಪದೇಶಿಸಿದನು ಎಂದು ಋಕ್ಸಂಹಿತೆಯಲ್ಲಿ ತಿಳಿಸಿರುವುದನ್ನು (೧.೧೧೬, ೧.೧೧೭) ಬೃಹದಾರಣ್ಯಕದಲ್ಲಿ ಸಂಹಿತಾವಾಕ್ಯಗಳ ಆಧಾರದ ಮೇಲೆ ವಿಸ್ತರಿಸಿದೆ.

ದಧೀಚಿಮಹರ್ಷಿಯು ಅಶ್ವಿನೀ ದೇವತೆಗಳಿಗೆ ಉಪದೇಶಿಸಿದನು ಎಂದು ಋಕ್ಸಂಹಿತೆಯಲ್ಲಿ[1] ಹೇಳಿರುವ ವಿಷಯವೇ ಉಪನಿಷತ್ತಿನ ಮುಖ್ಯ ವಸ್ತು. ಇದೇ ತ್ವಾಷ್ಟ್ರವಿದ್ಯೆ ಎಂದರೆ ಆದಿತ್ಯವಿದ್ಯೆಯೆಂದರ್ಥ. ಅನಂತನೂ ಅಪೂರ್ವನೂ ಆದ "ಬ್ರಹ್ಮ" ನೇ ಇಂದ್ರಶಬ್ದವಾಚ್ಯನು ಮತ್ತು ಆದಿತ್ಯ ಶಬ್ದವಾಚ್ಯನು. "ಔಪನಿಷದಂ ಬ್ರಹ್ಮ" ಎಂದು ಉಪನಿಷತ್ತುಗಳಲ್ಲಿ ಪ್ರಸಿದ್ಧವಾಗಿರುವ ಪರತತ್ತ್ವವೇ ಇದು.

"ಇಲ್ಲಿ ಪರಮಾತ್ಮನೇ ಇಂದ್ರಶಬ್ದವಾಚ್ಯನು. ಈತನು ಆಕಾಶದಂತೆ ಸರ್ವಗತನು. ಸರ್ವವ್ಯಾಪಿ ಮತ್ತು ಸದಾನಂದರೂಪಿ. ಈತನು ತನ್ನ ಅಸಾಧಾರಣವಾದ ಸಂಕಲ್ಪಶಕ್ತಿಯಿಂದ ಸಕಲ ಜಗದ್ರೂಪದಲ್ಲಿ ಪರಿಣಮಿಸುತ್ತಾನೆ. ಇವನೇ ಸಕಲ ಚೇತನರೂಪನು" ಎಂದು ಸಾಯಣರು ವಿವರಿಸಿದ್ದಾರೆ.

ಜಗತ್ತನ್ನು ಉತ್ಪನ್ನಮಾಡುವ ಇಂದ್ರಾದಿಸಂಜ್ಞಕನಾದ ಈಶ್ವರನೇ ಕವಿ. ಉತ್ಪನ್ನವಾದ ಜಗತ್ತೆಲ್ಲವೂ ಕಾವ್ಯಾತ್ಮಕ, ವೈವಿಧ್ಯವನ್ನು ಹೊಂದಿರುವ ಸಕಲ ಜಗತ್ತಿನಲ್ಲಿಯೂ ತಾನೇ ವಿಸ್ತೃತಿಯನ್ನು ಹೊಂದಿ ಸಾಮರಸ್ಯ ಕಾರಕನಾಗುತ್ತಾನೆ.[2] "ಈ ಇಂದ್ರನೇ ರೂಪ ರೂಪಕ್ಕೂ ಪ್ರತಿರೂಪನು, ಇದನ್ನು ತಿಳಿಯಪಡಿಸುವುದಕ್ಕಾಗಿ ತನ್ನ ಮಾಯೆಗಳಿಂದ ಪುರುರೂಪನಾಗಿ

---

1 ಋ. ಸಂ. ೧.೧೧೬, ೧.೧೧೭.

2 "ವಿಶ್ವಾ ರೂಪಾಣಿ ಪ್ರತಿಮುಂಚತೇ ಕವಿಃ ಪ್ರಾಸಾವೀದ್ಭದ್ರಂ
ದ್ವಿಪದೇ ಚತುಷ್ಪದೇ"
(೫.೮೧.೨.)

"ಯೋ ಋತಾರ್ ಭುವನಾನಾಂ ಯ ಉಸ್ರಾಣಾಮಪೀಚ್ಯಾವೇದ
ನಾಮಾನಿ ಗುಹ್ಯಾ"
ಸ ಕವಿಃ ಕಾವ್ಯಾ ಪುರು ರೂಪಂ ದ್ಯೌರಿವ ಪುಷ್ಯತಿ...||
ಯಸ್ಮಿನ್ವಿಶ್ವಾನಿ ಕಾವ್ಯಾ ಚಕ್ರೇ ನಾಭಿರಿವ ಶ್ರಿತಾ"
(ಋ. ಸಂ. ೮.೪೧.೧–೬)

ಕಾಣುತ್ತಾನೆ. ಆವನನ್ನು ಹತ್ತುಸಾವಿರ ಎಂದರೆ ಅಸಂಖ್ಯಾಕವಾದ ಅಶ್ವಗಳು ಕೂಡಿಕೊಂಡಿರುತ್ತವೆ."[1] ಇಂದ್ರನೇ ಅಶ್ವಗಳು, ಇವನೇ ಹತ್ತುಸಾವಿರ, ಬಹು ಮತ್ತು ಅನಂತವಾದ ಅಶ್ವಗಳು.

ಇವನೇ ವೈಶ್ವಾನರನು, ವಿಶ್ವರೂಪನು ; ಜಾತವೇದಸ್ಸೂ ಇವನೇ, ಸಕಲ ದೇವತೆಗಳೂ ಇವನ ವಿಭೂತಿವಿಶೇಗಳು. " ರಥದ ಸಕಲ ಅವಯುವಗಳೂ ಅದರ ಆಣಿಯನ್ನು ಆಶ್ರಯಿಸಿ ನಿಲ್ಲುವಂತೆ ಸಕಲ ದೇವತೆಗಳೂ ಈ ಮೂಲಾತ್ಮನನ್ನು ಆಶ್ರಯಿಸಿ ನಿಂತಿದ್ದಾರೆ "[2]

ಯಾವ ಋಷಿಯಾಗಲಿ, ಯಾವ ಹೆಸರಿನಿಂದಾಗಲಿ ಈ ಆದಿತತ್ತ್ವವನ್ನು ಕರೆದರೂ ಈ ಆದಿಕಾರಣವನ್ನು ರಥಚಕ್ರಕ್ಕೆ ಹೋಲಿಸದೆ ಇದಕ್ಕೆ ಬೇರೆ ಅನುರೂಪವಾದ ಸಾಮ್ಯವನ್ನು ಹೇಳಲಾಗುವುದಿಲ್ಲ, ಆತ್ಮನೆಂದು ಕರೆಯಲಿ, ನಿಯತಿಯೆಂದು ಕರೆಯಲಿ, ಇದಕ್ಕೂ ವ್ಯವಹಾರ ಜಗತ್ತಿಗೂ ಇರುವ

---

1 ರೂಪಂ ರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿ
ಚಕ್ಷಣಾಯ ।
ಇಂದ್ರೋ ಮಾಯಾಭಿಃ ಪುರುರೂಪ ಈಯತೇ ಯುಕ್ತಾ
ಹ್ಯಸ್ಯ ಹರಯಃ ಶತಾ ದಶ (೬.೪೭.೧೮)

" ಅಯಂ ವೈ ಹರಯೋಽಯಂ ವೈ ದಶ ಚ ಸಹಸ್ರಾಣಿ ಬಹೂನಿ ಚಾನನ್ತಾನಿ ಚ ತದೇತದ್ಬ್ರಹ್ಮಾಪೂರ್ವಮನಪರಮನನ್ತರಮಬಾಹ್ಯಮಯಮಾತ್ಮಾ ಬ್ರಹ್ಮ "

2 ಆಣಿಂ ನ ರಥ್ಯಮಮೃತಾಧಿ ತಸ್ಥುರಿಹ ಬ್ರವೀತು ಯ ಉ
ತಚ್ಚಿಕೇತತ್ ॥
(೧.೩೫.೬.)

ಸಂಬಂಧವನ್ನು ರಥಚಕ್ರಕ್ಕೂ ಅದರ ಅರಗಳಿಗೂ ಇರುವ ಸಂಬಂಧಕ್ಕೆ ಹೋಲಿಸಲೇ ಬೇಕು.[1]

ಈ ಆತ್ಮನು ಸಕಲ ಭೂತಗಳಿಗೂ ಪ್ರಭು. ರಥಚಕ್ರದ ನಾಭಿಯಲ್ಲಿಯೂ, ನೇಮಿಯಲ್ಲಿಯೂ ಅರಗಳಲ್ಲವೂ ಯಾವ ರೀತಿ ಅಂತರ್ಗತವಾಗಿಯೂ ನಿಯತವಾದ ಸ್ಥಿತಿಗಳುಳ್ಳವಾಗಿಯೂ ಇರುವುವೋ ಅದರಂತೆ ಸಕಲ ಭೂತಗಳೂ ಈ ಆತ್ಮನಲ್ಲಿ ಅಂತರ್ಗತವಾಗಿಯೂ, ಆತ್ಮನ ನಿಯಮನಕ್ಕೆ ಅಧೀನವಾಗಿಯೂ ಇವೆ. ಸಕಲ ಭೂತಗಳೂ, ಸಕಲ ದೇವತೆಗಳೂ, ಸಕಲ ಲೋಕಗಳೂ ಸಮಸ್ತವೂ ಆತ್ಮನ ನಿಯಮಕ್ಕೆ ಅರ್ಪಿತವಾಗಿ ಅದನ್ನೇ ಅವಲಂಬಿಸಿವೆ ಎಂದು, ಜಗದಾತ್ಮನಿಗೂ ರಥಚಕ್ರಕ್ಕೂ ಸಾಮ್ಯವನ್ನು ಹೇಳಿದೆ.[2]

"ಒಂದೇ ಸಮನಾದ ಬಹಿರ್ವಲಯವುಳ್ಳದ್ದೂ, ಅಕ್ಷಯ್ಯವೂ ಆದ ವಿಶ್ವಚಕ್ರವು ಪುನಃ ಪುನಃ ಸುತ್ತುತ್ತಿದೆ. ಇದರ ಊರ್ಧ್ವಭಾಗದಲ್ಲಿ ಇಂದ್ರಾದಿ ಪಂಚಲೋಕಪಾಲಕರೂ ಪಂಚವರ್ಣದ ಮಾನವರೂ ತಮ್ಮ ತಮ್ಮ ನಿರ್ದಿಷ್ಟವಾದ ಕರ್ತವ್ಯದಲ್ಲಿ ಯುಕ್ತರಾಗಿ ಜಗತ್ತಿನ ಕಾರ್ಯವನ್ನು ನಿರ್ವಹಿಸುತ್ತಾರೆ. ಜಗಚ್ಚಕ್ಷೂರೂಪವಾದ ಸೂರ್ಯಮಂಡಲವು ಉದಕದಿಂದ

---

1 ಇದೇ ಉಪಮೆಯನ್ನು ತೋರಿಸಿ ಆದಿತತ್ತ್ವವನ್ನು ವರ್ಣಿಸುವ ಕ್ರಮವನ್ನು ಸಾಧಾರಣವಾಗಿ ಎಲ್ಲ ಉಪನಿಷತ್ತುಗಳಲ್ಲಿಯೂ ನೋಡಬಹುದು. ಉದಾಹರಣೆಗೆ—

"ಅರಾ ಇವ ರಥನಾಭೌ ಸರ್ವಂ ಪ್ರಾಣೇ ಪ್ರತಿಷ್ಠಿತಂ |
ಋಚೋ ಯಜೂಂಷಿ ಸಾಮಾನಿ ಯಜ್ಞಃ ಕ್ಷತ್ರಂ ಬ್ರಹ್ಮ ಚ"

(ಪ್ರಶ್ನ. ೨.೬.)

"ಅರಾ ಇವ ರಥನಾಭೌ ಕಲಾ ಯಸ್ಮಿನ್ ಪ್ರತಿಷ್ಠಿತಾಃ |
ತಂ ವೇದ್ಯಂ ಪುರುಷಂ ವೇದ ಯಥಾ..."

(ಪ್ರಶ್ನ. ೬.೬)

cf. ಮುಂಡಕ. ೨-೨.೬, ಶ್ವೇ.ಉ. ೧.೪. ಇತ್ಯಾದಿ.

2 "ಅಗ್ನೇ ನೇಮಿರರಾನ್ ಇವ ದೇವಾಂಸ್ತ್ವಂ ಪರಿಭೂರಸಿ"

(ಋ.೧೪.೬.)

ವ್ಯಾಪ್ತನಾಗಿ ಸಂಚರಿಸುತ್ತದೆ. ವಿಶ್ವವ್ಯಾಪಿಯಾದ ಈ ಮಂಡಲವಲ್ಲಿ ಸಕಲ ಲೋಕವೂ ಅರ್ಪಿತವಾಗಿದೆ."[1]

"ದ್ವೇ ವಾವ ಬ್ರಹ್ಮಣೋ ರೂಪೇ"[2] ಎಂದು ಬೃಹದಾರಣ್ಯಕದಲ್ಲಿ ಯಾವ ಪರಬ್ರಹ್ಮದ ಸ್ವರೂಪವರ್ಣನವಿದೆಯೋ ಅದೆಲ್ಲವೂ ಈ ಬ್ರಹ್ಮಚಕ್ರದ ವರ್ಣನವೇ ಆಗಿದೆ. ಈ ಬ್ರಹ್ಮಚಕ್ರವು ಮೂರ್ತ ಮತ್ತು ಅಮೂರ್ತರೂಪಗಳನ್ನು ಹೊಂದಿರುತ್ತದೆ. ಇದು ಮರ್ತ್ಯ ಮತ್ತು ಅಮೃತ; ಸ್ಥಿತ ಮತ್ತು ಯತ್; ಸತ್ ಮತ್ತು ತ್ಯತ್; ಕಾಲ ಮತ್ತು ಅಕಾಲವೆಂಬುದು ಈ ವಿಶ್ವಚಕ್ರದ ರೂಪದ್ವಯ. ಸೃಷ್ಟಿ, ಸ್ಥಿತಿ ಮತ್ತು ಲಯಗಳನ್ನು ಹೊಂದುವ ಸಕಲ ಜಗತ್ತತ್ತ್ವಗಳಿಗೂ ಇದೇ ಮೂಲ ಮತ್ತು ನಿಯಾಮಕ ಕಾಲಾಧೀನವಾದ ಸಕಲ ವಿಶ್ವಗಳೂ, ವಿಶ್ವವ್ಯವಹಾರಗಳೂ ಸಂವತ್ಸರರೂಪಿಯಾದ ವಿಶ್ವಚಕ್ರದ ಅಧೀನ.[3]

ಈ ಚಕ್ರದ ಸ್ವರೂಪವನ್ನು ವರ್ಣಿಸುವಾಗ ಆದಿತ್ಯ ಮತ್ತು ಸಂವತ್ಸರಗಳಿಗೆ ತಾದಾತ್ಮ್ಯವನ್ನು ಹೇಳಿದೆ. ಚರಾತ್ಮಕವಾದ ಅವಯವಗಳನ್ನು ಹೊಂದಿ ಅಚರವಾದ ಮತ್ತು ಸಂವತ್ಸರರೂಪಿಯಾದ ಆದಿತ್ಯನ ವರ್ಣನವು ಈ ರೀತಿಯಿದೆ.

"ಚಲನವಿಲ್ಲದೆ ಸ್ಥಾಯಿಯಾದ ಸಂವತ್ಸರವು ಆರು ಭಾರಗಳನ್ನು ವಹಿಸಿದೆ. ಸತ್ಯಾತ್ಮಕವೂ ಅತ್ಯಂತ ಶ್ರೇಷ್ಠವೂ ಆದಿತ್ಯಾತ್ಮಕವೂ ಆದ

---

1. "ದ್ವಾದಶಾರಂ ನಹಿ ತಜ್ಜರಾಯ ವರ್ವರ್ತಿ ಚಕ್ರಂ ಪರಿ
ದ್ಯಾಮೃತಸ್ಯ ।
೧.೧೬೪.೧೧.

ಸನೇಮಿ ಚಕ್ರಮಜರಂ ವಿ ವಾವೃತ ಉತ್ತಾನಾಯಾಂ
ದಶ ಯುಕ್ತಾ ವಹಂತಿ ।

ಇತ್ಯಾದಿ. ೧.೧೬೪.೧೪.

2 ಬೃ. ಉ. ೨.೩.೧.

3 "ಸಂವಸಂತೇऽಸ್ಮಿನ್ ಭೂತಾನಿ". ಸಾ. ಭಾ.

ಸಂವತ್ಸರ, ಪರಿವತ್ಸರ, ಇಡಾವತ್ಸರ ಇತ್ಯಾದಿಗಳು ಇದಕ್ಕೆ
ಅವಯವಗಳು.

ಇದೇ ಸಂವತ್ಸರವನ್ನು ರಶ್ಮಿಗಳು ಸೇವಿಸುತ್ತವೆ. ಜಂಗಮಾತ್ಮಕಗಳಾದ ಮೂರು ಲೋಕಗಳೂ ಸ್ಥಾಯಿಯಾದ ಈ ಮೂಲತತ್ತ್ವವನ್ನೇ ಆಶ್ರಯಿಸಿವೆ"[1]

" ಸಕಲಕ್ಕೂ ಪ್ರಧಾನಭೂತನಾದ ಆದಿತ್ಯನು ಸಸ್ಯವೃಷ್ಟ್ಯಾದಿಗಳಿಗೆಲ್ಲ ಉತ್ಪಾದಕವಾಗಿರುವ ಕ್ಷಿತ್ಯಾದಿ ಲೋಕತ್ರಯವನ್ನೂ, ಜಗತ್ಪಾಲಕರೂ, ಲೋಕತ್ರಯಾಭಿಮಾನದೇವತೆಗಳೂ ಆದ ಅಗ್ನಿ, ವಾಯು (ಇಂದ್ರ) ಮತ್ತು ಸೂರ್ಯನನ್ನೂ ಧರಿಸಿ ಎಲ್ಲಕ್ಕಿಂತಲೂ ಉನ್ನತವಾದ ಪ್ರದೇಶದಲ್ಲಿದ್ದಾನೆ. ಈ ಆದಿತ್ಯನನ್ನು ಯಾರೂ ಕ್ಷಯಿಸುವಂತೆ ಮಾಡಲಾರರು "[2]

ವಿಶ್ವದ ಭಾರವನ್ನೆಲ್ಲ ವಹಿಸಿರುವುದರಿಂದ ಆದಿತ್ಯ ಚಕ್ರದ ಅಕ್ಷವು ಭೂರಿಭಾರವುಳ್ಳದ್ದಾಗಿದೆ. ಆದರೂ ಇದು ಕುಂಠಿತವಾಗುವುದಿಲ್ಲ. ಇದು ಅನಾದಿ, ಅಜರ, ವಿಶ್ವಧಾರಕ. ಯಾವರೀತಿ ಪ್ರಾಪಂಚಿಕವಾದ ರಥದ ಅಕ್ಷವು ತನ್ನ ಶಕ್ತಿಗೆ ಮೀರಿದ ಭಾರವನ್ನು ವಹಿಸುವುದರಿಂದ ಮುರಿದು ಅದರ ನಾಭಿಯು ವಿಕೃತವಾಗುವುದೋ ಆದರಂತೆ ವಿಶ್ವಭಾರವನ್ನು ವಹಿಸುವುದಾದರೂ ಈ ರಥದ ಅಕ್ಷವು ಮುರಿಯುವುದಿಲ್ಲ. ಇದರ ನಾಭಿಯೂ ವಿಕೃತವಾಗುವುದಿಲ್ಲ.[3] ಇದೇ ಆದಿತ್ಯಾಖ್ಯವಾದ ಬ್ರಹ್ಮಚಕ್ರ.[4]

---

1 ಷಡ್ಭಾರಾನ್ ಏಕೋ ಅಚರನ್ಬಿಭರ್ತ್ಯೃತಂ ವರ್ಷಿಷ್ಠ ಮುಪಗಾವ ಆಗುಃ|
ತಿಸ್ರೋ ಮಹೀ ರುಪರಾಸ್ತಸ್ಥುರತ್ಯಾ ಗುಹಾ ದ್ವೇ ನಿಹಿತೇ
ದರ್ಶ್ಯೇಕಾ ||
(ಋ. ಸಂ. ೩.೫೬.೨)

2 ತಿಸ್ರೋ ಮಾತ್ರೄಸ್ತ್ರೀನ್ ಪಿತ್ರೄನ್ ಬಿಭ್ರದೇಕಂ
ಊರ್ಧ್ವಸ್ತಸ್ಥೌ ನೇಮವ ಗ್ಲಾಪಯಂತಿ |
ಮಂತ್ರಯಂತೇ ದಿವೋ ಅಮುಷ್ಯ ಪೃಷ್ಠೇ ವಿಶ್ವವಿದಂ
ವಾಚಮವಿಶ್ವಮಿನ್ವಾಂ ||
(ಋ. ಸಂ. ೧.೧೬೪.೧೦)

3 ತಸ್ಯ ನಾಕ್ಷಸ್ತಪ್ಯತೇ ಭೂರಿಭಾರಃ ಸನಾದೇವ ನ ಶಿರ್ಯತೇ ಸನಾಭಿಃ||
೧,೧೬೪.೧೩,

4 ಬೃ. ಉ, ೪.೪,೧೬–೧೭,

ಈ ಮೂಲತತ್ತ್ವದ ಆಧಾರದಮೇಲೆ ಸಂವತ್ಸರಾದಿಗಳು ತಮ್ಮ ಆವೃತ್ತಿ ರೂಪವಾದ ಭ್ರಮಣವನ್ನಿಟ್ಟುಕೊಂಡು ಲೋಕವ್ಯವಹಾರವನ್ನು ನಡೆಸುತ್ತಿವೆ. ಇದು ಸಕಲ ತೇಜಸ್ಸುಗಳಿಗಿಂತಲೂ ಅಧಿಕವಾದ ತೇಜಸ್ಸುಳ್ಳದ್ದು. ಈ ಮೂಲಜ್ಯೋತಿಯು ಆದಿತ್ಯಾದಿರೂಪದಲ್ಲಿ ಬೆಳಗುತ್ತಿರುವ ಜ್ಯೋತಿರ್ಮಂಡಲಗಳಿಗೆಲ್ಲ ಜ್ಯೋತಿಯನ್ನುಂಟುಮಾಡುತ್ತಿದೆ. "ರಥದ ಆಣಿಯನ್ನು ಉಳಿದ ಅವಯವಗಳು ಯಾವರೀತಿ ಆಶ್ರಯಿಸಿವೆಯೋ ಅದೇರೀತಿ ಈ ದಿವ್ಯಜ್ಯೋತಿಯನ್ನು ಉಳಿದ ಸಕಲಜ್ಯೋತಿರ್ಮಂಡಲಗಳೂ ಸಕಲ ಲೋಕಗಳೂ ಆಶ್ರಯಿಸಿ ನಿಂತಿವೆ."[1]

ಈ ಜ್ಯೋತಿಯನ್ನೇ ದೇವತೆಗಳು ಆಯುಸ್ಸೆಂದು ಉಪಾಸಿಸುತ್ತಾರೆ.[2] ಈ ದಿವ್ಯಜ್ಯೋತಿಯನ್ನೇ ದೇವತೆಗಳ ಜಿಹ್ವೆಯೆಂದೂ, ಅಮೃತಕ್ಕೆ ನಾಭಿಯೆಂದೂ ಋಕ್ಸಂಹಿತೆಯಲ್ಲಿ ಪ್ರಶಂಸಿಸಿದೆ.[3] ಇದು ಅವಿನಾಶ್ಯವೂ ಅಕ್ಷರಾಖ್ಯವೂ ಆದ ಮಹಜ್ಜ್ಯೋತಿ.[4] ಈ ದಿವ್ಯಜ್ಯೋತಿಯ ಮುಂದೆ ಸಹಸ್ರಾರು

---

1 ಋ. ಸಂ. ೧.೩೫.೬.

2 ಧ್ರುವಂ ಜ್ಯೋತಿರ್ನಿಹಿತಂ ದೃಶಯೇ ಕಂ ಮನೋ ಜವಿಷ್ಠಂ
ಪತಯತ್ಸ್ವಂತಃ |
ವಿಶ್ವೇ ದೇವಾಃ ಸಮನಸಃ ಸಕೇತಾ ಏಕಂ ಕ್ರತುಮಭಿ
ವಿ ಯಂತಿ ಸಾಧು ||
(೬.೯.೫.)

3 ಸಮುದ್ರಾದೂರ್ಮಿರ್ಮಧುಮಾನ್ ಉದಾರದುಪಾಂಶುನಾ ಸಮಮೃತತ್ವ
ಮಾನಟ್ |
ಘೃತಸ್ಯ ನಾಮ ಗುಹ್ಯಂ ಯದಸ್ತಿ ಜಿಹ್ವಾ ದೇವಾನಾ
ಮಮೃತಸ್ಯ ನಾಭಿಃ ||
(೪.೫೮.೧.)

4 ಉಷಸಃ ಪೂರ್ವಾ ಅಧ ಯದ್ವ್ಯೂಷುರ್ಮಹದ್ವಿ ಜಜ್ಞೇ
ಅಕ್ಷರಂ ಪದೇ ಗೋಃ |
ವ್ರತಾ ದೇವಾನಾಮುಪ ನು ಪ್ರಭೂಷನ್ಮಹದ್ದೇವಾನಾಮಸುರತ್ವ
ಮೇಕಂ ||
(ಋ. ಸಂ. ೩.೫೫.೧.)

ಸೂರ್ಯರೂ ಪ್ರಕಾಶಿಸಲಾರರು.[1]

ಸೂರ್ಯಾದಿ ಸಕಲ ಜ್ಯೋತಿರ್ಮಂಡಲಗಳಿಗೂ ಪ್ರಕಾಶಕವಾದ ಈ ದಿವ್ಯಜ್ಯೋತಿಯ ಸ್ಥಾನವನ್ನು ಪರಮವ್ಯೋಮವೆಂದು ತಿಳಿಸಿದೆ. " ಪರಮ ವ್ಯೋಮಸ್ಥವಾದ ಈ ಅಕ್ಷರದ " ಪ್ರಶಾಸನದಿಂದಲೇ ಸೂರ್ಯಾಚಂದ್ರರು ವಿಧೃತರಾಗುತ್ತಾರೆ. ಈ ಅಕ್ಷರದ ಪ್ರಶಾಸನದಿಂದಲೇ ದ್ಯಾವಾಪೃಥಿವಿಗಳೂ ವಿಧೃತವಾಗಿವೆ, ಎಂದು ಉಪನಿಷತ್ತುಗಳು ಪ್ರಶಂಸಿಸುವಾಗ ಇದೇ ದಿವ್ಯ ಜ್ಯೋತಿಯನ್ನು ಪ್ರಶಂಸಿಸುವ ಋಕ್ಸಂಹಿತಾವಾಕ್ಯಗಳನ್ನುದಾಹರಿಸಿ ವಿಶದ ಪಡಿಸುತ್ತವೆ.[2] ಅಕ್ಷರಾಖ್ಯವಾದ ಈ ದಿವ್ಯಜ್ಯೋತಿಯ ಸ್ವರೂಪವನ್ನರಿ ಯದೆ ವೇದಾನುವಚನದಿಂದ ಏನು ಪ್ರಯೋಜನವೆಂದು ಋಕ್ಸಂಹಿತೆಯ ಪ್ರಶ್ನೆ.[3]

---

1 ನ ತತ್ರ ಸೂರ್ಯೋ ಭಾತಿ ನ ಚನ್ದ್ರತಾರಕಂ
ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ ।
ತಮೇವ ಭಾಂತಮನುಭಾತಿ ಸರ್ವಂ
ತಸ್ಯ ಭಾಸಾ ಸರ್ವಮಿದಂ ವಿಭಾತಿ ॥
ಕಠ. ೫.೧೫.

2 " ಯೇನ ದ್ಯೌರುಗ್ರಾ ಪೃಥಿವೀ ಚ ದೃಳ್ಹಾ ಯೇನ ಸ್ವಃ
ಸ್ತಭಿತಂ ಯೇನ ನಾಕಃ ।
ಯೋ ಅಂತರಿಕ್ಷೇ ರಜಸೋ ವಿಮಾನಃ..."
೧೦.೧೨೧.೫.

ಎಂಬ ಮಂತ್ರದಲ್ಲಿ ಪ್ರತಿಪಾದಿತವಾಗಿರುವ ಅಂಶವನ್ನು ಬೃಹದಾರಣ್ಯಕೋಪ ನಿಷತ್ತು ವಿವರಿಸುತ್ತದೆ ಎಂದು ಶ್ರೀ ಶಂಕರಾಚಾರ್ಯರು ತಿಳಿಸಿದ್ದಾರೆ.
ಬೃ. ಉ. ಭಾಷ್ಯ- ೩.೮.೯.

3 ಋಚೋ ಅಕ್ಷರೇ ಪರಮೇ ವ್ಯೋಮನ್ಯಸ್ಮಿನ್ದೇವಾ ಅಧಿ ವಿಶ್ವೇ
ನಿಷೇದುಃ ।
ಯಸ್ತನ್ನ ವೇದ ಕಿಮೃಚಾ ಕರಿಷ್ಯತಿ ಯ ಇತ್ತದ್ವಿದುಸ್ತ ಇಮೇ
ಸಮಾಸತೇ ॥
೧.೧೬೪.೩೯.

ಪರಮವ್ಯೋಮಸ್ಥನೂ, ಆದಿತ್ಯಾಂತರ್ಗತನೂ ಆದ ಹಿರಣ್ಮಯ ಪುರುಷನೇ ಸಕಲ ಲೋಕಗಳನ್ನೂ ಒಂದುಗೂಡಿಸುವ ಸೂತ್ರಾತ್ಮನು ಅಮರವಾದ ಈ ಚಕ್ರದಲ್ಲಿ ಉನ್ನತ್ಯವನತಿಗಳು ಸಹಜವಾಗಿಯೇ ಇವೆ. ಮೂಲ ಜ್ಯೋತಿಯು ಅಜರವೂ ಅಕುಂಠಿತವೂ ಆದರೂ ತದಧೀನವಾದ ಸಕಲಕ್ಕೂ ಆವಿರ್ಭಾವವೂ ತಿರೋಧಾನವೂ ಆವೃತ್ತಿಯ ರೂಪದಲ್ಲಿದ್ದೇ ಇರುವುವು. ಇದನ್ನೇ ಬಾಧ್ವನೆಂಬ ಋಷಿಯು ಐತರೇಯಾರಣ್ಯಕದಲ್ಲಿ ವರ್ಣಿಸುತ್ತ

"ಯಾವುದನ್ನು ನಾವು ಮಹಾಪುರುಷನೆನ್ನುತ್ತೇವೆಯೋ ಅವನೇ ಸಂವತ್ಸರರೂಪನು. ಆ ಸಂವತ್ಸರದ ಪರಿಭ್ರಮಣಕಾಲದಲ್ಲಿ ಸಕಲ ಭೂತಗಳಿಗೂ ಉನ್ನತ್ಯವನತಿಗಳು ಸಂಭವಿಸಲೇಬೇಕು. ಈ ಸಂವತ್ಸರದ ಸಾರವೇ ಆದಿತ್ಯನು; ಅಶರೀರಿಯೂ ಪ್ರಜ್ಞಾತ್ಮನೂ ಆದ ಪುರುಷನೂ ಆದಿತ್ಯನೂ ಒಂದೇ; ಪ್ರತಿಯೊಂದು ಭೂತದಲ್ಲಿಯೂ ಈ ಆದಿತ್ಯನ ಅಂಶವೇ ವ್ಯಾಪಿಸಿ ಎಲ್ಲರಲ್ಲಿಯೂ ಒಂದೇ ತತ್ತ್ವದ ಪ್ರತಿಬಿಂಬವನ್ನು ಹರಡಿಸುತ್ತದೆ"[1]

---

1 ಮಹಾಪುರುಷ ಇತಿ ಯಮವೋಚಾಮ ಸಂವತ್ಸರ

ಏವ ಪ್ರಧ್ವಂಸಯನ್ನನ್ಯಾನಿ ಭೂತಾನ್ಯೇಕ್ಯಾ ಭಾವಯನ್ನನ್ಯಾನಿ

ತಸ್ಯೈತಸ್ಯಾಸಾವಾದಿತ್ಯೋ ರಸಃ | ಸ ಯಶ್ಚಾಯಮಶರೀರಃ

ಪ್ರಜ್ಞಾತ್ಮಾ ಯಶ್ಚಾಸಾವಾದಿತ್ಯ ಏಕಮೇತದಿತಿ ವಿದ್ಯಾತ್ |

ತಸ್ಮಾತ್ಪುರುಷಂ ಪುರುಷಂ ಪ್ರತ್ಯಾದಿತ್ಯೋ ಭವತಿ |

ತದಪ್ಯೇತದೃಷಿಣೋಕ್ತಂ | "ಚಿತ್ರಂ ದೇವಾನಾಂ...."

(ಐತರೇಯಾರಣ್ಯಕ. ೩.೨.೩.)

"ಪ್ರತ್ಯಙ್ ದೇವಾನಾಂ ವಿಶಃ ಪ್ರತ್ಯಙ್ಙುದೇಷಿ ಮಾನುಷಾನ್ |

ಪ್ರತ್ಯಙ್ ವಿಶ್ವಂ ಸ್ವರ್ದೃಶೇ ||

(ಋ. ಸಂ. ೧೦.೫೦.೫.)

"ತಸ್ಮಾತ್ಸರ್ವ ಏವ ಮನ್ಯಂತೇ ಮಾಂ ಪ್ರತ್ಯುದಗಾತ್ |

(ತೈ. ಸಂ. ೬.೫.೪.೨.)

ಎಂದು ತಿಳಿಸಿ ತನ್ನ ಪ್ರತಿಪಾದನೆಗೆ ಸಮರ್ಥನೆಯನ್ನು ತೋರಿಸಲು

**" ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ ।**
**ಆಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ॥"**

ಎಂಬ ಋಕ್ಸಂಹಿತಾವಾಕ್ಯವನ್ನುದ್ಧರಿಸಿದ್ದಾನೆ.[1] ವಿಶ್ವಜ್ಯೋತಿಯಾದ ಈ ಆದಿತ್ಯನನ್ನೇ ಉಪನಿಷತ್ತುಗಳಲ್ಲಿ "ಪರಂಜ್ಯೋತಿಃ", "ಜ್ಯೋತಿಷಾಂ ಜ್ಯೋತಿಃ " ಎಂದು ಪ್ರಶಂಸಿಸಿದೆ.[2]

" ದೇವತೆಗಳಿಗೆಲ್ಲ ಆತ್ಮವೂ, " " ಭುವನಗಳಿಗೆಲ್ಲ ಗರ್ಭವೂ " ಆದ ಈ ದಿವ್ಯತೇಜಸ್ಸು ವಿಶ್ವಗೃಹದಲ್ಲಿ ಮೂರು ಭಾಗವಾಗಿ ವ್ಯಾಪಿಸಿದೆ. ವಿಶ್ವ ಗೃಹದ ಆಯಾ ಭಾಗಕ್ಕೂ ಪ್ರತ್ಯೇಕವಾದ ಜ್ಯೋತಿಯು ವಿಭಕ್ತವಾಗಿ ಆಯಾ ಲೋಕಾಧಿಪತಿಗಳೆಂದು ಪ್ರಸಿದ್ಧವಾಗಿದೆ. ಈ ದಿವ್ಯಜ್ಯೋತಿಯ ಪ್ರಕಾರಾಂತರಗಳೇ ಅಗ್ನಿ, ವಾಯು (ಇಂದ್ರ) ಮತ್ತು ಆದಿತ್ಯರೆಂದು ಪ್ರಸಿದ್ಧರು.[3]

---

1 ೧.೧೧೫.೧.

2 ಬೃ. ಉ. ೪.೪.೧೬. ಇತ್ಯಾದಿ.

3 ಘರ್ಮಾ ಸಮಂತಾ ತ್ರಿವೃತಂ ವ್ಯಾಪತುಸ್ತಯೋರ್ಜುಷ್ಟಿಂ ಮಾತರಿಶ್ವಾ ಜಗಾಮ ।
೧೦.೧೧೪.೧. ಇತ್ಯಾದಿ

ಯಸ್ಯೋರುಷು ತ್ರಿಷು ವಿಕ್ರಮಣೇಷ್ವಧಿಕ್ಷಿಯಂತಿ ಭುವನಾನಿ ವಿಶ್ವಾ ।
(ಋ. ಸಂ. ೧.೧೫೪.೨)

**ವಿಷ್ಣುವಿನ ಅತ್ಯಂತ ವಿಸ್ತಾರವಾದವೂ ಮೂರು ಸಂಖ್ಯೆಯುಳ್ಳವೂ ಆದ ಪಾದಗಳ ಪ್ರಕ್ಷೇಪಗಳಲ್ಲಿ ಸಕಲ ಭೂತಜಾತಗಳೂ ನೆಲೆಸಿ ನಿಂತಿವೆ, ಎನ್ನುವಾಗ ಈ ಮೂರು ಪಾದಪ್ರಕ್ಷೇಪಗಳು ಯಾವುವು ? ಎಲ್ಲೆಲ್ಲಿ ಎಂಬ ವಿಷಯದಲ್ಲಿ ಅಭಿಪ್ರಾಯ ಭೇದಗಳಿವೆ.**

**ಪಾಶ್ಚಾತ್ಯಪಂಡಿತರು ಇದಕ್ಕೆ ಉದಯ, ಉಚ್ಚಸ್ಥನಾಗಿರುವಿಕೆ ಮತ್ತು ಅಸ್ತ ಎಂಬ ಸೂರ್ಯನ ಮೂರು ಅವಸ್ಥೆಗಳೆಂದರ್ಥಮಾಡಿದ್ದಾರೆ.**

This stepping of Vishnu is emblamatic of the rising, the culminating and the setting of the sun.

(Max. Muller, S. B E Vol. XXXII. P. 133)

ಔರ್ಣವಾಭಾದಿ ಪ್ರಾಚೀನಪಂಡಿತರೂ ಈ ಅರ್ಥವನ್ನು ಸಮರ್ಥಿಸಿದ್ದಾರೆಂದು ನಿರುಕ್ತವಾಕ್ಯಗಳಿಂದ ತಿಳಿಯುತ್ತದೆ.

"ಸಮಾರೋಹಣೇ ವಿಷ್ಣುಪದೇ ಗಯಶಿರಸೀತ್ಯೌರ್ಣವಾಭಃ"

(ನಿ. ೧೨.೧೯)

ಎಂಬ ವಾಕ್ಯವನ್ನು ನಿರುಕ್ತಕಾರರು ಉದಾಹರಿಸಿದ್ದಾರೆ. ಈ ವಾಕ್ಯಕ್ಕೆ ದುರ್ಗಾಚಾರ್ಯರ ವಿವರಣೆ ಈ ರೀತಿಯಿದೆ.

**ಸಮಾರೋಹಣೇ**— ಉದಯಗಿರಾವುದ್ಯನ್ ಪದಮೇಕಂ ನಿಧತ್ತೇ |
**ವಿಷ್ಣುಪದೇ** — ಮಾಧ್ಯಂದಿನೇಽಂತರಿಕ್ಷೇ
**ಗಯಶಿರಸಿ**— ಅಸ್ತಂಗಿರೌ

ಎಂದರೆ ಉದಯಾಚಲದಲ್ಲಿ ಸೂರ್ಯೋದಯಕಾಲದಲ್ಲಿ ಉದಯರೂಪದಲ್ಲಿ ಇಡತಕ್ಕ ಒಂದು ಪಾದವೂ, ಮಧ್ಯಾಹ್ನಕಾಲದಲ್ಲಿ ಅಂತರಿಕ್ಷದಲ್ಲಿ ಉಚ್ಚಸ್ಥವಾಗಿರತಕ್ಕ ಇನ್ನೊಂದು ಪಾದವೂ, ಅಸ್ತಕಾಲದಲ್ಲಿ ಅಸ್ತಾಚಲದಲ್ಲಿಡತಕ್ಕ ಮೂರನೆಯ ಪಾದವೂ "ತ್ರೇಧಾ ನಿದಧೇ ಪದಂ" ಎಂಬ ವಾಕ್ಯದಿಂದ ಸೂಚಿತವಾಗುತ್ತದೆಂದು ಔರ್ಣವಾಭರ ಮತವೆಂದು ನಿರುಕ್ತಕಾರರು ವಿವರಿಸಿದ್ದಾರೆ. ಅಲ್ಲದೆ,

ವಿಷ್ಣುಸ್ತ್ರಿಧಾ ಪದಂ ತ್ರೇಧಾಭಾವಾಯ ಪೃಥಿವ್ಯಾಮಂತರಿಕ್ಷೇ
ದಿವೀತಿ ಶಾಕಪೂಣಿಃ ||

(ನಿ. ೧೨.೧೯.)

ಪೃಥಿವೀ, ಅಂತರಿಕ್ಷ, ದ್ಯುಲೋಕ ಎಂಬ ಮೂರು ಲೋಕಗಳಲ್ಲೂ ಸಂಚರಿಸುವ ಸೂರ್ಯನ ಮೂರು ಅವಸ್ಥೆಗಳನ್ನು ಈ ಮೂರು ವಿಧವಾದ ಪಾದಪ್ರಕ್ಷೇಪವು ಸೂಚಿಸುತ್ತದೆ, ಎಂಬುದು ಶಾಕಪೂಣಿಯ ಮತವೆಂದು ತಿಳಿಸಿದೆ. ಇದನ್ನು ದುರ್ಗಾಚಾರ್ಯರು ವಿವರಿಸುತ್ತಾ,

"ಪಾರ್ಥಿವೋಽಗ್ನಿರ್ಭೂತ್ವಾ ಪೃಥಿವ್ಯಾಂ ಯತ್ಕಿಂಚದಸ್ತಿ ತದ್ವಿಕ್ರಮತೇ
ಅಂತರಿಕ್ಷೇ ವಿದ್ಯುದಾತ್ಮನಾ, ದಿವಿ ಸೂರ್ಯಾತ್ಮನಾ ||

ಅಗ್ನಿ, ವಾಯು ಮತ್ತು ಸೂರ್ಯರೂಪಗಳಿಂದ ಮೂರು ಲೋಕಗಳನ್ನೂ ಆಕ್ರಮಿಸುವುದಾಗಿ ತಾತ್ಪರ್ಯವೆಂದು ತಿಳಿಸಿದ್ದಾರೆ.

"ನನ್ನ ಸ್ವರೂಪಯೋಗ್ಯತೆಯಿಂದಲೇ ನಾನು ಸಕಲ ವಿಶ್ವವ್ಯವಹಾರಗಳನ್ನೂ ತಿಳಿದಿದ್ದೇನೆ. (ಜಾತವೇದನು). ನನ್ನ ತೇಜಸ್ಸು ಸ್ವಪ್ರಕಾಶಕವೂ ಜಗತ್ಪ್ರಕಾಶಕವೂ ಆಗಿದೆ. ಜಗತ್ತಿಗೆಲ್ಲ ಚೈತನ್ಯದಾಯಿಯಾದ ಪ್ರಾಣರೂಪನಾಗಿ ನನ್ನಪ್ರಕೃತಿಯನ್ನು ಮೂರು ವಿಭಾಗಮಾಡಿ ಪ್ರಸರಿಸಿದ್ದೇನೆ."[1]

(೧) ಅಂತರಿಕ್ಷಕ್ಕೆ ಅಧಿಷ್ಠಾತೃವಾದ ವಾಯುವೂ (ಇಂದ್ರನೂ) ನಾನೇ.

(೨) ಕ್ಷಯರಹಿತವೂ ಜಗತ್ಪ್ರಕಾಶಕವೂ ಆದ ಆದಿತ್ಯನೂ ನಾನೇ.

(೩) ಹವಿರ್ಭಕ್ಷಕನಾದ ಅಗ್ನಿಯೂ ನಾನೇ.

"ತ್ರೇಧಾತ್ಮಾನಂ ವ್ಯಕುರುತ" ಎಂದು ಬೃಹದಾರಣ್ಯಕೋಪನಿಷತ್ತಿನಲ್ಲಿ ಯಾವ ವಿಭಾಗಗಳು ಹೇಳಲ್ಪಟ್ಟವೆಯೋ ಅವಕ್ಕೆ ಋಕ್ಸಂಹಿತಾ ವಾಕ್ಯಗಳೇ ಆಧಾರ.[2]

ಜ್ಯೋತೀರೂಪವಾದ ಈ ಮೂರು ದೇವತೆಗಳೂ ಕೇಶಿಗಳೆಂದು ವ್ಯವಹೃತರಾಗಿದ್ದಾರೆ.[3] ಪ್ರಾರ್ಥಿವಾಗ್ನಿಯ ಜ್ವಾಲೆಯು ಕೇಶಿಗಳಂತಿರುವುದರಿಂದ

---

"ವಿಷ್ಣುಮುಖಾ ವೈ ದೇವಾಃ" (ತೈ. ಸಂ. ೧.೭ ೫.೪) ಸ ವಿಷ್ಣುಸ್ತ್ರೇಧಾತ್ಮಾನಂ ವಿ ನ್ಯಧತ್ತ (ತೈ. ಸಂ. ೨.೪.೧೨.೩) ಇತ್ಯಾದಿ ಸಂಹಿತಾ ವಾಕ್ಯಗಳೂ ಮತ್ತು "ಯದ್ವೇವ ವಿಷ್ಣುಕ್ರಮಾನ್ಕ್ರಮತೇ" (ಶ. ಬ್ರಾ. ೧.೯.೩.೯.) ಇತ್ಯಾದಿ ಬ್ರಾಹ್ಮಣ ವಾಕ್ಯಗಳೂ ಶಾಕಪೂಣಿಯವರ ಮತವನ್ನೇ ಸಮರ್ಥಿಸುತ್ತವೆ. ಅಗ್ನಿ, ವಾಯು ಮತ್ತು ಸೂರ್ಯ ಎಂಬ ಮೂರು ರೂಪಗಳಲ್ಲಿ ವಿಷ್ಣುವಿನ ಮೂರು ಪಾದಗಳೂ ಪೃಥಿವೀ ಅಂತರಿಕ್ಷ ಮತ್ತು ದ್ಯುಲೋಕಗಳಲ್ಲಿ ವ್ಯಾಪಿಸುತ್ತವೆಯೆಂದು ತಾತ್ಪರ್ಯ.

1 ಅಗ್ನಿರಸ್ಮಿ ಜನ್ಮನಾ ಜಾತವೇದಾ ಘೃತಂ ಮೇ ಚಕ್ಷುರಮೃತಂ ಮ ಆಸನ್ ।
ಅರ್ಕಸ್ತ್ರಿಧಾತೂ ರಜಸೋ ವಿಮಾನೋಽಜಸ್ರೋ ಘರ್ಮೋ ಹವಿರಸ್ಮಿ ನಾಮ ॥
(ಋ. ಸಂ. ೩.೨೬.೭.)

2 ೪.೫೮.೪. ಇತ್ಯಾದಿ.

3 ತ್ರಯಃ ಕೇಶಿನ ಋತುಥಾ ವಿಚಕ್ಷತೇ ಸಂವತ್ಸರೇ ವಪತ ಏಕ ಏಷಾಂ
ವಿಶ್ವಮೇಕೋ ಅಭಿ ಚಷ್ಟೇ ಶಚೀಭಿರ್ಧ್ರಾಜಿರೇಕಸ್ಯ ದದೃಶೇ ನ ರೂಪಂ।
೧.೧೬೪.೪೪.

ಅಗ್ನಿಗೆ ಕೇಶಿಯೆಂದು ಹೆಸರು. ಅಂತರಿಕ್ಷಸ್ಥನಾದ ವಾಯುವು ವಿದ್ಯುದ್ರೂಪದ ಪ್ರಭೆಗಳಿಂದಲೂ ದ್ಯುಲೋಕಸ್ಥನಾದ ಆದಿತ್ಯನು ರಶ್ಮಿರೂಪವಾದ ಕೇಶಗಳಿಂದಲೂ ಪ್ರಕಾಶಿಸುತ್ತಿರುವುದರಿಂದ ಇವರಿಗೆ ಕೇಶಿಗಳೆಂಬ ಹೆಸರು. ಈ ಮೂರು ಕೇಶಿಗಳ ಬಾಹ್ಯಸ್ವರೂಪಗಳು ಬೇರೆ ಬೇರೆಯಾಗಿರುವುದರಿಂದ ಅವರವರ ಪ್ರಕ್ರಿಯಾ ಭೇದಗಳನ್ನು "ತ್ರಯಃ ಕೇಶಿನಃ" ಎಂಬ ಋಕ್ಕಿನಲ್ಲಿ ವಿವರಿಸಿದೆ. ಆದರೆ, ಅವರ ಉತ್ಪತ್ತಿ, ಕ್ರಿಯಾವ್ಯಾಪ್ತಿ ಇವುಗಳನ್ನು ವಿಭಾಗಿಸಿ ಇದಮಿತ್ಥಂ ಎಂದು ನಿಷ್ಕೃಷ್ಟವಾಗಿ ಹೇಳಲು ಸಾಧ್ಯವಿಲ್ಲ. ಎಲ್ಲರೂ ಸರ್ವವ್ಯಾಪಿಗಳಾದುದರಿಂದ ಸ್ಥಾನವಿಭಾಗವೂ ಸಾಧ್ಯವಿಲ್ಲ ಎಂಬಂಶವನ್ನು ಬೃಹದ್ದೇವತಾಕಾರರು ಈ ರೀತಿ ತಿಳಿಸುತ್ತಾರೆ.

"ನ ಚೈವೇಷಾಂ ಪ್ರಸೂತಿರ್ವಾ ವಿಭೂತಿಸ್ಥಾನ ಜನ್ಮ ವಾ ।
ನಿರ್ವಕ್ತುಂ ಶಕ್ಯಮೇತೈರ್ಹಿ ಕೃತ್ಸ್ನಂ ವ್ಯಾಪ್ತಮಿದಂ ಜಗತ್"

(ಬೃಹದ್ದೇವತಾ ೧.೯೯)

ಇವರ ಪ್ರಸೂತಿಯಾಗಲಿ ಪ್ರಭಾವವಾಗಲಿ, ಸ್ಥಾನಭೇದಗಳಾಗಲಿ ನಿಷ್ಕೃಷ್ಟವಾಗಿ ಹೇಳಲಾಗುವುದಿಲ್ಲ. ಸಮಸ್ತ ಜಗತ್ತೂ ಇವರಿಂದ ವ್ಯಾಪ್ತವಾಗಿದೆ[1]

---

[1] "ವಸವೋ ಯದ್ವಿವಸತೇ ಸರ್ವಂ। ಅಗ್ನಿರ್ವಸುಭಿರ್ವಾಸವ ಇತಿ ಸಮಾಖ್ಯಾ। ತಸ್ಮಾತ್ ಪೃಥಿವೀಸ್ಥಾನಾಃ। ಇಂದ್ರೋ ವಸುಭಿರ್ವಾಸವ ಇತಿ ಸಮಾಖ್ಯಾ। ತಸ್ಮಾನ್ಮಧ್ಯಸ್ಥಾನಾಃ। ವಸವ ಆದಿತ್ಯರಶ್ಮಯೋ ವಿವಾಸನಾತ್। ತಸ್ಮಾದ್ದ್ಯುಸ್ಥಾನಾಃ।

(ನಿರುಕ್ತ. ೧೨.೪೧.)

ಸಕಲವನ್ನೂ ವ್ಯಾಪಿಸುವುದರಿಂದ ವಸುಸಂಜ್ಞೆಯಿಂದ ವ್ಯವಹಾರ. ಪೃಥ್ವಿಯನ್ನೂ ವ್ಯಾಪಿಸುವುದರಿಂದ ಅಗ್ನಿಗೆ ವಾಸವನೆಂಬ ಹೆಸರು. ಅಂತರಿಕ್ಷವನ್ನು ವ್ಯಾಪಿಸುವುದರಿಂದ ವಾಯುವಿಗೆ ವಾಸವನೆಂಬ ಹೆಸರು. ದ್ಯುಲೋಕವನ್ನೂ ವ್ಯಾಪಿಸುವುದರಿಂದ ಆದಿತ್ಯನೂ ವಾಸವಸಂಜ್ಞೆಯಿಂದ ನಿರ್ದಿಷ್ಟನು. ಹೀಗೆ ಪೃಥ್ವೀ, ಅಂತರಿಕ್ಷ ಮತ್ತು ದ್ಯುಲೋಕ ಈ ಮೂರು ಲೋಕಗಳನ್ನೂ ವ್ಯಾಪಿಸುವುದರಿಂದ ವಸು ಎಂಬ ವಿಶೇಷಣವು ಉಚಿತವಾಗಿದೆ.

cf. R.V. ೭.೮೯.೩.

"ಜ್ಯೋತಿಷಾಂ ಜ್ಯೋತಿಃ" ಎಂದು ವರ್ಣಿತವಾಗಿರುವ ದಿವ್ಯಜ್ಯೋತಿಯ ಪ್ರಕಾರಾಂತರಗಳಾದ ಅಗ್ನ್ಯಾದಿತ್ಯಾದಿಗಳು ಭ್ರಮಣಾತ್ಮಕರು. ಉದಯಾಸ್ತಗಳುಳ್ಳವರು. (ಮೂಲಜ್ಯೋತಿಯು ಮಾತ್ರ ಅಚರ, ನಿತ್ಯ)[1]. ವಿಶ್ವರಕ್ಷಣವು ಇವರಿಗೆ ಸೇರಿದುದು, ವಿಶ್ವಪ್ರಕಾಶನವು ಇವರ ಕರ್ತವ್ಯ.

"ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿಃ[2] ಎಂದು ಯಾವ ಉಷಸ್ಸನ್ನು ವರ್ಣಿಸಿದೆಯೋ ಆ ಉಷಸ್ಸನ್ನು ಈ ಮೂರು ಲೋಕಾಧಿಪತಿಗಳೂ ಸೇವಿಸುತ್ತಾರೆ. "ತ್ರಯೋ ವೀರಾ ಉಷಸಂ ಸಚಂತೇ"[3] ಎಂದರೆ, ಇವರು ಆ ಜ್ಯೋತಿಯ ಆಜ್ಞಾನುವರ್ತಿಗಳಾಗಿ ಮೂರು ಲೋಕಗಳಿಗೂ ಪ್ರಕಾಶಸಾಧಕರಾಗುತ್ತಾರೆಂದು ತಾತ್ಪರ್ಯ.

"ತ್ರಿಮೂರ್ಧಾ", "ತ್ರಿಧಾತು", "ತ್ರಿಪಾಜಸ್ಯ", "ತ್ರ್ಯನೀಕ" ಇತ್ಯಾದಿ ವಿಶೇಷಣಗಳು ಮೂಲ ಜ್ಯೋತಿಯ ಪ್ರಸಾರಕ್ರಮವನ್ನೂ ಕ್ರಿಯಾಪ್ರಭೇದಗಳನ್ನೂ ತಿಳಿಸುತ್ತವೆ. ಈ ಮೂಲಜ್ಯೋತಿಯನ್ನೇ ಅಗ್ನಿಯೆಂದು ಕೆಲವಡೆಗಳಲ್ಲಿಯೂ ಆದಿತ್ಯನೆಂದು ಇನ್ನು ಕೆಲವೆಡೆಗಳಲ್ಲಿಯೂ ಇಂದ್ರನೆಂದು ಕೆಲವು ಸನ್ನಿವೇಶಗಳಲ್ಲೂ ಸಂಬೋಧಿಸಿದೆ. ರಶ್ಮಿಗಳ ಮೂಲಕ ಜಗತ್ತಿನ ಸಾರವನ್ನು ಹಿಂಡುವುದರಿಂದ (ಆದತ್ತೇ ಹಿ ರಸಾನ್) ಆದಿತ್ಯನೆಂದು ಹೆಸರು.[4] ಇದೇ ಅಗ್ನಿಯು ತನ್ನ ರಶ್ಮಿಗಳಿಂದ ರಸವನ್ನು

---

1 ೩.೫೬.೨.

2 "ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿರಾಗಾಚ್ಚಿತ್ರಃ ಪ್ರಕೇತೋ ಅಜನಿಷ್ಟ ವಿಭ್ವಾ ।
ಯಥಾ ಪ್ರಸೂತಾ ಸವಿತುಃ ಸವಾಯನ್ ಏವಾ ರಾತ್ರ್ಯುಷಸೇ ಯೋನಿಮಾರೈಕ್ ॥"
(ಋ.ಸಂ.೧.೧೧೩.೧)

3 "ತ್ರಿರುತ್ತಮಾ ದೂಣಶಾ ರೋಚನಾನಿ ತ್ರಯೋ ರಾಜನ್ತ್ಯಸುರಸ್ಯ ವೀರಾಃ।
ಋತಾವಾನ ಇಷಿರಾ ದೂಳಭಾಸಸ್ತ್ರಿರಾ ದಿವೋ ವಿದಥೇ ಸಂತು ದೇವಾಃ ॥
(೩.೫೬.೮)

4 "ಆದಿತ್ಯಃ ಕಸ್ಮಾದಾದತ್ತೇ ರಸಾನಾದತ್ತೇ ಭಾಸಂ ।
ಜ್ಯೋತಿಷಾ ಮಾದೀಪ್ತೋ ಬಾಸೇತಿ ವಾದಿತೇಃ ಪುತ್ರ ಇತಿ ವಾ ॥
(ನಿರುಕ್ತ. ೨.೧೩)

ಏರಿ ವಾಯುಸಹಿತನಾಗಿ ಪುನಃ ಪೃಥ್ವಿಯ ಮೇಲೆ ವೃಷ್ಟಿಯನ್ನು ಸುರಿಸುತ್ತಾನೆ. ಆದುದರಿಂದಲೇ ಇಂದ್ರನೆಂದು ಪ್ರಸಿದ್ಧನು.[1]

ಸರ್ವಾತ್ಮಕನಾದ ಇದೇ ಅಗ್ನಿಯು ತನ್ನ ಅಂತಃಕರಣ ವೃತ್ತಿಯಿಂದ ಪೂಜ್ಯವೂ ಸ್ವಪ್ರಕಾಶಕವೂ ಆದ ಪರಬ್ರಹ್ಮಾಖ್ಯವಾದ ತೇಜಸ್ಸನ್ನು ಅರಿತು ಜಗತ್ಪಾವಕಗಳಾದ ಅಗ್ನಿ, ವಾಯು ಮತ್ತು ಸೂರ್ಯರೂಪಗಳಿಂದ ಕೂಡಿಯೂ ಅವುಗಳಿಂದ ವೈಶಿಷ್ಟ್ಯವನ್ನು ಹೊಂದಿಯೂ ಪ್ರಕಾಶಿಸುತ್ತಾನೆ. ಇದೇ ರೂಪಗಳಿಂದ ತನ್ನ ಆತ್ಮಪ್ರಸಾರವನ್ನು ಹೊಂದುತ್ತಾನೆ. ಉಳಿದ ಸಕಲ ದೇವತೆಗಳೂ ಅಗ್ನಿಯ ರೂಪಾಂತರಗಳಲ್ಲದೆ ಬೇರೆಯಿಲ್ಲ. "ಏಕಂ ಸದ್ವಿಪ್ರಾ ಬಹುಧಾ ವದಂತಿ" ಎಂಬ ಸಂಹಿತಾವಾಕ್ಯದ ನಿಷ್ಕೃಷ್ಟವಾದ ಅಭಿಪ್ರಾಯವೇ ಇದು. ಈ ವಾಕ್ಯದ ಏಕಶಬ್ದವು ಆದಿತ್ಯವಾಚಕವೆಂದು ಸಾಯಣರೂ, ಅಗ್ನಿವಾಚಕವೆಂದು ನಿರುಕ್ತಕಾರರೂ ತಾತ್ಪರ್ಯ ಮಾಡಿದ್ದಾರೆ. ಇಂದ್ರನೆಂದೂ ಹೇಳಬಹುದು. ಇವೆಲ್ಲ ಪರ್ಯಾಯನಾಮಗಳು. ಅಗ್ನಿಯೇ ಆದಿತ್ಯನು. ಅಗ್ನಿಯೇ ಇಂದ್ರನು. ಅಗ್ನಿಯೇ ಪರಮಾತ್ಮನು.

"ಅಗ್ನಿಯು ಮೊದಲನೆಯ ಸಲ ದ್ಯುಲೋಕದಲ್ಲಿ ಆದಿತ್ಯರೂಪದಲ್ಲಿ ಉತ್ಪನ್ನನಾದನು. ಎರಡನೆಯ ಸಲ ಜಾತವೇದೋರೂಪನಾಗಿ ಪೃಥ್ವಿಯ ಮೇಲೆ ಉತ್ಪನ್ನನಾದನು. ಮಾನವರಿಗೆ ಹಿತಕಾರಿಯಾದ ಅದೇ ಅಗ್ನಿಯು ಮೂರನೆಯ ಸಲ ವಿದ್ಯುದಾದಿ ರೂಪಗಳಲ್ಲಿ ಅಂತರಿಕ್ಷದಲ್ಲಿ ಜನಿಸಿದನು."[2] "ವೈಶ್ವಾನರ ರೂಪಿಯಾದ ದಿವ್ಯಾಗ್ನಿಯು ತನ್ನ ಅಲೌಕಿಕವಾದ ಶಕ್ತಿಯಿಂದ ಸಕಲ ಭೂತಗಳಿಗೂ ಪ್ರಧಾನಭೂತನಾಗಿ ರಾತ್ರಿಕಾಲದಲ್ಲಿ ಅಗ್ನಿರೂಪದಿಂದಲೂ, ಪ್ರಾತಃಕಾಲದಲ್ಲಿ ಸೂರ್ಯರೂಪದಿಂದಲೂ ಪ್ರಕಾಶಿಸುತ್ತ ತನ್ನ

---

1 ರಸಾನ್ರಶ್ಮಿಭಿರಾದಾಯ ವಾಯುನಾಯಂ ಗತಃ ಸಹ |
ವರ್ಷತ್ಯೇಷ ಚ ಯಲ್ಲೋಕೇ ತೇನೇಂದ್ರ ಇತಿ ಸ ಸ್ಮೃತಃ ||
(ಬೃಹದ್ದೇವತಾ ೧.೬೮)

2 ದಿವಸ್ಪರಿ ಪ್ರಥಮಂ ಜಜ್ಞೇ ಅಗ್ನಿರಸ್ಮದ್ದ್ವಿತೀಯಂ ಪರಿ ಜಾತವೇದಾಃ |
ತೃತೀಯಮಪ್ಸು ನೃಮಣಾ ಅಜಸ್ರಮಿಂಧಾನ ಏನಂ ಜರತೇ ಸ್ವಾಧೀಃ ||
(೧೦.೪೫.೧–೪; ತೈ.ಸಂ. ೧.೩.೧೪.೫)

"ಮಾತರಿಶ್ವನ್" ಎಂಬ ವಿಶೇಷಣವು ಅಗ್ನಿಯ ಈ ಮೂರು ರೂಪಗಳನ್ನೂ ತಿಳಿಸುತ್ತದೆ.

ಲೋಕರಕ್ಷಣಾ ಕಾರ್ಯವನ್ನು ನಿರ್ವಹಿಸುತ್ತಾನೆ. [1]

ಸಕಲ ರೂಪಗಳನ್ನು ಹೊಂದಿರುವುದರಿಂದಲೇ ಅಗ್ನಿಯು "ವಿಶ್ವಪ್ಸು" [2] ಎಂಬ ವಿಶೇಷಣದಿಂದ ವರ್ಣಿತನು. "ವಿಶ್ವಪ್ಸು" ವೆಂದರೆ ಸಕಲ ರೂಪ ಗಳನ್ನೂ ಹೊಂದಿರುವವನು ಎಂದರ್ಥ. "ಎಲೈ ಅಗ್ನಿಯೇ, ಇಷ್ಟಾರ್ಥ ಗಳನ್ನು ಸುರಿಸುವವನಾದುದರಿಂದ ನೀನೇ ಇಂದ್ರನು. ಎಲ್ಲರಿಂದಲೂ ಸ್ತುತಿಸಲ್ಪಡುವ ವಿಷ್ಣುವೂ ನೀನೇ. ಧನಸ್ವರೂಪವನ್ನು ತಿಳಿದ ಬ್ರಹ್ಮನೂ ನೀನೇ; ಧೃತವ್ರತನಾದ ವರುಣನೂ, ಶತ್ರುನಾಶಕನೂ ಸ್ತುತ್ಯನೂ ಆದ ಮಿತ್ರನೂ ನೀನೇ; ಅಭಿಮತಪ್ರದನಾದ ಅರ್ಯಮನೂ ನೀನೇ; ಸೂರ್ಯನ ಮೂರ್ತ್ಯಂತರವಾದ ಅಂಶನೂ ನೀನಲ್ಲದೆ ಬೇರೆಯಿಲ್ಲ. ಎಲೈ ಅಗ್ನಿಯೇ, ಮೂರು ಲೋಕಗಳಿಂದಲೂ ಅಸುರರನ್ನು ಓಡಿಸತಕ್ಕ ರುದ್ರನೇ ನೀನು; ನೀನೇ ಮರುತ್ಸಮೂಹವು" [3]

---

1 ಮೂರ್ಧಾ ಭುವೋ ಭವತಿ ನಕ್ತಮಗ್ನಿಸ್ತತಃ ಸೂರ್ಯೋ ಜಾಯತೇ ಪ್ರಾತರುದ್ಯನ್ |
ಮಾಯಾಮೂ ತು ಯಜ್ಞಿಯಾನಾಮೇತಾಮಪೋ ಯತ್ತೂರ್ಣಿಶ್ಚರತಿ ಪ್ರಜಾನನ್ ||
೧೦.೮೮.೬.

2 ೧.೧೪೮.೧.

3 ತ್ವಮಗ್ನೇ ದ್ಯುಭಿಸ್ತ್ವಮಾಶುಶುಕ್ಷಣಿಸ್ತ್ವಮದ್ಭ್ಯಸ್ತ್ವಮಶ್ಮನಸ್ಪರಿ |
ತ್ವಂ ವನೇಭ್ಯಸ್ತ್ವಮೋಷಧೀಭ್ಯಸ್ತ್ವಂ ನೃಣಾಂ ನೃಪತೇ ಜಾಯಸೇ ಶುಚಿಃ ||
ತ್ವಮಗ್ನ ಇಂದ್ರೋ ವೃಷಭಃ ಸತಾಮಸಿ ತ್ವಂ ವಿಷ್ಣುರುರುಗಾಯೋ ನಮಸ್ಯಃ |
ತ್ವಂ ಬ್ರಹ್ಮಾ ರಯಿವಿದ್ಬ್ರಹ್ಮಣಸ್ಪತೇ ತ್ವಂ ವಿಧರ್ತಃ ಸಚಸೇ ಪುರಂಧ್ಯಾ ||
ತ್ವಮಗ್ನೇ ರಾಜಾ ವರುಣೋ ಧೃತವ್ರತಸ್ತ್ವಂ ಮಿತ್ರೋ ಭವಸಿ ದಸ್ಮ ಈಡ್ಯಃ |
ತ್ವೇ ಅಗ್ನೇ ವಿಶ್ವೇ ಅಮೃತಾಸೋ ಅದ್ರುಹ ಆಸಾ ದೇವಾ ಹವಿರದನ್ತ್ಯಾಹುತಂ |
ತ್ವಯಾ ಮರ್ತಾಸಃ ಸ್ವದಂತ ಆಸುತಿಂ ತ್ವಂ ಗರ್ಭೋ ವೀರುಧಾಂ ಜಜ್ಞಿಷೇ ಶುಚಿಃ ||
(ಋ. ಸಂ. ೨.೧. ೧-೧೪.)

ದಿವ್ಯಾಗ್ನಿಯು ತನ್ನ ಶಕ್ತಿಯಿಂದಲೇ ತನ್ನ ಸ್ವರೂಪವು ಈ ರೀತಿಯಲ್ಲೆಲ್ಲ ವಿಸ್ತೃತವಾಗುವಂತೆ ಮಾಡಿಕೊಳ್ಳುತ್ತಾನೆ. ಆದುದರಿಂದಲೇ "ತನೂನಪಾತ್" ಎಂಬ ವಿಶೇಷಣ. ಮೂರು ಲೋಕಗಳಲ್ಲೂ ಇವನೇ ವ್ಯಾಪಿಸಿರುವುದರಿಂದ ಇವನು "ತ್ರಿತ" ನೆಂದು ವ್ಯವಹೃತನು,[1] ಆದುದರಿಂದಲೇ ಇವನಿಗೆ ಮೂರು ಬಂಧನಗಳು.[2] ಈ ಬಂಧನಾನುಸಾರ ಕರ್ತವ್ಯ ನಿರ್ವಹಣಮಾಡುವಂತೆ "ತ್ರಯೋ ವೀರಾಃ" ಎಂದು ಪ್ರಸಿದ್ಧರಾಗಿದ್ದಾರೆ. ಈ ಲೋಕಾಧಿಪತಿಗಳ ಲೋಕರಕ್ಷಣ ಕರ್ತವ್ಯಗಳು ನಾನಾಮುಖಗಳಾಗಿರುವುದರಿಂದ ಈ ಮೂವರೂ ಇನ್ನೂ ಅವಾಂತರ ರೂಪಗಳಿಂದಲೂ ವ್ಯವಹೃತರಾಗಿರುತ್ತಾರೆ. ಮಿತ್ರಾವರುಣಾದಿ ರೂಪಾಂತರಗಳೆಲ್ಲವೂ ಈ ಮೂರ್ತಿತ್ರಯದ ವಿಭೂತಿ ವಿಶೇಷಗಳೇ ಆಗಿವೆ. "ಮಿತ್ರೋ ಅಗ್ನಿರ್ಭವತಿ ಯತ್ಸಮಿದ್ಧೋ ಮಿತ್ರೋ ಹೋತಾ ವರುಣೋ ಜಾತವೇದಾಃ"[3] ಇತ್ಯಾದಿ ಸಂಹಿತಾ ವಾಕ್ಯಗಳು ಈ ವಿಷಯವನ್ನು ತಿಳಿಸುತ್ತವೆ. "ಮಹಾಭಾಗ್ಯಾದ್ದೇವತಾಯಾ ಏಕ ಆತ್ಮಾ ಬಹುಧಾ ಸ್ತೂಯತೇ ಏಕಸ್ಯಾತ್ಮನಃ ಅನ್ಯೇ ದೇವಾಃ ಪ್ರತ್ಯಂಗಾನಿ ಭವಂತಿ" ಎಂದು ನಿರುಕ್ತಕಾರರ ವಿವರಣೆ.

"ನ ಹಿ ವೋ ಅಸ್ತ್ಯರ್ಭಕೋ ದೇವಾಸೋ ನ ಕುಮಾರಕಃ |
ವಿಶ್ವೇ ಸತೋ ಮಹಾಂತ ಇತ್ ||

ಎಲೈ ದೇವತೆಗಳೇ ನಿಮ್ಮಲ್ಲಿ ಚಿಕ್ಕವರು ಯಾರೂ ಇಲ್ಲ. ನೀವೆಲ್ಲರೂ[4] ಮಹಾತ್ಮರು, ಪೂಜ್ಯರು; ಇತ್ಯಾದಿ ವಾಕ್ಯಗಳು ಈ ಅಭಿಪ್ರಾಯವನ್ನು ಸಮರ್ಥಿಸುತ್ತವೆ.

---

1 ಅಮೀ ಯೇ ಸಪ್ತ ರಶ್ಮಯಸ್ತತ್ರಾ ಮೇ ನಾಭಿರಾತತಾ |
ತ್ರಿತಸ್ತದ್ವೇದಾಪ್ತ್ಯಃ ಸ ಜಾಮಿತ್ವಾಯ....||
೧.೧೦೫.೯.
cf ೧೦.೪೬.೩, ೬. ಇತ್ಯಾದಿ.

2 ಅಸಿ ಯಮೋ ಅಸ್ಯಾದಿತ್ಯೋ ಅರ್ವನ್ನಸಿ ತ್ರಿತೋ ಗುಹ್ಯೇನ ವ್ರತೇನ |
ಅಸಿ ಸೋಮೇನ ಸಮಯಾ ವಿಪೃಕ್ತ ಆಹುಸ್ತೇ ತ್ರೀಣಿ ದಿವಿ ಬಂಧನಾನಿ ||
(೧.೧೬೩.೩)

3 ೩.೫.೪.

4 ೮.೩೦.೧.

ಮೇಲೆ ತಿಳಿಸಿದಂತೆ, ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕಗಳಿಗೆ ಅಧಿಪತಿಗಳಾದ ಅಗ್ನ್ಯಾದಿಗಳ ವ್ಯಾಪಕತ್ವ ಮತ್ತು ಕರ್ತವ್ಯಗಳಿಗನುಗುಣವಾಗಿ ಇವರು ಇನ್ನೂ ಅನೇಕ ಹೆಸರುಗಳಿಂದಲೂ ಪ್ರಸಿದ್ಧರು. ಆದುದರಿಂದ ಉಳಿದ ದೇವತೆಗಳನ್ನೆಲ್ಲ ಈ ಮೂವರ ಲೋಕಗಳಿಗನುಸಾರವಾಗಿ ವಿಂಗಡಿಸಿದೆ.

ಅಗ್ನಿಭಕ್ತಿಸ್ತುತಾನ್ ಸರ್ವಾನಗ್ನಾವೇವ ಸಮಾಪಯೇತ್ |
ಯದಿಂದ್ರಭಕ್ತಿ ತಚ್ಚೇಂದ್ರೇ ಸೂರ್ಯೇ ಸೂರ್ಯಾನುಗಂ ಚ ಯತ್ ||
(ಬೃ. ದೇ. ೧.೨೨.)

(೧) ಅಗ್ನಿಯೊಡನೆ ಪೃಥ್ವೀಸ್ಥರಾದ ದೇವತೆಗಳು.
(೨) ಇಂದ್ರನೊಡನೆ ಅಂತರಿಕ್ಷಸ್ಥರು.
(೩) ಆದಿತ್ಯನೊಡನೆ ದ್ಯುಲೋಕಸ್ಥರು.

ಈ ಸಕಲ ದೇವತೆಗಳೂ ಆಯಾ ಲೋಕಾಧಿಪತಿಗಳಿಗಿಂತ ಭಿನ್ನರಲ್ಲ. ಅವರವರ ಅಂಶ ವಿಶೇಷಗಳೇ. ಬೃಹಸ್ಪತ್ಯಾದಿಗಳು ಅಗ್ನಿಯ ರೂಪಭೇದ, ವಾಯ್ವಾದಿಗಳು ಇಂದ್ರನ ಅಂಶ ವಿಶೇಷಗಳು. ವರುಣಾದಿಗಳು ಆದಿತ್ಯತತ್ತ್ವದ ಪ್ರಭೇದಗಳು. ಈ ವಿಭಾಗಗಳೆಲ್ಲವೂ ವ್ಯಾವಹಾರಿಕ, ಇವೂ ನಿಷ್ಕೃಷ್ಟವಾದ ಪ್ರಾದೇಶಿಕ ಪರಿಮಿತಿಯನ್ನು ತೋರಿಸುವುದಿಲ್ಲ. ತತ್ತತ್ಕರ್ಮಾನುಸಾರವಾಗಿ ಅಗ್ನಿಯೇ ಮಿತ್ರಾವರುಣಾದಿ ನಾಮಭೇದಗಳನ್ನು ಹೊಂದುತ್ತಾನೆಂದು ಅನೇಕ ಕಡೆಗಳಲ್ಲಿ ಸ್ತುತಿಸಿದೆ. ವರುಣಾದಿಗಳು ಇಂದ್ರನೊಡನೆಯೂ ತಾದಾತ್ಮ್ಯವನ್ನು ಹೊಂದುತ್ತಾರೆ. ಅವರ ಮೂಲಸ್ವರೂಪವು ಅದಿತ್ಯತತ್ತ್ವವನ್ನು ಪ್ರತಿಬಿಂಬಿಸುವುದಾಗಿದೆ.

ಅಶ್ವಿನೀದೇವತೆಗಳಾರು, ಅವರ ಸ್ವರೂಪವೇನು ಎಂಬುದು ಯಾಸ್ಕಾದಿಗಳಿಗೂ ವಿವಾದಾಸ್ಪದವಾದ ವಿಷಯ. ಅಹೋರಾತ್ರಗಳೆಂದು ಕೆಲವರು; ಸೂರ್ಯಾಚಂದ್ರಮಸರೆಂದು ಕೆಲವರು; ದೇವವೈದ್ಯರೆಂದು ಇನ್ನು ಕೆಲವರು; ಸರ್ವವ್ಯಾಪಿಗಳಾದುದರಿಂದ ದ್ಯಾವಾಪೃಥಿವಿಗಳಿಗೆ ಈ ಹೆಸರೆಂದು ಒಂದು ಮತ. ಇವರಲ್ಲಿ ಒಬ್ಬನು ಅಂತರಿಕ್ಷೋತ್ಪನ್ನನು. ಇನ್ನೊಬ್ಬನು ದ್ಯುಲೋಕೋತ್ಪನ್ನನೆಂದು ಋಕ್ಸಂಹಿತೆಯಲ್ಲಿ ಒಂದೆರಡು ಕಡೆ ತಿಳಿಸಿದೆ.[1] ಆದುದ

1 ಇಹೇಹ ಜಾತಾ ಸಮವಾವಶೀತಾಮರೇಪಸಾ ತನ್ವಾ ನಾಮಭಿಃ ಸ್ವೈಃ |
ಜಿಷ್ಣುರ್ವಾಮನ್ಯಃ ಸುಮಖಸ್ಯ ಸೂರಿರ್ದಿವೋ ಅನ್ಯಃ ಸುಭಗಃ ಪುತ್ರ ಊಹೇ || ೧,೧೮೧,೪.

ರಿಂದ ಸೂರ್ಯಾಚಂದ್ರಮಸರೆಂದು ಹೇಳುವವರು ಈ ವಾಕ್ಯಗಳನ್ನು ಆಧಾರ ವಾಗಿ ತೋರಿಸುತ್ತಾರೆ.[1] ಈ ಕಾರಣದಿಂದಲೆ ಒಬ್ಬನು ಇಂದ್ರ, ಇನ್ನೊ

1 ತಮೋ ಭಾಗೋ ಹಿ ಮಧ್ಯಮೋ, ಜ್ಯೋತಿರ್ಭಾಗ ಆದಿತ್ಯಃ ॥
(ನಿರುಕ್ತ. ೧೨.೧.)

## ಅಶ್ವಿನೀದೇವತೆಗಳು—

ವೈದಿಕ ಮತ್ತು ಆಧುನಿಕ ಆಂಗ್ಲ ಪಂಡಿತರ ಅಭಿಪ್ರಾಯಗಳನ್ನು ಕ್ರೋಡೀಕರಿಸಿದರೆ ಈ ಅಭಿಪ್ರಾಯಗಳು ಕಂಡು ಬರುತ್ತವೆ.

| **Scholars.** | | **Their opinions.** |
|---|---|---|
| (1) Yaska | ... | Twilight before Dawn ; half dark and half light. |
| (2) Aurnavabha | ... | Light rays. |
| (3) Oldenberg | ... | Morning or evening star. |
| (4) Maedonell | ... | Twilight or Morning stars. |
| (5) Bloomfield | ... | Morning or evening stars. |
| (6) Hopkins | ... | Transition from darkness to light. |
| (7) Bergaine | ... | Fire of Heaven and of the Altar. |
| (8) Historians | ... | Two pious kings. |
| (9) E. N. Ghosh | ... | Two stars of Aswini. |
| (10) Weber | ... | Twin Constellation of Gemini. |
| (11) Shama Sastry | ... | The Sun and the Moon. |
| (12) Max Muller | ... | Personification of morning and evening. |

ಕೆಲವು ಋಕ್ಸಂಹಿತಾ ವಾಕ್ಯಗಳು ಈ ದೇವತೆಗಳ ವಿಷಯವನ್ನು ಕೊಂಚ ಮಟ್ಟಿಗೆ ತಿಳಿಸುತ್ತವೆ. ಉದಾಹರಣೆಗೆ--

ತ್ವಷ್ಟಾ ದುಹಿತ್ರೇ ವಹತುಂ ಕೃಣೋತೀತೀದಂ ವಿಶ್ವಂ
ಭುವನಂ ಸಮೇತಿ ।
ಯಮಸ್ಯ ಮಾತಾ ಪರ್ಯುಹ್ಯಮಾನಾ ಮಹೋ ಜಾಯಾ
ವಿವಸ್ವತೋ ನನಾಶ ॥

ಅಪಾಗೂಹನ್ನಮೃತಾಂ ಮರ್ತ್ಯೇಭ್ಯಃ ಕೃತ್ವೀ ಸವರ್ಣಾಮದದುರ್ವಿವಸ್ವತೇ |
ಉತಾಶ್ವಿನಾವಭರದ್ಯತ್ತದಾಸೀದಜಹಾದು ದ್ವಾ ಮಿಥುನಾ ಸರಣ್ಯೂಃ ||

(ಋ. ಸಂ ೧೦.೧೭. ೧-೨)

ತ್ವಷ್ಟೃವು ತನ್ನ ಮಗಳ ವಿವಾಹಕಾಲದಲ್ಲಿ ಸಕಲ ಪ್ರಪಂಚವೂ ಒಟ್ಟಿಗೆ ಸೇರಿ ಕಲಿಯಲಿ ಎಂದುದ್ದೇಶಿಸಿದನು. ಯಮನ ಮಾತೆಯೂ ವಿವಸ್ವಂತನ ಪತ್ನಿಯೂ ಆದ ಅವಳು ವಿವಾಹಾನಂತರವೇ ಅದೃಶ್ಯಳಾದಳು; ಎಂದರೆ, ಅವರು ಅಮರ್ತ್ಯಳಾದ ಅವಳನ್ನು ಮರ್ತ್ಯರ ದೃಷ್ಟಿಗೆ ಗೋಚರವಾಗದಂತೆ ಮರೆಸಿಟ್ಟರು. ಆಗ ಅವರು ಅವಳನ್ನು ಸವರ್ಣಳನ್ನಾಗಿ ಮಾಡಿ ವಿವಸ್ವಂತನಿಗೆ ಕೊಟ್ಟರು. ಅನಂತರ ಅವಳು ಅಶ್ವಿನೀ ದೇವತೆಗಳನ್ನು ಹಡೆದಳು.

(ಸರಣ್ಯು ಎಂಬ ಹೆಸರಿನಿಂದ ಪ್ರಸಿದ್ಧಳಾದ ಅವಳು ಅಶ್ವಿನೀದೇವತೆಗಳನ್ನು ತನ್ನ ಪುತ್ರರನ್ನಾಗಿ ಬಿಟ್ಟು ಹೋದಳು ಎಂದು ಮೇಲಿನ ಋಕ್ಕುಗಳ ತಾತ್ಪರ್ಯ).

ಇನ್ನೊಂದು ಸಂದರ್ಭದಲ್ಲಿ—

ಯಮಾ ಚಿದತ್ರ ಯಮಸೂರಸೂತ ಜಿಹ್ವಾಯಾ ಅಗ್ರಂ
ಪತದಾ ಹ್ಯಸ್ಥಾತ್ |
ವಪೂಂಷಿ ಜಾತಾ ಮಿಥುನಾ ಸಚೇತೇ ತಮೋಹನಾ
ತಪುಷೋ ಬುಧ್ನ ಏತಾ ||

(ಋ. ಸಂ. ೩.೩೯.೩)

ಯಮಳರ ಮಾತೆಯು (ಎಂದರೆ ಅಶ್ವಿನೀ ದೇವತೆಗಳ ಮಾತೆಯು) ಯಮಳರನ್ನು ಹಡೆದಳು. ಆ ಯಮಳರಿಬ್ಬರೂ ಶರೀರಿಗಳಾಗಿ ತಮಸ್ಸನ್ನು ನಾಶಮಾಡಿದರು ಎಂದು ಹೇಳಿದೆ. ಮಾಕ್ಸ್ ಮುಲ್ಲರ್ ಎಂಬ ಪಂಡಿತನು ಈ ಋಕ್ಕನ್ನುದಾಹರಿಸಿ ತನ್ನ ಅಭಿಪ್ರಾಯವನ್ನು ಈ ರೀತಿ ಹೇಳಿದ್ದಾನೆ.

"We might have guessed from the text itself, even without the help of the commentator, that 'The mother of the Twins' here spoken of is Dawn ; but it may be stated that the commentator, too, adopts this view".

(Science of Language. Vol. II. P. 530)

ಬ್ಬನು ಆದಿತ್ಯ ಎಂದೂ ಹೇಳಬಹುದು. ಹೀಗೆಯೇ, ಉಷಸ್ಸು, ಅದಿತಿ ಇತ್ಯಾದಿ ದೇವತೆಗಳ ಸ್ವರೂಪವನ್ನೂ ಇದಮಿತ್ಥಂ ಎಂದು ನಿಷ್ಕೃಷ್ಟವಾಗಿ ಹೇಳಲು ಸಾಧ್ಯವಿಲ್ಲ.[1]

---

ಇವರಿಬ್ಬರೂ ತೇಜೋವಿಶೇಷಗಳು ಎಂದು ಇನ್ನೊಂದು ಮಂತ್ರವು ತಿಳಿಸುತ್ತದೆ.

ಅತಿ ದ್ರವ ಸಾರಮೇಯೌ ಶ್ವಾನೌ ಚತುರಕ್ಷೌ ಶಬಲೌ

ಸಾಧುನಾ ಪಥಾ |

(೧೦.೧೪.೧೦.)

ಇಲ್ಲಿ ವರ್ಣಿತವಾಗಿರುವ ಶ್ವದ್ವಯದ ವಿಷಯದಲ್ಲಿ Max Muller ಪಂಡಿತನ ಅಭಿಪ್ರಾಯವಿದು.

" These two dogs represent Time, in double aspect as morning and evening. Representing Time in all forms of its double aspect as morning and evening, day and night, bright and dark fortnights, bright and dark halves of the year, the two dogs probably are identical with the two Aswins "

(Science of Language. Vol. II).

ಎಂದರೆ, ಯಮನನ್ನು ಹಿಂಬಾಲಿಸತಕ್ಕ ಈ ಶ್ವದ್ವಯವು ಕಾಲದ ಅವಯವಗಳೆಂದು ಹೇಳಬಹುದು. ಅಹೋರಾತ್ರರೂಪದಲ್ಲಾಗಲಿ, ಪ್ರಾತಃಕಾಲ ಮತ್ತು ಸಾಯಂಕಾಲರೂಪದಲ್ಲಾಗಲಿ, ಅಥವಾ ಶುಕ್ಲಕೃಷ್ಣಪಕ್ಷರೂಪಗಳಲ್ಲಾಗಲಿ, ಅಥವಾ ಉತ್ತರಾಯಣ ಮತ್ತು ದಕ್ಷಿಣಾಯನ ರೂಪಗಳಲ್ಲಾಗಲಿ ಇದ್ದಿರಬಹುದು. ಇವೇ ಅಶ್ವಿನೀ ದೇವತೆಗಳನ್ನು ಪ್ರತಿಬಿಂಬಿಸುವ ಪ್ರಕೃತಿವಿಭಾಗಗಳು.

ಹೀಗೆ ಯಾವ ದೇವತೆಯನ್ನು ತೆಗೆದುಕೊಂಡರೂ ಆ ದೇವತೆಯ ಸ್ವರೂಪವನ್ನು ಇದಮಿತ್ಥಂ ಎಂದು ನಿಷ್ಕರ್ಷಿಸಲು ಸಾಧ್ಯವಿಲ್ಲ. ಪ್ರಕೃತದಲ್ಲಿ ಉದಾಹರಣೆಗಾಗಿ ಒಂದು ಸನ್ನಿವೇಶವನ್ನು ಮಾತ್ರ ತಿಳಿಸಿದೆ. ಹೀಗೆಯೇ ಪೂಷನ್, ಉಷಸ್ ಇತ್ಯಾದಿ ಉಳಿದ ದೇವತೆಗಳ ಸ್ವರೂಪ ವರ್ಣನ ಕ್ರಮವನ್ನು ಮುಂದಿನ ಭಾಗದಲ್ಲಿ ವಿಮರ್ಶಿಸ ಲಾಗುತ್ತದೆ.

1 ಉಷಸ್, ಅದಿತಿ ಇತ್ಯಾದಿ ಸಕಲದೇವತೆಗಳ ಸ್ವರೂಪವನ್ನೂ II ನೇ ಭಾಗದಲ್ಲಿ ವಿವರಿಸಲಾಗುತ್ತದೆ.

cf ಋಕ್ಸಂಹಿತಾ; ಭಂಗ II. (ವಿಶ್ವಜ್ಯೋತಿ; ಅದರ ನಾನಾಮುಖಗಳು).

ಕೆಲವೆಡೆಗಳಲ್ಲಿ ಇವರಿಗೆ ಪ್ರಾದೇಶಿಕವಾದ ಪರಿಮಿತಿಯನ್ನು ತೋರಿಸಿದೆ. ಇನ್ನು ಕೆಲವೆಡೆಗಳಲ್ಲಿ ಸರ್ವವ್ಯಾಪಕತ್ವವನ್ನು ತೋರಿಸಿದೆ. ಪೂಷ, ಭಗ ಇತ್ಯಾದಿ ದೇವತೆಗಳ ಸ್ವರೂಪವೂ ಹೀಗೆಯೇ. ಯಾವ ದೇವತೆಯನ್ನು ಯಾವ ರೀತಿ ವರ್ಣಿಸಿದರೂ ಸಕಲರೂ ದಿವ್ಯಜ್ಯೋತಿಯ ಅಂಶವಿಶೇಷಗಳೆಂದು ಹೇಳುವುದಕ್ಕೆ ಅಡ್ಡಿಯಿಲ್ಲ. ಚಿಚ್ಛಕ್ತಿಯುಳ್ಳ ಸಕಲ ದೇವತೆಗಳೂ ಮೂಲತತ್ತ್ವದ ನಿಯಮಾನುವರ್ತಿಗಳಾಗಿ ವಿಶ್ವನಿರ್ವಹಣಕ್ರಮವನ್ನು ಪರಿಪಾಲಿಸುತ್ತಾರೆ.

ಅದ್ವಿತೀಯವಾದ ಮೂಲತತ್ತ್ವವು ನಾನಾರೂಪಗಳಿಂದ ಜಗತ್ತಿನ ವ್ಯವಹಾರವನ್ನು ಮುಂದುವರಿಸುತ್ತಿದೆ. ಸೂರ್ಯ, ಸವಿತೃ ಇತ್ಯಾದಿ ರೂಪಗಳಿಂದ ಜಗತ್ಸೃಷ್ಟಿ ಮತ್ತು ಪ್ರೇರಕ; ಪೂಷಾದಿರೂಪಗಳಿಂದ ಜಗತ್ಪೋಷಕ; ಉಷಸ್ ಮತ್ತುಸೂರ್ಯಾದಿ ರೂಪಗಳಿಂದ ಜಗತ್ಪ್ರಕಾಶಕ; ವರುಣಾದಿ ರೂಪಗಳಿಂದ ಜಗದ್ರಕ್ಷಕ. ಹೀಗೆ ಸಕಲ ಕ್ರಿಯೆಗಳೂ ದಿವ್ಯಜ್ಯೋತಿಯ ಪ್ರೇರಣೆಯಿಂದಲೇ ನಡೆಯುತ್ತಿವೆ. ಈ ಸಕಲ ವ್ಯಾಪಾರಗಳೂ " ಸವಿತೃ " ಶಬ್ದದಿಂದ ಸೂಚಿತವಾಗುತ್ತವೆ. [1]

ವರುಣಾದಿ ದೇವತೆಗಳಿಗೆ ವೈಯಕ್ತಿಕವಾದ ಗುರಿ ಯಾವುದೂ ಇಲ್ಲ. ಮೂಲತತ್ತ್ವದ ಗುರಿ ಯಾವುದೋ ಅದನ್ನು ಸಾಧಿಸುವುದೇ ಉಳಿದ ದೇವತೆಗಳ ಕಾರ್ಯ. ಅದೇ ವಿಶ್ವನಿಯಮಪಾಲನ.

" ವಿಶ್ವೇ ದೇವಾಃ ಸಮನಸಃ ಸಕೇತಾ ಏಕಂ ಕ್ರತುಮಭಿ
ವಿ ಯಂತಿ ಸಾಧು ".

6. 9.5.

" ಭಜಂತ ವಿಶ್ವೇ ದೇವತ್ವಂ ನಾಮ ಋತಂ ಸಪಂತೋ
ಅಮೃತಮೇವೈಃ "

I. 68.2.

ದೇವಮಾನವಾದಿಗಳೆಲ್ಲರೂ ವಿಶ್ವನಿಯಮವನ್ನನುಸರಿಸುವುದರಿಂದಲೇ ದಿವ್ಯತ್ವವನ್ನು ಹೊಂದುತ್ತಾರೆ, ಮತ್ತು ವಿಶ್ವಸಾಮರಸ್ಯವನ್ನು ಸಂಪಾದಿಸುತ್ತಾರೆ.

---

1 ' ಪರಬ್ರಹ್ಮ ' ನೇ ಸವಿತೃ ಶಬ್ದವಾಚ್ಯನು ಎಂಬುದನ್ನು ' ಪುರುಷಾರ್ಥ ಸಾಧನ ' ಪ್ರಕರಣದಲ್ಲಿ ತಿಳಿಸಲಾಗುತ್ತೆ.

# ವಿ ಶ್ವ ನಿ ಯ ಮ

## ೧. ಋತ.

ಜಗತ್ತನ್ನು ವ್ಯಾಪಿಸಿರುವುದೂ, ಜಗತ್ತನ್ನು ಮೀರಿರುವುದೂ ಆದ ವಿಶ್ವನಿಯಮವು ಋತಶಬ್ದವಾಚ್ಯವಾಗಿದೆ.[1] ವಿಶ್ವದಲ್ಲಿ ಯಾವ ಯಾವ ವ್ಯವಹಾರಗಳು ನಿಯಮಬದ್ಧವಾಗಿ ನಡೆಯುವುವೋ ಅವೆಲ್ಲವೂ ಋತದ ನಿಯಮವನ್ನೇ ಅನುಸರಿಸುತ್ತಿವೆಯೆಂದರ್ಥ. ಜಂಗಮಾತ್ಮಕಗಳಾದ ಜಗತ್ತಿನ ವ್ಯವಹಾರಗಳನ್ನು ನಿಯಮನದಲ್ಲಿಡುವ ಮೂಲಶಕ್ತಿಯೇ ಇದು. ಇಂದ್ರಾದಿ ದೇವತೆಗಳು ಈ ನಿಯಮಕ್ಕೆ ಅಧೀನರು ಮತ್ತು ಇದರ ರಕ್ಷಕರು. ವ್ಯತ್ಯಾಸವನ್ನು ಹೊಂದುವ ಸಕಲ ಜಗದ್ವ್ಯವಹಾರಗಳ ನಡುವೆ ವ್ಯತ್ಯಾಸವನ್ನು ಹೊಂದದ ಆದಿಶಕ್ತಿಯೂ ಇದೇ. ನಿಯಮಬದ್ಧವಾದ ಸಕಲ ಜಗದ್ವ್ಯವಹಾರಗಳೂ ಇದೇ. ಜಗತ್ತಿನ ಕ್ರಿಯಾಶಕ್ತಿ, ವ್ಯವಹಾರ ನಿಯಮ, ಕ್ರಮ ಇವೆಲ್ಲವೂ ಋತಶಬ್ದದಿಂದ ಸೂಚಿತವಾಗುತ್ತವೆ.

ಋತದ ಶಕ್ತಿಯು ಅಲೌಕಿಕ, ಅಸಾಧಾರಣ; ಇದರ ಸ್ವರೂಪವು ಅತ್ಯಂತ ದೃಢ ಮತ್ತು ಆಕರ್ಷಕ. ಅನಂತವೂ ಗಭೀರವೂ ಆದ ದ್ಯಾವಾಪೃಥಿವಿಗಳ ಅಸ್ತಿತ್ವ ಮತ್ತು ವಿಸ್ತೃತಿಯು ಋತದ ಆಧಾರದ ಮೇಲೆ.[2] ಆದಿತ್ಯರೂಪಿಯಾದ ಇಂದ್ರನು ಅಂತರಿಕ್ಷದಲ್ಲಿ ಉದಯಿಸಿ ಜಗತ್ತನ್ನು

---

1 ಋತಶಬ್ದಕ್ಕೆ ಆಯಾಸಂದರ್ಭಾನುಸಾರವಾಗಿ ಉದಕ, ಯಜ್ಞ, ಆದಿತ್ಯ ಸತ್ಯ ಇತ್ಯಾದ್ಯನೇಕಾರ್ಥಗಳು ಸಾಧ್ಯ. ಪ್ರಕೃತದಲ್ಲಿ ವಿಶ್ವನಿಯಮವನ್ನು ಸೂಚಿಸುವ ಸಂದರ್ಭಗಳನ್ನು ಮಾತ್ರ ಉದಾಹರಿಸಿದೆ.

2 ಋತಸ್ಯ ದೃಳ್ಹಾ ಧರುಣಾನಿ ಸಂತಿ ಪುರೂಣಿ ಚಂದ್ರಾ
ವಪುಷೇ ವಪೂಂಷಿ ।
ಋತೇನ ದೀರ್ಘಮಿಷಣಂತ ಪೃಕ್ಷ ಋತೇನ ಗಾವ
ಋತಮಾ ವಿವೇಶುಃ ॥
ಋತಂ ಯೇಮಾನ ಋತಮಿದ್ವನೋತ್ಯೃತಸ್ಯ ಶುಷ್ಮ
ಸ್ತುರಯಾ ಉ ಗವ್ಯುಃ ।
ಋತಾಯ ಪೃಥ್ವೀ ಬಹುಲೇ ಗಭೀರೇ ಋತಾಯ ಧೇನೂ
ಪರಮೇ ದುಹಾತೇ ॥
(ಋ. ಸಂ. ೪.೨೩. ೮–೧೦)

cf ೫.೧೫.೨.

ಪ್ರಕಾಶಗೊಳಿಸುವುದು ಋತದ ನಿಯಮಾನುಸಾರ.[1] "ಮಿತ್ರಾವರುಣರ ಚಕ್ಷೂರೂಪಿಯಾದ ಆದಿತ್ಯನ ತೇಜಸ್ಸು ಋತದ ಪ್ರತಿಬಿಂಬ.[2] ಸಂವತ್ಸರ ರೂಪಿಯಾದ ಆದಿತ್ಯನ ಚಕ್ರವು ಋತದ ಪಥವನ್ನೇ ಅನುಸರಿಸುತ್ತದೆ.[3] ಉಷಸ್ಸಿನ ಆವಿರ್ಭಾವ ಮತ್ತು ಜಗತ್ಪ್ರಕಾಶಕ ಕ್ರಿಯೆಯು ಋತಧರ್ಮದ ಅನುಸರಣ.[4] ನದ್ಯಾದಿಗಳ ಪ್ರವಾಹವು ಋತನಿಯಮನದ ಪ್ರಕಾರ.[5]

---

1 ಅಯಂ ರೋಚಯದರುಚೋ ರುಚಾನೋ೭ಯಂ
ವಾಸಯದ್ವ್ಯೃತೇನ ಪೂರ್ವೀಃ |
ಅಯಮೀಯತ ಋತಯುಗ್ಭಿರಶ್ವೈಃ ಸ್ವರ್ವಿದಾ ನಾಭಿನಾ
ಚರ್ಷಣಿಪ್ರಾಃ ||
(೬.೩೯.೪.)

2 ಉದು ತ್ಯಚ್ಚಕ್ಷುರ್ಮಹಿ ಮಿತ್ರಯೋರಾನ್ ಏತಿ
ಪ್ರಿಯಂ ವರುಣಯೋರದಬ್ಧಂ |
ಋತಸ್ಯ ಶುಚಿ ದರ್ಶತಮನೀಕಂ ರುಕ್ಮೋ ನ ದಿವ
ಉದಿತಾ ವ್ಯದ್ಯೌತ್ ||
(೬.೫೧.೧.)

3 ಇದಮು ತ್ಯನ್ಮಹಿ ಮಹಾಮನೀಕಂ ಯದುಸ್ರಿಯಾ ಸಚತ
ಪೂರ್ವ್ಯಂ ಗೌಃ |
ಋತಸ್ಯ ಪದೇ ಅಧಿ ದೀದ್ಯಾನಂ ಗುಹಾ ರಘುಷ್ಯದ್ರಘುಯದ್ವಿ
ವೇದ|| (೪.೫.೯.)

cf ೧.೧೬೪.೧೧; ೧.೧೪೬.೩. ಇತ್ಯಾದಿ

4 ದ್ಯುತದ್ಯಾಮಾನಂ ಬೃಹತೀಮೃತೇನ ಋತಾವರೀಮರುಣಪ್ಸುಂ
ವಿಭಾತೀಂ |
ದೇವೀಮುಷಸಂ ಸ್ವರಾವಹಂತೀಂ ಪ್ರತಿ ವಿಪ್ರಾಸೋ
ಮತಿಭಿರ್ಜರಂತೇ ||
cf ೧.೧೨೩.೯. (೫.೮೦.೧.)

5 ಋತೇನ ದೇವೀರಮೃತಾ ಅಮೃಕ್ತಾ ಅರ್ಣೋಭಿರಾಪೋ
ಮಧುಮದ್ಭಿರಗ್ನೇ |
ವಾಜೀ ನ ಸರ್ಗೇಷು ಪ್ರಸ್ತುಭಾನಃ ಪ್ರ ಸದಮಿತ್ಸ್ರವಿತವೇ
ದಧನ್ಯುಃ ||
(೪.೩.೧೨.)

ಋತದ ಸ್ವರೂಪವೆರಡು; ಜಗದ್ವ್ಯಾಪಕತ್ವ ಮತ್ತು ಜಗದತಿರಿಕ್ತತ್ವ. ದೇಶಕಾಲಾತೀತವಾದ ಋತವನ್ನು ದೇವತೆಗಳು ಜಗತ್ತಿನಲ್ಲಿ ಸತ್ಯಾತ್ಮಕವೂ ವ್ಯವಹಾರ ಯೋಗ್ಯವೂ ಆದುದನ್ನಾಗಿ ಮಾಡುತ್ತಾರೆ.[1] ಆದುದರಿಂದಲೇ ಅವರು ಋತಾವಾನಃ, ಋತಾವೃಧಃ ಇತ್ಯಾದಿ ವಿಶೇಷಣಗಳಿಂದ ವರ್ಣಿತರು.[2] ಋತವು ದೇವತೆಗಳಿಗಿಂತಲೂ ಅಧಿಕ. ಇವರ ಉತ್ಪತ್ತಿಯು ಋತದ ಧರ್ಮಪಾಲನೆಗಾಗಿ. ಆದುದರಿಂದ ಋತಜಾಃ, ಋತಜಾತಾಃ ಎಂದು ಇವರನ್ನು ನಿರ್ದೇಶಿದೆ.[3]

ಅವ್ಯಕ್ತವಾದ ಋತವು ವ್ಯಕ್ತವೂ ಕ್ರಿಯಾತ್ಮಕವೂ ಆದ ರೂಪವನ್ನು ಹೊಂದಿರುವಾಗ ಅದನ್ನು ರಥಕ್ಕೂ ಅದರ ಆವಿರ್ಭಾವಕ್ಕೆ ಸಹಾಯ ಮಾಡುವ ವರುಣಾದಿ ದೇವತೆಗಳನ್ನು ಸಾರಥಿಗಳಿಗೂ ಹೋಲಿಸಿದೆ.[4] ಋತದ ಮಾರ್ಗವನ್ನನುಸರಿಸುವುದರಿಂದಲೇ ದೇವತೆಗಳೂ ಮಾಹಾತ್ಮ್ಯವನ್ನು ಹೊಂದುತ್ತಾರೆ.

"ತಿಸ್ರೋ ಭೂಮೀರ್ಧಾರಯನ್ ತ್ರೀರುತ ದ್ಯೂನ್ ತ್ರೀಣಿ
ವ್ರತಾ ವಿದಥೇ ಅಂತರೇಷಾಂ ।
ಋತೇನಾದಿತ್ಯಾ ಮಹಿ ವೋ ಮಹಿತ್ವಂ ತದರ್ಯಮನ್ವರುಣ
ಮಿತ್ರ ಚಾರು ॥[5]
(೨.೨೭.೮.)

ಋತದ ಸಹಾಯದಿಂದಲೇ ಮಿತ್ರಾವರುಣರು ಜಗತ್ತಿನ ಪ್ರಭುತ್ವವನ್ನು ಹೊಂದಲು ಶಕ್ತರು.[6]

---

1 ಋತಾದನ್ಯತ ಮಾದದಾಥೇ ॥ ೧.೧೩೯.೨.

2 ೩.೧೦.೨, ೫.೬೩.೧, ೬.೫೧.೩, ೭.೬೬.೧೩, ೧೦.೮.೫ ಇತ್ಯಾದಿ

3 ೩.೫೮.೮, ೫.೬೧.೧೪. ಇತ್ಯಾದಿ

4 ೮.೮೩.೩, ಇತ್ಯಾದಿ (ಋತಸ್ಯ ರಥ್ಯಾಃ)

5 ಋತೇನಾದಿತ್ಯಾ ಬಲಿನಃ. ೧೦.೮೫.೧.

6 ಧರ್ಮಣಾ ಮಿತ್ರಾವರುಣಾ ವಿಪಶ್ಚಿತಾ ವ್ರತಾ ರಕ್ಷೇಥೇ ಅಸುರಸ್ಯ ಮಾಯಯಾ ।
ಋತೇನ ವಿಶ್ವಂ ಭುವನಂ ವಿ ರಾಜಥಃ ಸೂರ್ಯಮಾ ಧತ್ಥೋ ದಿವಿ ಚಿತ್ರ್ಯಂ ರಥಂ ॥
(೫.೬೩.೭.)

ಋತದ ಮಾರ್ಗವನ್ನನುಸರಿಸುವುದು ದೇವತೆಗಳಿಗೆ ಸ್ವರೂಪಸಿದ್ಧವಾದುದು. ಆದುದರಿಂದಲೇ ಋತಪಾಲನವು ಅವರ ಕರ್ತವ್ಯ. ಮಿತ್ರಾವರುಣಾದಿ ಸಕಲ ದೇವತೆಗಳೂ ಋತಪಾಲಕರಾಗಿರುವುದರಿಂದ ಅವರಿಗೆ ವ್ರತಪರೆಂಬ ವಿಶೇಷಣದಿಂದಲೂ ಪ್ರಶಂಸೆಯಿರುತ್ತದೆ.

ಅಗ್ನಿ, ಇಂದ್ರ, ಆದಿತ್ಯ ಇವರೆಲ್ಲರೂ ವ್ರತಪರು. "ವೈಶ್ವಾನರಾಗ್ನಿಯು ಆದಿತ್ಯರೂಪದಿಂದ ಅತ್ಯುತ್ಕೃಷ್ಟವಾದ ದ್ಯುಲೋಕದಲ್ಲಿ ಉತ್ಪನ್ನನಾಗಿ ಸಕಲ ವ್ರತಗಳನ್ನೂ ನೆರವೇರಿಸುತ್ತಾನೆ. ಉತ್ತಮವಾದ ಕರ್ಮಕರ್ತನಾದ ಅಗ್ನಿಯು ಸೂರ್ಯರೂಪದಲ್ಲಿ ದ್ಯುಲೋಕವನ್ನು ಬೆಳಗುತ್ತಿದ್ದಾನೆ.[1]

" ಎಲೈ ಪಾರ್ಥಿವಾಗ್ನಿಯೇ ಸಕಲ ದೇವಮಾನವಾದಿಗಳಿಗೂ ಆದರ್ಶನಾಗಿ ನೀನು ವ್ರತಪಾಲಕನಾಗಿದ್ದೀಯೆ "[2]

"ವ್ರತಪಾಲಕನಾದ ಇಂದ್ರನು ಮಾತ್ರ ವೈಶ್ವಾನರಾಗ್ನಿಯಸ್ವರೂಪವನ್ನರಿಯಬಲ್ಲನು "

" ದ್ಯಾವಾಪೃಥಿವಿಗಳೆಲ್ಲವೂ ಪರ್ಜನ್ಯಾತ್ಮಕನಾದ ಇಂದ್ರನ ವ್ರತಕ್ಕನುಸಾರವಾಗಿ ನಿಂತಿವೆ"[3]

ಇತ್ಯಾದಿ ವಾಕ್ಯಗಳು ದೇವತೆಗಳ ವ್ರತಪಾಲಕತ್ವವನ್ನು ವರ್ಣಿಸುತ್ತವೆ. ಈ ವ್ರತಪಾಲಕತ್ವವು ಸಕಲ ದೇವತೆಗಳಿಗೂ ವಿಹಿತವಾಗಿದ್ದರೂ

---

1 ಸ ಜಾಯಮಾನಃ ಪರಮೇ ವ್ಯೋಮನಿ ವ್ರತಾನ್ಯಗ್ನಿರ್ವ್ರತಪಾ ಅರಕ್ಷತ |
ವ್ಯಂತರಿಕ್ಷಮಮಿಮೀತ ಸುಕ್ರತುರ್ವೈಶ್ವಾನರೋ ಮಹಿನಾ ನಾಕಮಸ್ಪೃಶತ್ ||
(೬.೮.೨.)

2 ತ್ವಮಗ್ನೇ ವ್ರತಪಾ ಅಸಿ ದೇವ ಆ ಮರ್ತ್ಯೇಷ್ವಾ |
(೮.೧೧.೧.)

3 ಯಸ್ಯ ವ್ರತೇ ಪೃಥಿವೀ ನನ್ನಮೀತಿ ಯಸ್ಯ ವ್ರತೇ ಶಫವಜ್ಜರ್ಭುರೀತಿ |
ಯಸ್ಯ ವ್ರತ ಓಷಧೀರ್ವಿಶ್ವರೂಪಾಃ ಸ ನಃ ಪರ್ಜನ್ಯ ಮಹಿ ಶರ್ಮ ಯಚ್ಛ ||
(೫.೮೩.೫)

ಆದಿತ್ಯರು 1 ಈ ಕರ್ತವ್ಯನಿರ್ವಹಣದಲ್ಲಿ ಅಧಿಕವಾಗಿ ಪ್ರಸಿದ್ಧರು. ಅದರಲ್ಲೂ ಮಿತ್ರಾವರುಣರೇ ಋತಾವೃಧರು, ಧೃತವ್ರತರು, ಋತಾಧ್ಯಕ್ಷರು ಎಂಬ ವಿಶೇಷಣಗಳಿಂದ ಅಧಿಕವಾಗಿ ಶಂಸಿತರಾಗಿದ್ದಾರೆ. ಸಕಲ ಲೋಕಗಳಿಗೂ ಪ್ರಭುವಾದ ವರುಣನ ವ್ರತಗಳನ್ನನುಸರಿಸಿ ಸಕಲ ಜ್ಯೋತಿರ್ಮಂಡಲಗಳೂ

---

1 ಆದಿತ್ಯರು

ಆದಿತ್ಯರು ಯಾರು ? ಎಷ್ಟು ಮಂದಿ ಎಂಬ ವಿಷಯದಲ್ಲಿ ಋಕ್ಸಂಹಿತೆಯಲ್ಲಿಯೇ ಒಂದೊಂದು ಕಡೆ ಒಂದೊಂದು ವಿಧವಾಗಿ ಹೇಳಿದೆ. ಉದಾಹರಣೆಗೆ—

ಶೃಣೋತು ಮಿತ್ರೋ ಅರ್ಯಮಾ ಭಗೋ ನಸ್ತುವಿಜಾತೋ
ವರುಣೋ ದಕ್ಷೋ ಅಂಶಃ ॥

(೨.೨೭.೧)

ಮಿತ್ರ, ವರುಣ, ಭಗ, ಅರ್ಯಮ, ದಕ್ಷ, ಅಂಶ ಈ ಆರು ಮಂದಿಯೂ ಅದಿತಿಪುತ್ರರಾದ ಆದಿತ್ಯರೆಂದು ತಿಳಿಸಿ ಇವರನ್ನು ಪ್ರಶಂಸಿಸಿದೆ.

"ದೇವಾ ಆದಿತ್ಯಾ ಯೇ ಸಪ್ತ"

(೯.೧೧೪.೩.)

ಎಂಬ ಋಕ್ಕಿನಲ್ಲಿ ಅದಿತಿಪುತ್ರರಾದ ಆದಿತ್ಯರು ಏಳು ಮಂದಿಯೆಂದಿದೆ. ಇಲ್ಲಿ ನಾಮನಿರ್ದೇಶವಿಲ್ಲ. ಮತ್ತು, ಬೇರೆ ಕಡೆ,

ಅಷ್ಟೌ ಪುತ್ರಾಸೋ ಅದಿತೇರ್ಯೇ ಜಾತಾಸ್ತನ್ವಸ್ಪರಿ ।
ದೇವಾ ಉಪಪ್ರೈತ್ಸಪ್ತಭಿಃ ಪರಾ ಮಾರ್ತಾಂಡಮಾಸ್ಯತ್ ॥
ಸಪ್ತಭಿಃ ಪುತ್ರೈರದಿತಿರುಪಪ್ರೈತ್ಪೂರ್ವ್ಯಂ ಯುಗಂ ।
ಪ್ರಜಾಯೈ ಮೃತ್ಯವೇ ತ್ವತ್ಪುನರ್ಮಾರ್ತಾಂಡಮಾಭರತ್ ॥

(೧೦.೭೨. ೮–೯.)

ಯಾವ ಮಿತ್ರಾದಿ ದೇವತೆಗಳು ಅದಿತಿಯ ದೇಹದಿಂದ ಉತ್ಪನ್ನರಾದರೋ ಅಂಥ ಅದಿತಿಯ ಪುತ್ರರು ಎಂಟು ಮಂದಿ. ಅವರಲ್ಲಿ ಏಳು ಪುತ್ರರೊಂದಿಗೆ

ಅದಿತಿಯು ದೇವತೆಗಳನ್ನು ಸಮೀಪಿಸಿದಳು. ಸೂರ್ಯನನ್ನು ಮಾತ್ರ ಮೇಲಕ್ಕೆ ಕಳುಹಿ ಅಂತರಿಕ್ಷದಲ್ಲಿ ಸ್ಥಾಪಿಸಿದಳು. ಇದೇ ಏಳು ಜನರೊಂದಿಗೆ ಹಿಂದಿನ ಯುಗಕ್ಕೆ ಹೋಗಿ ಸೇರಿದಳು. ಎಂಟನೆಯವನಾದ ಆದಿತ್ಯನನ್ನು ಪ್ರಾಣಿಗಳ ಉತ್ಪತ್ತಿಗಾಗಿಯೂ ಅವುಗಳ ಕ್ಷಯಕ್ಕಾಗಿಯೂ ದ್ಯುಲೋಕದಲ್ಲಿ ಸ್ಥಾಪಿಸಿದಳು ಎಂದಿದೆ. ಈ ಎಂಟು ಜನರ ಹೆಸರನ್ನೂ ತೈತ್ತಿರೀಯಾರಣ್ಯಕದಲ್ಲಿ ಸ್ಪಷ್ಟವಾಗಿ ತಿಳಿಸಿದೆ.

ಅಷ್ಟೌ ಪುತ್ರಾಸೋ ಅದಿತೇಃ........
... . ತಾನನು ಕ್ರಮಿಷ್ಯಾಮಃ । ಮಿತ್ರಶ್ಚ ವರುಣಶ್ಚ ।
ಧಾತಾ ಚಾರ್ಯಮಾ ಚ । ಅಂಶಶ್ಚ ಭಗಶ್ಚ ।
ಇಂದ್ರಶ್ಚ ವಿವಸ್ವಾಂಶ್ಚೇತ್ಯೇತೇ ॥

(ತೈ. ಆ. ೧.೧೩.೩)

**ಮಿತ್ರ, ವರುಣ, ಧಾತಾ, ಅರ್ಯಮಾ, ಅಂಶ, ಭಗ, ಇಂದ್ರ, ವಿವಸ್ವಾನ್** ಎಂಬುವರೇ ಈ ಎಂಟು ಮಂದಿ-

"**ಅದಿತಿಃ ಪುತ್ರಕಾಮಾ**" ಇತ್ಯಾದಿ ತೈತ್ತಿರೀಯ ಬ್ರಾಹ್ಮಣ ವಾಕ್ಯಗಳು (ತೈ. ಬ್ರಾ. ೧.೧.೯. ೧-೩) ಅದಿತಿಗೆ ಈ ಎಂಟು ಮಂದಿ ಪುತ್ರರೂ ಹುಟ್ಟಿದ ಕ್ರಮವನ್ನು ತಿಳಿಸುತ್ತವೆ.

"ತನ್ನೋ ನಃ ಸವಿತಾ ಭಗೋ ವರುಣೋ ಮಿತ್ರೋ ಅರ್ಯಮಾ" ಎಂಬ ಋಕ್ಸಂಹಿತಾ ವಾಕ್ಯದಲ್ಲಿ ಭಗಾದಿಗಳ ಜೊತೆಯಲ್ಲಿ **ಸವಿತೃವೂ** ಸೇರಿಸಲ್ಪಟ್ಟಿದ್ದಾನೆ. (ಋ. ಸಂ. ೮.೧೮.೩.). ಬೃಹದ್ದೇವತಾ ವಾಕ್ಯವು ಆದಿತ್ಯರ ಸಂಖ್ಯೆ ಹನ್ನೆರಡು ಎಂದು ತಿಳಿಸುತ್ತದೆ. ಅವರು ಯಾರೆಂದರೆ—

**ಭಗ, ಅರ್ಯಮಾ, ಅಂಶ, ಮಿತ್ರ, ವರುಣ, ಧಾತಾ, ವಿಧಾತಾ, ವಿವಸ್ವಾನ್, ತ್ವಷ್ಟಾ, ಪೂಷನ್ ಇಂದ್ರ ಮತ್ತು ವಿಷ್ಣು.**

(ಬೃ. ದೇ. ೫. ೧೪೭-೧೪೭)

ಇದೇ ದ್ವಾದಶಾದಿತ್ಯರು ಪುರಾಣಾದಿಗಳಲ್ಲಿ ಪ್ರಸಿದ್ಧರು.

ತಮ್ಮ ತಮ್ಮ ಕರ್ತವ್ಯಗಳನ್ನು ನಿರ್ವಹಿಸುತ್ತವೆ. ವರುಣನ ವ್ರತವನ್ನು ಯಾರೂ ಮೀರಲಾರರು.[1]

ಸತ್ಯ, ಋತ ಇವು ಅನೇಕವೇಳೆ ಒಂದೇ ಅರ್ಥವನ್ನು ಹೇಳುವ ಪದಗಳು. ಇದರಂತೆಯೇ ಅಸತ್ಯ, ಅನೃತ ಇವು ಇವಕ್ಕೆ ವಿರುದ್ಧವೃತ್ತಿಯನ್ನು ತೋರಿಸುವ ಪದಗಳು. ಸರ್ವಲೋಕಪ್ರಭುವಾದ ವರುಣನು ಸಕಲ ಲೋಕಗಳ ಸತ್ಯಾನೃತಗಳನ್ನೂ ವೀಕ್ಷಿಸುತ್ತ ಸಂಚರಿಸುತ್ತಾನೆ.[2] ಆದುದರಿಂದಲೇ ಸಕಲ ಲೋಕಗಳೂ ವರುಣನಿಗೆ ಬೆದರುತ್ತವೆ.[3]

ವರುಣಾದಿಗಳ ಋತಪಾಲನವು ಎರಡು ವಿಧ. ಮೊದಲನೆಯದಾಗಿ ತಾವು ಧೃತವ್ರತರಾಗಿರುವುದು. ಎರಡನೆಯದಾಗಿ ಋತದ ನಿಯಮಕ್ಕೆ ವಿರುದ್ಧವಾಗಿ ವರ್ತಿಸುವವರನ್ನು ಶಿಕ್ಷಿಸುವುದು;[4] ಮತ್ತು ಋತಪಾಲಕರಿಗೆ ಸಕಲ ಸೌಭಾಗ್ಯಗಳನ್ನೂ ಒದಗಿಸುವುದು. ಋತಪಾಲಕರಿಗೆ ಪ್ರಕೃತಿಯ ಸಕಲ ಅಂಶಗಳೂ ಹಿತಕರವಾಗಿಯೇ ಇರುತ್ತವೆ.[5]

ಋತಕ್ಕೆ ವಿರುದ್ಧವಾದ ವರ್ತನವು ಸಾಧಾರಣವಾಗಿ ಮೂರು ಪದಗಳಿಂದ ಸೂಚಿತವಾಗಿರುತ್ತೆ. ಅನೃತ, ವೃಜಿನ ಮತ್ತು ದ್ವಯ. ಅನೃತಾತ್ಮಕವೂ, ವೃಜಿನಪೂರಿತವೂ ಮತ್ತು ದ್ವಯಾತ್ಮಕವೂ ಆದ ಜೀವನವು ಶಿಕ್ಷೆಗೆ ಅರ್ಹ. ಅನೃತದಿಂದ ಋತವನ್ನು ಬೇರೆ ಮಾಡಿ ತಮ್ಮ ಪ್ರಭುತ್ವದಿಂದ ರಾಷ್ಟ್ರಕ್ಕೆ ಕ್ಷೇಮವನ್ನುಂಟುಮಾಡಬೇಕೆಂದು ವರುಣಾದಿಗಳನ್ನು ಪ್ರಾರ್ಥ

---

1 ಅಮೀ ಯ ಋಕ್ಷಾ ನಿಹಿತಾಸ ಉಚ್ಚಾ ನಕ್ತಂ ದದೃಶ್ರೇ ಕುಹ ಚಿದ್ದಿವೇಯುಃ |
ಅದಬ್ಧಾನಿ ವರುಣಸ್ಯ ವ್ರತಾನಿ ವಿಚಾಕಶಚ್ಚಂದ್ರಮಾ ನಕ್ತಮೇತಿ ||
cf. ೩.೫೪.೮. (೧.೨೪.೧೦)

2 ಯಾಸಾಂ ರಾಜಾ ವರುಣೋ ಯಾತಿ ಮಧ್ಯೇ ಸತ್ಯಾನೃತೇ ಅವಪಶ್ಯಞ್ಜನಾನಾಂ |
(೭.೪೯.೩.)

3 ನ ವಾಂ ದೇವಾ ಅಮೃತಾ ಆ ಮಿನಂತಿ ವ್ರತಾನಿ ಮಿತ್ರಾವರುಣಾ ಧ್ರುವಾಣಿ |
(೫.೬೯.೪)

4 ೧೦.೧೨.೫ ಇತ್ಯಾದಿ

5 "ಮಧು ವಾತಾ ಋತಾಯತೇ, ಮಧು ಕ್ಷರಂತಿ ಸಿಂಧವಃ"
(೧.೯೦.೬.) ಇತ್ಯಾದಿ

ಸಿದೆ. [1] ವರುಣಾದಿಗಳು ಪಾಲಿಸುವ ವ್ರತಕ್ಕೆ ಭಂಗತರುವುದರಿಂದ ಅಂಥಾ ದೇವತೆಗಳ ವಿಷಯದಲ್ಲಿ ಮಾತ್ರ ಅಪಚಾರವಲ್ಲ; ಅದು ವಿಶ್ವನಿಯಮಕ್ಕೇ ಉಂಟಾಗತಕ್ಕ ಭಂಗ, ಆದರಿಂದ ಕಠಿನವಾದ ಶಿಕ್ಷೆಯು ಸಂಭವಿಸುತ್ತದೆ.

“ ಋತಧರ್ಮವನ್ನು ಉಲ್ಲಂಘಿಸುವವರಿಗೆ ಅಗ್ನಿಯು ಕ್ರೂರವಾದ ಶಿಕ್ಷೆಯನ್ನು ವಿಧಿಸುತ್ತಾನೆ. [2]

“ ಮಿತ್ರಾವರುಣರು ಅನೃತವನ್ನು ನಾಶಮಾಡಿ ಋತದ ಮೂಲಕ ವೃದ್ಧಿಯನ್ನು ಹೊಂದುತ್ತಾರೆ. [3]

“ ಜಗಚ್ಚಕ್ಷುವಾದ ಸೂರ್ಯನು ಮಾನವರ ಋಜುತ್ವವಾವುದು ಮತ್ತು ಅನೃಜುತ್ವವಾವುದು ಎಂಬುದನ್ನು ನೋಡುತ್ತಾನೆ. ” [4]

ದ್ವಯಾತ್ಮಕವೆಂದರೆ, ಕುಟಿಲಾತ್ಮಕವಾದ, ವಂಚಕಸ್ವಭಾವವುಳ್ಳ ವ್ಯವಹಾರವೆಂದರ್ಥ. ಅದು ಋಜುವಾದುದಲ್ಲ. ಅಸತ್ಯ, ಅನೃತಗಳಿಂದ ಕೂಡಿದೆ. ಆದುದರಿಂದ ಈ ಮಾರ್ಗವನ್ನು ಬಿಟ್ಟು ಋತಮಾರ್ಗದಲ್ಲಿ

---

1 **ನಿರ್ಮಾಯಾ ಉ ತ್ಯೇ ಅಸುರಾ ಅಭೂವನ್ ತ್ವಂ ಚ ಮಾ ವರುಣ ಕಾಮಯಾಸೇ |**
**ಋತೇನ ರಾಜನ್ನನೃತಂ ವಿವಿಂಚನ್ ಮಮ ರಾಷ್ಟ್ರಸ್ಯಾಧಿಪತ್ಯಮೇಹಿ ||**
(೧೦.೧೨೪.೫)

2 “ ....**ಋತಂ ಯೋ ಅಗ್ನೇ ಅನೃತೇನ ಹಂತಿ |**
**ತಮರ್ಚಿಷಾ ಸ್ಫೂರ್ಜಯನ್....** ”
೧೦.೮೭.೧೧.

3 **ಇಮೇ ಚೇತಾರೋ ಅನೃತಸ್ಯ ಭೂರೇರ್ಮಿತ್ರೋ ಅರ್ಯಮಾ ವರುಣೋ ಹಿ ಸಂತಿ |**
(೭.೬೦.೫)

4 **ಋಜು ಮರ್ತೇಷು ವೃಜಿನಾ ಚ ಪಶ್ಯನ್ನಭಿ ಚಷ್ಟೇ ಸೂರೋ ಅರ್ಯ ಏವಾನ್ ||**
(೬.೫೧೦. ೧–೨)
**ಅ ಸೂರ್ಯೋ ಬೃಹತಸ್ತಿಷ್ಠದಜ್ರಾನ್ ಋಜು ಮರ್ತೇಷು ವೃಜಿನಾ ಚ ಪಶ್ಯನ್ |**
(೪.೧.೧೭.)

ನಡೆಯಲು ಪುರುಷನು ಆಸೆಪಡುತ್ತಾನೆ. ಪುರುಷದೋಷದಿಂದ ಈ ಮಾರ್ಗ ವನ್ನು ಅಕಸ್ಮಾತ್ತಾಗಿ ತಪ್ಪಿದರೆ ಅಗ್ನ್ಯಾದಿಗಳ ಕ್ಷಮೆಯನ್ನು ಬೇಡಿ ಸತ್ಪಥ ದಲ್ಲಿ ಒಯ್ಯುವಂತೆ ಪ್ರಾರ್ಥಿಸಿದೆ.[1] ಯಾವಾಗಲೂ ಋತದ ಪಥವನ್ನೇ ಅನುಸರಿಸುತ್ತಿದ್ದರೆ ವೃಜಿನ (ಪಾಪ) ನಾಶವಾಗುವುದು ಖಂಡಿತ.[2] ಋತದ ಪಥವನ್ನೇ ಅನುಸರಿಸುತ್ತಿರುವುದರಿಂದ ಸೂರ್ಯನು ಅದ್ವಯಾವಿನ್[3]

---

1 ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್ (೧.೧೮೯.೧)

cf ೧೦.೧೩೩.೬. ಇತ್ಯಾದಿ

2 ಋತಸ್ಯ ಧೀತಿರ್ವೃಜಿನಾನಿ ಹಂತಿ |

೪.೨೩.೮.

3 ಸ್ಥಾತುಶ್ಚ ಸತ್ಯಂ ಜಗತಶ್ಚ ಧರ್ಮಣಿ ಪುತ್ರಸ್ಯ ಪಾಥಃ

ಪದಮದ್ವಯಾವಿನಃ ||

(೧.೧೫೯.೩)

# ವಿಶ್ವನಿಯಮ

೨.

## ಯಜ್ಞ

ಧೃತವ್ರತರೂ, ಋತಪಾಲಕರೂ ಆದ ದೇವತೆಗಳು ವ್ರತಪಾಲಕರಾಗಿರುವುದು ವಿಶ್ವಸೌಖ್ಯಕ್ಕಾಗಿ, ವಿಶ್ವಸಾಮರಸ್ಯ ಸಂಪಾದನೆಗಾಗಿ. ಈ ಕಾರ್ಯನಿರ್ವಹಣವು ದೇವತೆಗಳಿಗೆ ಮಾತ್ರ ಸೇರಿದುವಲ್ಲ. ಮಾನವರಿಗೂ ಸೇರಿದುದು. ಯಾವರೀತಿ ದೇವತೆಗಳು ಋತಮಾರ್ಗವನ್ನನುಸರಿಸಿ ತನ್ಮೂಲಕ ಋತಪಾಲಕರೂ ಋತವರ್ಧಕರೂ ಆಗಿರುವರೋ ಅದೇ ರೀತಿ ಮಾನವರೂ ಋತಮಾರ್ಗವನ್ನನುಸರಿಸಿ ವಿಶ್ವನಿಯಮಕ್ಕೆ ಭಂಗಬಾರದಂತೆ ವ್ರತಾನುಷ್ಠಾನಮಾಡಬೇಕಾದ್ದು ಅವರ ನಿಯತಕರ್ತವ್ಯ. [1]

ಋತಪಾಲನವೂ ಋತದ ವೃದ್ಧಿಯೂ ಆ ಮೂಲಕ ವಿಶ್ವಸಾಮರಸ್ಯವೂ ದ್ಯಾವಾಪೃಥಿವಿಗಳ ಪರಸ್ಪರ ಸಂಬಂಧವನ್ನವಲಂಬಿಸಿದೆ. ದ್ಯಾವಾಪೃಥಿವಿಗಳೆರಡಕ್ಕೂ ಸಮಾನವಾದ ಉದಕವು ಪೃಥ್ವೀಪಾಲನೆಗೆ ಮುಖ್ಯವಾದ ಅನ್ನಕ್ಕೆ ಕಾರಣ. ಈ ಉದಕದಿಂದ ಮಾನವರು ತಮ್ಮ ಅನ್ನಸಂಪತ್ತನ್ನು ಪಡೆದು ಯಜ್ಞಕರ್ಮವನ್ನಾಚರಿಸಿ ದೇವತೆಗಳಿಗೆ ತೃಪ್ತಿಯನ್ನುಂಟು ಮಾಡುತ್ತಾರೆ.

ಸಮಾನಮೇತದುದಕಮುಚ್ಚೈತ್ಯವ ಚಾಹಭಿಃ ।
ಭೂಮಿಂ ಪರ್ಜನ್ಯಾ ಜಿನ್ವಂತಿ ದಿವಂ ಜಿನ್ವಂತ್ಯಗ್ನಯಃ ॥
(೧.೧೬೪.೫೧)

ಏಕರೂಪವಾದ ಉದಕವು ಪೃಥ್ವಿಯಿಂದ ಊರ್ಧ್ವಮುಖವಾಗಿ ಅಂತರಿಕ್ಷಕ್ಕೆ ಹತ್ತುತ್ತದೆ. ಅಂತರಿಕ್ಷದಿಂದ ಅಧೋಮುಖವಾಗಿಯೂ ಬರುತ್ತದೆ. ಪ್ರಪಂಚಕ್ಕೆ ಸಂತೃಪ್ತಿಯನ್ನು ಕೊಡುವ ಮೇಘಗಳು ಭೂಮಿಯನ್ನು ತೃಪ್ತಿಗೊಳಿಸುತ್ತವೆ. ಇದರ ಫಲವಾದ ಯಜ್ಞದಿಂದ ತೃಪ್ತರಾದ ಆಹವನೀಯಾದ್ಯಗ್ನಿಗಳು ದ್ಯುಲೋಕವನ್ನು ತೃಪ್ತಿಪಡಿಸುತ್ತಾರೆ.

ಹೀಗೆ, ಪರ್ಜನ್ಯಾಗ್ನಿಗಳ ಸಂಬಂಧವು ಬೀಜಾಂಕುರಗಳ ಸಂಬಂಧದಂತಿದೆ. ಯಜ್ಞಾದಿಗಳಿಂದ ಪರ್ಜನ್ಯವೂ ಪರ್ಜನ್ಯದಿಂದ ಯಜ್ಞವೂ ವೃದ್ಧಿಯಾಗುತ್ತದೆ. ಇವು ಪರಸ್ಪರ ಅನ್ಯೋನ್ಯಾಶ್ರಯವನ್ನು ಪಡೆದಿವೆ.

---

1 cf ಪುರುಷಾರ್ಥ: ಅಧ್ಯಾಯ. IV.

ಒಂದಕ್ಕೊಂದು ಕಾರಣವಾಗಿದೆ. ದ್ಯಾವಾಪೃಥಿವಿಗಳ ಸ್ಥಿತಿಗತಿಗಳೆಲ್ಲವೂ ಈ ಅನ್ಯೋನ್ಯಾಶ್ರಯವನ್ನೇ ನಂಬಿವೆ.[1] ಉಪನಿಷದಾದಿಗಳು ಪರ್ಜನ್ಯನ ವೃಷ್ಟಿಕಾರಕ ಕ್ರಿಯೆಯನ್ನೂ ಯಜ್ಞವೆಂದೇ ವರ್ಣಿಸಿದೆ.

"ಗೌತಮ, ಪರ್ಜನ್ಯವೇ ಯಜ್ಞಾಗ್ನಿಯು. ವಾಯುವೇ ಅದರ ಸವಿತ್ತು. ಮೇಘವೇ ಅದರ ಧೂಮ, ವಿದ್ಯುತ್ತೇ ಅದರ ಜ್ವಾಲೆ. ಸಿಡಿಲೇ ಅಂಗಾರಗಳು. ಪರ್ಜನ್ಯರೂಪವಾದ ಈ ಅಗ್ನಿಯಲ್ಲಿ ದೇವತೆಗಳು ಸೋಮವನ್ನರ್ಪಿಸುತ್ತಾರೆ. ಇದರ ಫಲವಾಗಿ ವೃಷ್ಟಿಪತನ" ಎಂದು ಪರ್ಜನ್ಯಕ್ಕೂ ಯಜ್ಞಾಗ್ನಿಗೂ ತಾದಾತ್ಮ್ಯವನ್ನು ಹೇಳಿದೆ.[2]

ಪೃಥಿವ್ಯಂತರಿಕ್ಷಗಳ ಮತ್ತು ತತ್ಪ್ರಜೆಗಳ ಜೀವನಾಧಾರವಾಗಿರುವುದಲ್ಲದೆ ಪರ್ಜನ್ಯವು ಎರಡು ಲೋಕಗಳ ಸಂಬಂಧವನ್ನೂ ನಿಕಟವಾಗಿ ಬೆಳೆಸುವುದರಲ್ಲಿಯೂ ನಿರತವಾಗಿದೆ. ಐತರೇಯಾರಣ್ಯಕದಲ್ಲಿ ಹೇಳಿರುವಂತೆ,

"ಪೃಥ್ವಿಯು ಪೂರ್ವಾರ್ಧ, ದ್ಯುಲೋಕವು ಉತ್ತರಾರ್ಧ. ವೃಷ್ಟಿಯಿಂದ ಇವೆರಡರ ಸಂಬಂಧವುಂಟಾಗುತ್ತದೆ ಪರ್ಜನ್ಯವೇ ಸಂಬಂಧ ಕಾರಕ".[3] ಆದುದರಿಂದಲೇ, "ಯಸ್ಮಿನ್ವಿಶ್ವಾನಿ ಭುವನಾನಿ ತಸ್ಥುಃ". "ತಸ್ಮಿನ್ನಾತ್ಮಾ ಜಗತಸ್ತಸ್ಥುಷಶ್ಚ" ಎಂದು ಪರ್ಜನ್ಯನನ್ನು ಪ್ರಶಂಸಿಸಿದೆ.[4]

ದೇವತೆಗಳು ಪರ್ಜನ್ಯನಲ್ಲಿ ಯಜ್ಞಾಹುತಿಯನ್ನು ಅರ್ಪಿಸುವುದೂ, ಪರ್ಜನ್ಯನು ವೃಷ್ಟಿಯನ್ನು ಸುರಿಸುವುದೂ ಎಲ್ಲವೂ ಧೃತವ್ರತನೂ ಋತ

---

1 cf ಭಗವದ್ಗೀತಾ. ೩.೧೪.

2 ಪರ್ಜನ್ಯೋ ವಾವ ಗೌತಮಾಗ್ನಿಸ್ತಸ್ಯ ವಾಯುರೇವ ಸಮಿದಭ್ರಂ ಧೂಮೋ ವಿದ್ಯುದರ್ಚಿರಶನಿರಂಗಾರಾ ಹ್ರಾದನಯೋ ವಿಸ್ಫುಲಿಂಗಾಃ | ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಸೋಮಂ ರಾಜಾನಂ ಜುಹ್ವತಿ ತಸ್ಯಾ ಆಹುತೇರ್ವರ್ಷಂ ಸಂಭವತಿ |

(ಛಾ. ಉ. ೫.೫.೧.)

3 ಪೃಥಿವೀ ಪೂರ್ವರೂಪಂ ದ್ಯೌರುತ್ತರರೂಪಂ ವೃಷ್ಟಿಃ ಸಂಧಿಃ ಪರ್ಜನ್ಯಃ ಸಂಧಾತಾ |

(ಐ. ಆ. ೩.೧.೨.)

4 ಋ. ಸಂ. ೭.೧೦೧. ೪--೬.

ಪಾಲಕನೂ ಆದ ವರುಣನ ದಿವ್ಯಾನುಶಾಸನದ ಮೇಲೆ.[1]

ಋತಮಾರ್ಗವನ್ನನುಸರಿಸಲು ಹೇಗೆ ದೇವತೆಗಳು ಮಾರ್ಗದರ್ಶಕರೋ ಹಾಗೆ ಯಜ್ಞಕ್ರಿಯೆಗೂ ಅವರೇ ಮಾರ್ಗದರ್ಶಕರು. ಋತಪೋಷಣೆಗಾಗಿ ಮತ್ತು ಅದರ ಬೆಳೆವಣಿಗೆಗಾಗಿ ಅವರು ಮಾಡಿರುವ ವ್ಯವಸ್ಥೆಯೇ ಯಜ್ಞ.[2] ಆದುದರಿಂದಲೇ ಯಜ್ಞವು "ಋತಸ್ಯ ಧಾಮ", "ಋತಸ್ಯ ಸದನಂ", "ಋತಸದ್ಮ", "ಋತಸ್ಯ ಪಂಥಾಃ" ಇತ್ಯಾದಿ ವಿಶೇಷಣಗಳಿಂದ ಪ್ರಶಂಸಿತವಾಗಿದೆ.[3] ಋತಾವೃಧರಾದ ದೇವತೆಗಳೇ ಯಜ್ಞನಿರ್ಮಾಪಕರು. ಅವರು ಋತದ ಯೋನಿಯನ್ನು ವಿಮರ್ಶೆ ಮಾಡುತ್ತ ಧ್ಯಾನಾಸಕ್ತರಾಗಿಯೂ ದ್ಯಾವಾಪೃಥಿವಿಗಳ ಧಾರಕರಾಗಿಯೂ ಯಜ್ಞನಿರ್ಮಾಣಮಾಡುತ್ತಾರೆ.[4]

ದೇವತೆಗಳಲ್ಲಿ ಮುಖ್ಯನೂ ಅವರಿಗೆಲ್ಲ ನೇತೃವೂ ಆದ ವೈಶ್ವಾನರಾಗ್ನಿಯು ಯಜ್ಞತತ್ತ್ವವನ್ನರಿತು ಜಗತ್ಸೃಷ್ಟಿಯಾದ ನಂತರ ಮೊದಲನೆಯ ಹೋತೃವಾಗಿ ಯಜ್ಞಕರ್ಮದ ರಹಸ್ಯವನ್ನುಪದೇಶಿಸಿದನು.[5] ಅನಂತರ ದೇವತೆಗಳು ತಮ್ಮ ಸಂಕಲ್ಪರೂಪವೂ ಧ್ಯಾನಾತ್ಮಕವೂ ಆದ ಯಜ್ಞದಿಂದ ಯಜ್ಞರೂಪಿಯಾದ ಪ್ರಜಾಪತಿಯನ್ನು ಪೂಜಿಸಿದರು. ಪ್ರಾಪಂಚಿಕವಾದ

---

1 ಮಾಯಾ ವಾಂ ಮಿತ್ರಾ ವರುಣಾ ದಿವಿ ಶ್ರಿತಾ ಸೂರ್ಯೋ
ಜ್ಯೋತಿಶ್ಚರತಿ ಚಿತ್ರಮಾಯುಧಂ ।
ತಮಭ್ರೇಣ ವೃಷ್ಟ್ಯಾ ಗೂಹಥೋ ದಿವಿ ಪರ್ಜನ್ಯ ದ್ರಪ್ಸಾ
ಮಧುಮಂತ ಈರತೇ ॥
(ಋ. ಸಂ. ೫.೬೩.೪)

2 ೧.೧೫೯.೧. ಇತ್ಯಾದಿ

3 ೧.೪೩.೯, ೧.೮೪-೪, ೩ ೫೫.೧೪ ಇತ್ಯಾದಿ

4 ದಿವಕ್ಷಸೋ ಅಗ್ನಿಜಿಹ್ವಾ ಋತಾವೃಧ ಋತಸ್ಯ ಯೋನಿಂ ವಿಮೃಶಂತ ಆಸತೇ ದ್ಯಾಂ ಸ್ಕಭಿತ್ವ ಪ ಆ ಚಕ್ರುರೋಜಸಾ ಯಜ್ಞಂ ಜನಿತ್ವೀ ತನ್ವಿ ನಿಮಾಮೃಜುಃ ॥
(೧೦.೬೫.೭.)

5 ಅಯಂ ಹೋತಾ ಪ್ರಥಮಃ ೬.೯.೪.

ಧರ್ಮಗಳಿಗೆಲ್ಲ ಇದೇ ಮೂಲವಾಯಿತು.[1] ಈ ಯಜ್ಞದ ಧರ್ಮಗಳೇ ಅಂತರಿಕ್ಷದಲ್ಲೂ ಸ್ಥಾಪಿತವಾಗಿ ದ್ಯುಲೋಕಸ್ಥರಾದ ದೇವತೆಗಳನ್ನು ಅವರವರ ಸ್ಥಾನದಲ್ಲಿರಿಸುತ್ತದೆ.

ಯಜ್ಞವು ದೇವತೆಗಳಿಗೆ ತೃಪ್ತಿಯನ್ನುಂಟುಮಾಡಿ ಅದರಿಂದ ಮಾನವನ ಕೇವಲ ಐಹಿತ ಸಂಪತ್ತು ಮತ್ತು ವೈಯಕ್ತಿಕ ಸೌಖ್ಯವನ್ನು ಮಾತ್ರ ಗಳಿಸುವ ಸಾಧನವಲ್ಲ. ಯಜ್ಞಕ್ರಿಯೆಯೆಂಬುದು ಋತಾಖ್ಯವಾದ ವಿಶ್ವಚಕ್ರದ ಗತಿಯನ್ನು ಅನುಸರಿಸುವ ಸಾಧನ. ವಿಶ್ವವೆಲ್ಲವೂ ಯಜ್ಞಮಯ. ಸೃಷ್ಟಿ, ಸ್ಥಿತಿ ಮತ್ತು ಲಯಗಳೆಲ್ಲವೂ ಯಜ್ಞರೂಪ. ಮೂಲ ತತ್ತ್ವದ ಅವ್ಯಾಕೃತ ರೂಪವು ವ್ಯಾಕೃತಸ್ವರೂಪವನ್ನು ಹೊಂದುವುದು ಯಜ್ಞರೂಪದಲ್ಲಿ. ಸಕಲವೂ ಯಜ್ಞಮಯವಾದುದರಿಂದ ವೈಯಕ್ತಿಕ ಜೀವನವೂ ವಿಶ್ವಯಜ್ಞದ ಮರ್ಮವನ್ನರಿತು ಆ ಯಜ್ಞಮಾರ್ಗವನ್ನೇ ಅನುಸರಿಸಬೇಕು. ವಿಶ್ವಯಜ್ಞ ಪಾಲನ ಮತ್ತು ಪೋಷಣವೇ ದೇವಮಾನವಾದಿ ಪಂಚಜನರ ಕರ್ತವ್ಯ. ಇದೇ ವ್ರತ. ವ್ರತಾತ್ಮಕವಾದ ಯಜ್ಞವೇ ವಿಶ್ವಕ್ಕೆ ನಾಭಿ. ಇದು ಸಕಲ ದೇವಮಾನವಾದಿಗಳ ಆತ್ಮ,[2] ಮತ್ತು ಸಕಲ ವಿಶ್ವಗಳಿಗೂ ಓತಪ್ರೋತರೂಪವಾದ ಸಂಬಂಧವನ್ನು ಕಲ್ಪಿಸಿದೆ.[3] ಸೃಷ್ಟಿರೂಪವಾದ ಯಜ್ಞವು ಅಂತರಿಕ್ಷಾದಿ ತಂತುಗಳಿಂದ ವ್ಯಾಪ್ತವಾಗಿದೆ. ದೇವಪೂಜಾದಿ ಕರ್ಮಗಳಿಂದ ವಿಸ್ತೃತವಾಗುತ್ತದೆ. ಪ್ರಜಾಪತಿಯು ಪ್ರಥಮತಃ ಯಜ್ಞವನ್ನು ನಿರ್ಮಿಸಿ ಮೂರು ಲೋಕಗಳಿಗೂ ಓತಪ್ರೋತ

---

1 ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ | ತೇ ಹ ನಾಕಂ ಮಹಿಮಾನಃ ಸಚಂತೇ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ||

(೧.೧೬೪.೫೦ ; ೧೦.೯೦.೧೬.

(ಸಾಯಣರು ಎರಡು ಸನ್ನಿವೇಶಗಳಲ್ಲೂ ಬೇರೆ ಬೇರೆ ಅರ್ಥವನ್ನು ಹೇಳಿದ್ದಾರೆ.)

2 ಸರ್ವೇಷಾಂ ವಾ ಏಷ ಭೂತಾನಾಂ ಸರ್ವೇಷಾಂ ದೇವಾನಾಮಾತ್ಮಾ |

(ತೈ. ಬ್ರಾ.)

3 ಋ. ಸಂ. ೬-೯, ೧೦.೧೩೦ ಇತ್ಯಾದಿ

ರೂಪವಾದ ಸಂಬಂಧವನ್ನು ಕಲ್ಪಿಸಿದನು.[1] ವಿಶ್ವದ ಅಸ್ತಿತ್ವವು ಶಿಥಿ ವಾಗದೆ ಇರುವುದಕ್ಕೂ ಮೂರುಲೋಕಗಳೂ ಓತಪ್ರೋತಗಳಂತೆ ಹೆಣೆದು ಕೊಂಡಿರುವುದಕ್ಕೂ ಯಜ್ಞಕರ್ಮದ ಆವಶ್ಯಕತೆಯಿದೆ. ಯಜ್ಞವು ಸಕಲ ಸಾಮಾನ್ಯ ವಿಶೇಷಗಳಿಗೂ ಸಂಬಂಧವನ್ನು ಕಲ್ಪಿಸುವ ಸೂತ್ರ. ಸೂತ್ರರೂಪ ವಾದ ಯಜ್ಞವು ವಿಶ್ವದ ವಿಕಾಸ ಮತ್ತು ಸಂಕೋಚಗಳೊಡನೆ ತಾನೂ ಬೆಳೆಯುತ್ತದೆ ಮತ್ತು ಹ್ರಾಸವನ್ನೂ ಹೊಂದುತ್ತದೆ. ವಿಶ್ವಗತಿಯೊಡನೆ ತನ್ನ ಗತಿಯನ್ನು ಹೊಂದಿಸಿಕೊಳ್ಳುತ್ತದೆ.[2] ಸಕಲ ಭೂತಗಳನ್ನೂ ತನ್ನ ಆಹುತಿ

---

1. ಋ. ಸಂ. ೧೧೬೪. ೩೩-೩೫ ನೇ ಋಕ್ಕುಗಳಲ್ಲಿ ವರ್ಣಿತ ವಾಗಿರುವ ಈ ವಿಷಯವನ್ನು ತೈತ್ತಿರೀಯ ಸಂಹಿತೆಯಲ್ಲಿ ಈ ರೀತಿ ತಿಳಿಸಿದೆ.

" ಕಲ್ಪಂತೇಽಸ್ಮಾ ಇಮೇ ಲೋಕಾ ಊರ್ಜಂ ಪ್ರಜಾಸು ದಧಾತಿ ತ್ರಿರಾತ್ರೇ ಣೈವೇಮಂ ಲೋಕಂ ಕಲ್ಪಯತಿ ತ್ರಿರಾತ್ರೇಣಾಂತರಿಕ್ಷಂ ತ್ರಿರಾತ್ರೇಣಾಮುಂ ಲೋಕಂ ಯಥಾ ಗುಣೇ ಗುಣಮನ್ವಸ್ಯತ್ಯೇವಮೇವ ತಲ್ಲೋಕೇ ಲೋಕಮನ್ವಸ್ಯತಿ ಧೃತ್ಯಾ ಅಶಿಥಿಲಂ ಭಾವಾಯ "

(ತೈ. ಸಂ. ೭.೨.೪-೨)

ನವರಾತ್ರರೂಪವಾದ ಯಜ್ಞದಿಂದ ಲೋಕತ್ರಯಕ್ಕೂ ಚೈತನ್ಯವು ದೊರೆ ಯಿತು. ತ್ರಿರಾತ್ರದಿಂದ ಪೃಥ್ವಿಗೂ, ತ್ರಿರಾತ್ರದಿಂದ ಅಂತರಿಕ್ಷಕ್ಕೂ ಉಳಿದ ತ್ರಿರಾ ತ್ರದಿಂದ ದ್ಯುಲೋಕಕ್ಕೂ ಪ್ರಜಾಪತಿಯು ಸ್ಥಿತಿ ಶಕ್ತಿಯನ್ನು ಯಜ್ಞದ ಶಕ್ತಿಯಿಂದ ಕಲ್ಪಿಸಿದನು. ತಂತುವಿನೊಡನೆ ಓತಪ್ರೋತರೂಪದಿಂದ ತಂತುವನ್ನು ಸೇರಿಸಿ ಪಟ ವನ್ನು (ಬಟ್ಟೆ) ನಿರ್ಮಿಸುವಂತೆ ಶೈಥಿಲ್ಯವನ್ನು ತಪ್ಪಿಸುವುದಕ್ಕೂ ಮತ್ತು ವಿಶ್ವಕ್ಕೆಲ್ಲ ಒಂದೇ ಸಂಬಂಧರೂಪವಾದ ಶಕ್ತಿಯನ್ನು ಉತ್ಪಾದನೆಮಾಡಿ ಮೂರು ಲೋಕಗಳನ್ನು ಅವುಗಳ ನಿಯತವಾದ ಸ್ಥಿತಿಯಲ್ಲಿಡುವುದಕ್ಕೂ ಯಜ್ಞದಿಂದಲೇ ಲೋಕತ್ರಯಕ್ಕೂ ಓತಪ್ರೋತರೂಪವಾದ ಸಂಬಂಧವನ್ನು ಕಲ್ಪಿಸಿದನು.

2 ಜಾಯತೇ ಸ ಯನ್ ಜಾಯತೇ ತಸ್ಮಾದ್ಯಜ್ಞಃ ||

(ಶ. ಬ್ರಾ; ೩.೯.೪.೨೩.)

ಅಭಿಷವಕಾಲದಲ್ಲಿ ಹನನಮಾಡುತ್ತಾರೆ. ಪುನಃ ಉತ್ಪನ್ನವಾಗುವಂತೆ ಮಾಡು ತ್ತಾರೆ. ಪ್ರಸಾರರೂಪವಾದ ಗತಿಯೊಂದಿಗೆ ಉತ್ಪನ್ನವಾಗುವುದರಿಂದ ಯಜ್ಞವೆಂಬ ಹೆಸರು.

ಗಾಗಿ ಅಪೇಕ್ಷಿಸುತ್ತದೆ. ಪುನಃ ಸಕಲ ಭೂತಗಳ ಉಪಕಾರಕ್ಕಾಗಿ ಪ್ರಸರಿಸುತ್ತದೆ. ಇತ್ಯಾದಿಯಾಗಿ ವಿಶ್ವತತ್ತ್ವಕ್ಕೂ ಯಜ್ಞಕ್ಕೂ ಇರುವ ತಾದಾತ್ಮ್ಯಸಂಬಂಧವನ್ನೂ ತಿಳಿಸಿ ಜಗತ್ತಿನ ಸಕಲ ವ್ಯವಹಾರಗಳಿಗೂ ಯಜ್ಞವೇ ಕಾರಣ, ಅದೇ ರಕ್ಷಕ, ಅದೇ ಸೂತ್ರರೂಪವಾದ ಸಂಬಂಧ ಇತ್ಯಾದಿಯಾಗಿ ಅನೇಕ ಪ್ರಕರಣಗಳನ್ನು ವರ್ಣಿಸಿದೆ.

ನಾಭಿ ಶಬ್ದಕ್ಕೆ ವಾಸಸ್ಥಾನ, ವ್ಯಾಪಕಸಂಬಂಧ, ರಕ್ಷಕ, ಬಂಧಕ, ಉತ್ಪತ್ತಿಸ್ಥಾನ ಇತ್ಯಾದ್ಯನೇಕ ಅರ್ಥಗಳಿವೆ. "ಪೃಚ್ಛಾಮಿ ತ್ವಾ ಭುವನಸ್ಯ ನಾಭಿಃ" ಸಕಲ ಲೋಕಗಳ ಮತ್ತು ಸಕಲ ಭೂತಜಾತಗಳ ನಾಭಿ ಯಾವುದು ಎಂದು ಋಕ್ಸಂಹಿತೆಯಲ್ಲಿ ಒಂದುಕಡೆ ಪ್ರಶ್ನಿಸಿದೆ. ಅದಕ್ಕೆ ಉತ್ತರ ವಾಗಿ "ಅಯಂ ಯಜ್ಞೋ ಭುವನಸ್ಯ ನಾಭಿಃ"[1] ಈ ಯಜ್ಞವೇ ಸಕಲ ಲೋಕಗಳಿಗೂ ನಾಭಿರೂಪ ಎಂದಿದೆ. ಯಜ್ಞವೇ ಸಕಲ ಲೋಕಗಳ ಉತ್ಪತ್ತಿಗೂ ಸ್ಥಿತಿಗೂ ಕಾರಣವಾಗಿ ದೇವಮಾನವಾದಿ ಸಕಲ ಭೂತಗಳಿಗೂ ಪರಸ್ಪರ ಸಂಬಂಧವನ್ನು ಬೆಳೆಸುವ ನಾಭಿಯಾಗಿದೆ ಎಂದು ತಾತ್ಪರ್ಯ. "ಎಲೈ ಅಗ್ನಿಯೇ, ಸಕಲ ಯಜ್ಞಗಳೂ ನಮ್ಮ ನಿಮ್ಮ ಸ್ನೇಹದ ಬಂಧನ ವನ್ನು ವೃದ್ಧಿಪಡಿಸುವ ಸಾಧನವಾಗಲಿ"[2] ಇತ್ಯಾದಿಯಾಗಿ ಯಜ್ಞದ ವಿಶ್ವಬಂಧಕತ್ವವನ್ನು ತಿಳಿಸಿದೆ. ಯಜ್ಞವೇ ವಿಶ್ವರಕ್ಷಕ ಮತ್ತು ಪೋಷಕ. ಆದುದರಿಂದಲೂ ನಾಭಿಯೆಂಬ ವರ್ಣನೆ.

"ಇಯಂ ವೇದಿಃ ಪೃಥಿವ್ಯಾ ಅಂತಃ" ಎಂಬ ಅದೇ ಮಂತ್ರದ ವಾಕ್ಯವು ಯಜ್ಞವೇದಿಯ ಪ್ರಮಾಣವನ್ನು ತಿಳಿಸುತ್ತದೆ. "ಈ ಯಜ್ಞ

---

1 ೧.೧೬೪.೩೫.

2 ಶಿವಾ ನಃ ಸಖ್ಯಾ ಸಂತು ಭ್ರಾತ್ರಾಗ್ನೇ ದೇವೇಷು ಯುಷ್ಮೇ ।
ಸಾ ನೋ ನಾಭಿಃ ಸದನೇ ಸಸ್ಮಿನ್ನೂಧನ್ ॥

(ಋ. ಸಂ. ೪.೧೦.೮.)

ಎಲೈ ಅಗ್ನಿಯೇ ದೇವತೆಗಳೊಡನೆ ನಮ್ಮ ಸುಖಿತ್ವವೂ ಬಂಧುತ್ವವೂ ಬೆಳೆಯಲಿ ಎಂದು ಈ ಮಂತ್ರದಲ್ಲಿ ಪ್ರಾರ್ಥಿಸಿದೆ. ಮತ್ತು ಆ ಬಂಧುತ್ವವು ವೃದ್ಧಿಯಾಗಲು ಯಜ್ಞವೇ ಕಾರಣ. ಸಕಲರಿಗೂ ಯಜ್ಞವೇ ಪರಸ್ಪರ ಬಂಧಕವಾಗಿರುತ್ತದೆಯೆಂದೂ ತಿಳಿಸಿದೆ.

ವೇದಿಯೇ ಪೃಥ್ವಿೀ, ಇದೇ ಅಂತರಿಕ್ಷ, ಇದೇ ದ್ಯುಲೋಕ, ಇದೇ ಆದಿತ್ಯ, ಸಮಸ್ತ ನಕ್ಷತ್ರಗಳು " ಇತ್ಯಾದಿಯಾಗಿ ಬ್ರಾಹ್ಮಣ ವಾಕ್ಯಗಳು ಪ್ರಶಂಸಿಸಿವೆ.[1] ಜಗತ್ಕರ್ತನಾದ ಪ್ರಜಾಪತಿಯೇ ಯಜ್ಞರೂಪ, ಪೃಥಿವ್ಯಾದಿ ಲೋಕಗಳೆಲ್ಲವೂ ಅವನಿಗೆ ಆಧಾರ. ಆಧಾರವು ಎಷ್ಟು ವಿಸ್ತೃತವೋ ಯಜ್ಞವೇದಿಯೂ ಅಷ್ಟೇ ವಿಸ್ತೃತ.

ಹೀಗೆ ಯಜ್ಞತತ್ತ್ವವು ವಿಶ್ವದ ಐಕ್ಯವನ್ನೂ ಈ ಐಕ್ಯದ ನೆಲೆಯು ಪರಬ್ರಹ್ಮ ಎಂಬ ಸತ್ಯವನ್ನೂ ತಿಳಿಸುತ್ತದೆ. ಉಪನಿಷದಾದಿಗಳಲ್ಲಿ ಯಾವ ಮೂಲತತ್ತ್ವವನ್ನು ಪರಬ್ರಹ್ಮ ಎಂದು ಕರೆದಿದೆಯೋ ಅದನ್ನು ಸಂಹಿತಾ ಮತ್ತು ಬ್ರಾಹ್ಮಣಗಳಲ್ಲಿ ಪ್ರಜಾಪತಿಯೆಂದಿದೆ. (ಯಜ್ಞಕ್ಕೂ ಪ್ರಜಾಪ್ರತಿಗೂ ಕೆಲವೆಡೆ ತಾದಾತ್ಮ್ಯವನ್ನು ಹೇಳಿದೆ. ೨) ವಿಶ್ವಸೃಷ್ಟಿಯು ಪ್ರಜಾಪತಿಯ ಯಜ್ಞದ ಮತ್ತು ತಪಸ್ಸಿನ ಫಲ. ಜಗತ್ಕಾರಣನೂ ಜಗತ್ಸೃಷ್ಟಿಗೆ ಪೂರ್ವಭಾವಿಯಾಗಿ ಅದ್ವಿತೀಯನೂ ಆಗಿದ್ದ ಪ್ರಜಾಪತಿಯು ಸೃಷ್ಟಿಸಾಧಕವಾದ ಯಜ್ಞವನ್ನು ಆಚರಿಸಲು ತನ್ನನ್ನೇ ಆಹುತಿಯಾಗಿ ಅರ್ಪಿಸಿದನು. " ಯ ಆತ್ಮದಾ ಬಲದಾ .."[3] ಇತ್ಯಾದಿ ಮಂತ್ರಗಳು ತಿಳಿಸುವಂತೆ ತನ್ನ ವಿಶ್ವಯಜ್ಞದಲ್ಲಿ ತನ್ನನ್ನೇ ಅರ್ಪಿಸಿ ಸೃಷ್ಟಿಕಾರ್ಯವನ್ನು ನಿರ್ವಹಿಸಿದನು. ಮೃತ್ಯುವೂ ಅಮೃತತ್ವವೂ ಅವನ ಛಾಯೆಗಳು. ಪ್ರಜಾಪತಿಕೃತವಾದ ಈ ಯಜ್ಞವೇ ಸೃಷ್ಟಿಗೆ ಮೂಲ, ಸ್ಥಿತಿಗೆ ಹೇತು, ಶ್ರೇಯಸ್ಸಿಗೆ ಸಾಧಕ. ಯಜ್ಞರೂಪವಾದ ಸೃಷ್ಟಿಸ್ಥಿತಿಲಯಗಳು ಅನುಸ್ಯೂತವಾಗಿ ಚಕ್ರಾಕಾರದಲ್ಲಿ ನಡೆಯುತ್ತಿರುವುದರಿಂದ ಇದನ್ನು ವಿಶ್ವಚಕ್ರವೆಂದೂ ಕರೆದಿದೆ.[4]

ವಿಶ್ವಸೃಷ್ಟಿಗೆ ಕಾರಣನಾದುದರಿಂದ ಪ್ರಜಾಪತಿಗೆ ವಿಶ್ವಕರ್ಮನೆಂದೂ ಹೆಸರು. ಸೃಷ್ಟಿಶಕ್ತಿ ತದ್ರೂಪವಾದ ಯಜ್ಞಕರ್ತೃತ್ವ ಇವೆರಡೂ ಅವನಲ್ಲಿ ಸೇರಿವೆ. ಸಕಲ ಭುವನಗಳಲ್ಲಿಯೂ ಸಕಲ ಭೂತಜಾತಗಳಲ್ಲಿಯೂ ತಾನೇ ಪ್ರವೇಶಿಸಿ ಅವೆಲ್ಲವನ್ನೂ ತನ್ನಲ್ಲೇ ಅಡಗಿಸಿಕೊಂಡಿರುವುದರಿಂದ ವಿಶ್ವ

---

1 ಶ. ಬ್ರಾ. ೧೦.೫,೪. ೧-೧೪.

2 ಶ. ಬ್ರಾ.

3 ಋ. ಸಂ. ೧೦.೧೨೧.೨.

4 ಭಗವದ್ಗೀತಾ ೩.೧೨.೧೬.

ಕರ್ಮನಿಗೆ ಭೌವನ ಎಂಬ ವಿಶೇಷಣವೂ ಉಂಟು. ಸಕಲ ಲೋಕಗಳಿಗೂ ಪ್ರಭುವಾಗಿರುವುದರಿಂದ ಇವನೇ ಇಂದ್ರ.[1] ತ್ರಿಲೋಕದಲ್ಲಿಯೂ ವ್ಯಾಪಿಸಿ 'ತ್ರಿತ' ನಾಗಿರುವುದರಿಂದ ಇವನೇ ಅಗ್ನಿ, ಪ್ರಕಾಶಮಾನನಾದುದರಿಂದ ಇವನೇ ಆದಿತ್ಯ.[2]

**ವಿಶ್ವಕರ್ಮನು,**

(೧) ಸಕಲವನ್ನೂ ಯಜ್ಞದಲ್ಲಿ ಆಹುತಿಯಾಗಿ ಅರ್ಪಿಸಿದನು.

(೨) ಆಹುತಿರೂಪದಲ್ಲಿ ಅರ್ಪಿಸಿದ ಈ ಜಗತ್ತನ್ನೇ ಪುನಃ ಸೃಜಿಸಬೇಕೆಂದು ಇಚ್ಛಿಸಿದನು.

(೩) ತನ್ನ ಸಂಕಲ್ಪದಿಂದಲೇ ಸೃಷ್ಟವಾದ ಸಕಲ ಭೂತಗಳ ಹೃದಯಗಳಲ್ಲೂ ಪ್ರವೇಶಿಸಿ ಸರ್ವಾಂತರ್ಯಾಮಿಯಾದನು.

---

1 ತ್ವಮಿಂದ್ರಾಭಿಭೂರಸಿ ತ್ವಂ ಸೂರ್ಯಮರೋಚಯಃ | ವಿಶ್ವಕರ್ಮಾ ವಿಶ್ವದೇವೋ ಮಹಾನ್ ಅಸಿ ||

(೮.೯೮.೨.)

2 ವಿಭ್ರಾಜಞ್ಜ್ಯೋತಿಷಾ ಸ್ವರಗಚ್ಛೋ ರೋಚನಂ ದಿವಃ |
ಯೇನೇಮಾ ವಿಶ್ವಾ ಭುವನಾನ್ಯಾಭೃತಾ ವಿಶ್ವಕರ್ಮಣಾ
ವಿಶ್ವದೇವ್ಯಾವತಾ ||

(೧೦.೧೭೦.೪.)

ಎಲೈ ಆದಿತ್ಯನೇ, ನೀನು ಸಕಲ ಜಗತ್ತನ್ನೂ ನಿನ್ನ ತೇಜಸ್ಸಿನಿಂದ ಪ್ರಕಾಶಿಸುವಂತೆ ಮಾಡುತ್ತೀಯೆ. ದ್ಯುಲೋಕದಲ್ಲಿ ನಿನ್ನ ಸ್ಥಾನವನ್ನು ಹೊಂದಿರುವೆ. ನಿನ್ನ ತೇಜಸ್ಸುಗಳ ಸಹಾಯದಿಂದ ನೀನು ಸಕಲ ವ್ಯವಹಾರಗಳಿಗೂ ಕಾರಣನು. ಆದ್ದರಿಂದಲೇ ನೀನು ವಿಶ್ವಕರ್ಮನು. ಹೀಗೆ ಅಗ್ನಿ, ಇಂದ್ರ ಮತ್ತು ಆದಿತ್ಯರೂಪಗಳಲ್ಲಿ ಮೂರು ಲೋಕಗಳಲ್ಲೂ ವ್ಯಾಪಿಸಿ ಸಕಲ ಜಗತ್ತಿಗೂ ಕಾರಣವೂ ಆಧಾರವೂ ಆಶ್ರಯವೂ ಆದ ಒಂದೇ ತತ್ತ್ವವು ವಿಶ್ವಕರ್ಮನೆಂದು ವ್ಯವಹರಿಸಲ್ಪಡುತ್ತದೆ.

ತೈತ್ತಿರೀಯ ಬ್ರಾಹ್ಮಣದಲ್ಲಿ ಯಾವ ದೇವತೆಗಳನ್ನು "ವಿಶ್ವಸೃಜಃ" ಎಂದು ವರ್ಣಿಸಿದೆಯೋ ಆ ದೇವತೆಗಳೆಲ್ಲರ ಸ್ವರೂಪವೂ ವಿಶ್ವಕರ್ಮನಲ್ಲಿಯೇ ಅಡಕವಾಗಿವೆ.

ಹೀಗೆ ಸೃಷ್ಟಿಸ್ಥಿತಿಪ್ರಳಯಕಾರ್ಯಗಳು ವರ್ಣಿತವಾಗಿವೆ.[1]

ಸೃಷ್ಟವಾದ ಜಗತ್ತನ್ನು ಪ್ರಳಯಕಾಲದಲ್ಲಿ ತನ್ನಲ್ಲೇ ಅಡಗಿಸಿಕೊಂಡು ತಾನು ಮಾತ್ರ ಅದ್ವಿತೀಯನಾಗಿರತಕ್ಕದ್ದು ಈಶ್ವರನಲೀಲೆಗಳಲ್ಲೊಂದು, ಈ ಕಾರ್ಯವು ಜಗತ್ತಿನ ದೃಷ್ಟಿಯಿಂದ ನಾಶರೂಪವಾದರೂ ಈಶ್ವರನ ದೃಷ್ಟಿಯಿಂದ ಕೇವಲ ಅವಸ್ಥಾ ವಿಶೇಷವೆಂದು ಪರಿಗಣಿತವಾಗುತ್ತದೆ.

"ಸರ್ವೇಷಾಂ ಭೂತಾನಾಮಾತ್ಮಾ" ಎಂದು ಯಾವ ಯಜ್ಞವು ಪ್ರಶಂಸಿತವಾಗಿದೆಯೋ ಅದೇ ಯಜ್ಞವು ಸಕಲವನ್ನೂ ಬಕಳಿಸುವುದೂ ಆಗಿದೆ.

"ಯಜ್ಞೋ ವೈ ಭುಜ್ಯುರ್ಯಜ್ಞೋ ಹಿ ಸರ್ವಾಣಿ ಭೂತಾನಿ ಭುನಕ್ತಿ"

(Sb ix. 4.1.11)

ಯಜ್ಞವೇ ಸಕಲ ಭೂತಗಳನ್ನೂ ಭುಜಿಸುವುದರಿಂದ ಯಜ್ಞಕ್ಕೆ ಭುಜ್ಯುವೆಂದು ಹೆಸರು, ಯಾವ ಲೋಕವನ್ನು ಪ್ರಜಾಪತಿಯು ಉತ್ಪನ್ನ ಮಾಡು

---

1 ಯ ಇಮಾ ವಿಶ್ವಾ ಭುವನಾನಿ ಜುಹ್ವದೃಷಿರ್ಹೋತಾ
ನ್ಯಸೀದತ್ಪಿತಾ ನಃ ।
ಸ ಆಶಿಷಾ ದ್ರವಿಣಮಿಚ್ಛಮಾನಃ ಪ್ರಥಮಚ್ಛದವರಾꣳ
ಆ ವಿವೇಶ ॥

(೧೦.೮೧.೧.)

ಈ ಮಂತ್ರದ ತಾತ್ಪರ್ಯವನ್ನು ತಿಳಿಸುತ್ತ ನಿರುಕ್ತಕಾರರ ವಿವರಣೆ ಹೀಗಿದೆ.

ವಿಶ್ವಕರ್ಮಾ ಭೌವನಃ ಸರ್ವಮೇಧೇ ಸರ್ವಾಣಿ ಭೂತಾನಿ ಜುಹವಾಂಚಕಾರ । ಸ ಆತ್ಮಾನಮಪ್ಯಂತತೋ ಜುಹವಾಂಚಕಾರ । ತದಭಿವಾದಿನ್ಯೇಷರ್ಗ್ಭವತಿ ॥ ಯ ಇಮಾ ವಿಶ್ವಾ ಭುವನಾನಿ ಜುಹ್ವತ್ ॥

(ನಿರುಕ್ತ ೧೦.೨೬.)

ವಿಶ್ವಕರ್ಮನು ಸರ್ವಮೇಧಯಾಗದಲ್ಲಿ ಸಕಲ ಭೂತಗಳನ್ನೂ ಆಹುತಿ ರೂಪದಲ್ಲಿ ಅರ್ಪಿಸಿದನು. ಕೊನೆಯಲ್ಲಿ ತನ್ನನ್ನೂ ಆಹುತಿ ರೂಪದಲ್ಲಿ ಅರ್ಪಿಸಿದನು ಎಂಬುದನ್ನು ೧೦.೮೧.೧. ನೇ ಮಂತ್ರವು ತಿಳಿಸುತ್ತದೆ.

ವನೋ ಅದನ್ನೇ ಭುಜಿಸುವುದೂ ಆವನ ಸ್ವಭಾವವೇ ಆಗಿದೆ. 1 ವಿಶ್ವವೆಲ್ಲವೂ ಅವನಿಗೆ ಅನ್ನ, ಉತ್ಪನ್ನವಾದ ವಸ್ತುಗಳಲ್ಲಿ ಯಾವುದೂ ಶಾಶ್ವತವಾಗಿರಲು ಸಾಧ್ಯವೇ ಇಲ್ಲ. ಪ್ರತಿಯೊಂದೂ ಲಯುವನ್ನು ಹೊಂದಲೇಬೇಕು. ಸೃಷ್ಟಿಕರ್ತನಾದ ಪ್ರಜಾಪತಿಯೇ ಲಯಕರ್ತನು.

ಪ್ರಜಾಪತಿಯು ಜಗತ್ತನ್ನು ಆಹುತಿರೂಪದಲ್ಲಿ ಅರ್ಪಿಸಿಕೊಂಡ ಕಾಲವೇ ಪ್ರಳಯ; ಈ ಕಾಲದಲ್ಲಿ ವಿಶ್ವವೆಲ್ಲವನ್ನೂ ಮೃತ್ಯುವು ಆವರಿಸಿ ಕೊಳ್ಳುತ್ತದೆ. ಆಗ ಈಶ್ವರನು ಅದ್ವಿತೀಯನು. ಪುನಃ ಸದ್ವಿತೀಯ ನಾಗಲು ಆಶಿಸುತ್ತಾನೆ. ವಿಕಾಸಕಾಲವು ಅಶಾಶ್ವತವಾಗಿರುವಂತೆಯೇ ಜಗತ್ತಿನ ಸಂಕೋಚಕಾಲವೂ ಅಶಾಶ್ವತ. ಮೃತ್ಯುವಿನಿಂದ ಆವೃತವಾದ ಜಗತ್ತು ವಿಕಾಸವನ್ನು ಹೊಂದಲೇಬೇಕು. ಅದಕ್ಕೆ ಈಶ್ವರ ಸಂಕಲ್ಪವೂ ಅತ್ಯವಶ್ಯ. ಸಂಕಲ್ಪವಾದೊಡನೆಯೇ ಪುನಃ ವಿಕಾಸ. 2

ಜಗತ್ತಿನ ಸೃಷ್ಟಿಗೂ ಪಾಸ್ಥಲ್ಯಕ್ಕೂ ಯಾರ ಆತ್ಮಯಜ್ಞವೇ ಮೂಲ ಕಾರಣವಾಯಿತೋ ಆ ವಿಶ್ವಕರ್ಮನನ್ನು "ವಾಚಸ್ಪತಿಂ ವಿಶ್ವಕರ್ಮಾಣಂ" ಎಂಬ ವಿಶೇಷಣದಿಂದ ಪ್ರಶಂಸಿದೆ. ಈ ವಿಶೇಷಣದ ಔಚಿತ್ಯವನ್ನು ಇಲ್ಲಿ ವಿಮರ್ಶಿಸುವುದು ಅವಶ್ಯವಾಗಿರುತ್ತದೆ. ಈ ವಿಶೇಷಣವು ವಾಕ್ಕಿಗೂ ವಿಶ್ವಕರ್ಮನ ಸೃಷ್ಟಿರೂಪವೂ ಸೃಷ್ಟಿಮೂಲವೂ ಆದ ವಿಶ್ವಯಜ್ಞಕ್ಕೂ ಇರುವ ಸಂಬಂಧವನ್ನು ತಿಳಿಸುತ್ತದೆ. ತ್ರಿಲೋಕವ್ಯಾಪಕನಾಗಿಯೂ ತ್ರಿಲೋಕಾತ್ಮಕನಾಗಿಯೂ ಇರುವ ವಿಶ್ವಕರ್ಮನಂತೆಯೇ ವಾಗ್ದೇವಿಯೂ ವಿಶ್ವಾತ್ಮಕಳು; ವಿಶ್ವರೂಪಿಣಿ. ಇವಳ ಪತಿಯಾದುದರಿಂದಲೇ ವಿಶ್ವಕರ್ಮನು '**ವಾಚಸ್ಪತಿ**'ಯೆಂದು ಪ್ರಸಿದ್ಧನು.

ದ್ಯಾವಾಪೃಥಿವಿಗಳಿಗಿರುವ ಪರಸ್ಪರ ಸಂಬಂಧವನ್ನು ತಿಳಿಸುವ ಸಾಧನವೆಂದು ಕೆಲವೆಡೆಗಳಲ್ಲಿಯೂ, 3 ಯಜ್ಞದೊಂದಿಗೆ ವ್ಯಕ್ತಪ್ರಪಂಚದ

---

1 **ಸ ಯದ್ಯದೇವಾಸೃಜತ ತತ್ತದತ್ತುಮಧ್ರಿಯತ ಸರ್ವಂ ವಾ ಅತ್ತೀತಿ ತದದಿತೇರದಿತಿತ್ವಂ ||** (ಬೃ. ಉ. ೧.೨.೫.)

2 **೩.೪೮.೪; ೧೦.೧೫.೧೪ ಇತ್ಯಾದಿ.**

3 **೧೦.೭೧.**

ಸಕಲ ವಸ್ತುಗಳ ಸಮೀಕರಣವನ್ನು ಸಂಪಾದಿಸುವ ಸಾಧನವೆಂದು ಇನ್ನು ಕೆಲವೆಡೆಗಳಲ್ಲಿಯೂ ವಾಗ್ದೇವಿಯು ಪ್ರಶಂಸಿತಳಾಗಿದ್ದಾಳೆ.[1] ಮಂತ್ರಾದಿ ರೂಪವಾದವಾಕ್ಕಿಗೆ ಪ್ರಜಾಪತಿಯೇ ಉತ್ಪತ್ತಿಸ್ಥಾನ. ಅವನೇ ಪರ್ಯವಸಾನ ಮತ್ತು ಅವ್ಯಕ್ತನಾದ ಪ್ರಜಾಪತಿಯಿಂದ ನಾಮರೂಪಾತ್ಮಕವಾದ ಜಗದ್ವ್ಯಾಕರಣವು (ವ್ಯಕ್ತರೂಪವಾದ ವಿಭಾಗವು) ವಾಕ್ಕಿನ ಆಧಾರದ ಮೇಲೆ ಇತ್ಯಾದಿ ವಿಷಯಗಳನ್ನು "ಬ್ರಹ್ಮಾಯಂ ವಾಚಃ ಪರಮಂ ವ್ಯೋಮ"[2] ಇತ್ಯಾದಿ ವಾಕ್ಯಗಳು ತಿಳಿಸುತ್ತವೆ. ಬ್ರಹ್ಮನ ಪ್ರಮಾಣ ವಾವುದೋ ವಾಕ್ಕಿನ ಪ್ರಮಾಣವೂ ಅಷ್ಟೇ. ಬ್ರಹ್ಮನ ವ್ಯಾಪ್ತಿಯು ಎಲ್ಲೆಲ್ಲಿ ರುವುದೋ ಅಲ್ಲೆಲ್ಲ ವಾಕ್ಕಿನ ವ್ಯಾಪ್ತಿಯಿದೆ. ಇದರಂತೆಯೇ ವಾಕ್ಕಿನ ವ್ಯಾಪ್ತಿಯೆಲ್ಲೆಲ್ಲಿರುವುದೋ ಅಲ್ಲೆಲ್ಲ ಬ್ರಹ್ಮನ ವ್ಯಾಪ್ತಿ ಎಂದು ಅರಣ್ಯಕಾದಿ ಗಳಲ್ಲಿ ಮೇಲೆ ಉದಾಹರಿಸಿದ ಸಂಹಿತಾ ವಾಕ್ಯದ ವಿವರಣೆಯಿರುತ್ತದೆ.[3]

ವಾಕ್ಕೇ ಬ್ರಹ್ಮ! ಬ್ರಹ್ಮವೇ ಸತ್ಯ. ಸಕಲ ಜಗತ್ತೂ ಬ್ರಹ್ಮಮಯ. ಆದುದರಿಂದಲೇ ವಾಙ್ಮಯ. ಈ ಕಾರಣದಿಂದಲೇ ಶುನಹೋತ್ರನ ಪುತ್ರ ನಾದ ಗೃತ್ಸಮದನು ಈ ಆದಿತತ್ತ್ವವನ್ನು ಸ್ತುತಿಸಿದನು.[4] ಜಗತ್ಕಾರಣನಾದ ವಿಶ್ವಕರ್ಮನು ಆದಿತ್ಯಾದಿರೂಪಗಳಲ್ಲಿ ಯಾವ ರೀತಿ ತ್ರಿಲೋಕವ್ಯಾಪಿಯೋ ಅದೇ ರೀತಿ ತತ್ಸ್ವರೂಪವೇ ಆದ ವಾಗ್ದೇವಿಯೂ ಉಷಸ್ಸೇ ಮುಂತಾದ ಅನೇಕರೂಪಗಳಲ್ಲಿ ಜಗದ್ವ್ಯಾಪಿನಿಯಾಗಿದ್ದಾಳೆ.[5] ಶ್ರುತಿ ವಾಕ್ಯಗಳಲ್ಲಿ

---

1 ೧೦.೧೨೫.

2 ೧.೧೬೪.೩೫.

3 ಯಾವದ್ಬ್ರಹ್ಮ ವಿಷ್ಠಿತಂ ತಾವತೀ ವಾಕ್ |
ಯತ್ರ ಹ ಕ್ವ ಚ ಬ್ರಹ್ಮ ತದ್ವಾಗ್ಯತ್ರ ವಾಕ್ತದ್ವಾ ಬ್ರಹ್ಮ ||
(ಐ. ಆ. ೧.೩.೮)

4 ಬ್ರಹ್ಮ ವಾಗ್ಬ್ರಹ್ಮ ಸತ್ಯಂ ಚ ಬ್ರಹ್ಮ ಸರ್ವಮಿದಂ ಜಗತ್ |
ದಾತಾರಂ ಬ್ರಹ್ಮಣಸ್ತೇನ ಶೌನಹೋತ್ರಃ ಸ್ತುವಞ್ಜಗೌ ||
(ಬೃಹದ್ದೇವತಾ. ೨.೪೦)

5 ಪಾರ್ಥಿವೀ ಮಧ್ಯಮಾ ದಿವ್ಯಾ ವಾಗಪಿ ತ್ರಿವಿಧಾ ತು ಯಾ |
ತಸ್ಯಾಃ ಸೂಕ್ತಾನಿ ನಾಮಾನಿ ಯಥಸ್ಥಾನಂ ನಿಬೋಧತ ||
(ಬೃಹದ್ದೇವತಾ. ೨. ೭೨–೮೦)

ಯಾವ ಯಾವ ಸ್ತ್ರೀದೇವತೆಗಳು ಪ್ರಶಂಸಿತರಾಗಿದ್ದಾರೆಯೋ ಅವರೆಲ್ಲರೂ ವಾಗ್ದೇವಿಯ ರೂಪಾಂತರಗಳು. ಮೂರು ಲೋಕಗಳಲ್ಲೂ ಇರುವ ಅಗ್ನಿ, ಇಂದ್ರ ಮತ್ತು ಆದಿತ್ಯ ಎಂಬ ಮೂರು ಲೋಕಾಧಿಪತಿಗಳ ತೇಜೋರೂಪಾಂತರಗಳೇ ವಾಕ್ಕಿನ ಸ್ವರೂಪ ವಿಶೇಷಗಳು.

ಅಗ್ನಿಮೇವಾನುಗೇಳಾ ತು ಮಧ್ಯಂ ಪ್ರಾಪ್ತಾ ಸರಸ್ವತೀ ।
ಅಮುಂ ಸ್ಥಿತಾಧಿ ಲೋಕಂ ತು ಭಾರತೀ ಭವತಿ ಹ್ಯಸೌ ॥

(ಬೃಹದ್ದೇವತಾ III, 13)

ವಾಗ್ದೇವಿಯು ಪಾರ್ಥಿವಾಗ್ನಿಯನ್ನು ಇಳಾರೂಪದಿಂದ ಅನುಸರಿಸುತ್ತಾಳೆ. ಇಂದ್ರ ಅಥವಾ ವೈದುತಾಗ್ನಿಯನ್ನು ಸರಸ್ವತೀ ರೂಪದಿಂದಲೂ ದ್ಯುಲೋಕಸ್ಥಳಾಗಿ ಆದಿತ್ಯನನ್ನು ಭಾರತೀ ರೂಪದಲ್ಲಿಯೂ ಹಿಂಬಾಲಿಸುತ್ತಾಳೆ. ಹೀಗೆ ಒಂದೇ ವಾಕ್ತತ್ತ್ವವು (ವಿಶ್ವಕರ್ಮನ ರೂಪ ವಿಶೇಷಗಳನ್ನನುರಿಸಿ) ಮೂರು ರೂಪಗಳಿಂದ ವ್ಯಾಪಿಸಿದೆ. ವಿಶ್ವಜ್ಯೋತಿಯ ಮೂರು ಮುಖ್ಯರೂಪಗಳನ್ನು ವ್ಯಷ್ಟವಾಗಿಯಾಗಲಿ, ಸಮಸ್ತರೂಪದಿಂದಾಗಲಿ ಸೇವಿಸುತ್ತಾಳೆ. ಮತ್ತು ಅದರೊಂದಿಗೆ ತಾದಾತ್ಮ್ಯವನ್ನೂ ಹೊಂದುತ್ತಾಳೆ. ಈ ರೀತಿ ವಿಶ್ವವ್ಯಾಪಕತ್ವವಿರುವುದರಿಂದಲೇ "ಯದ್ವಾಗ್ವದಂತಿ" "ದೇವೀಂ ವಾಚಮಜನಯಂತ" ಎಂಬ ಮಂತ್ರಗಳಿಂದ ಸರ್ವವ್ಯಾಪಕಳಾದ ವಾಗ್ದೇವಿಯು ಸ್ತುತಳಾಗಿದ್ದಾಳೆ.[1] ವಾಗ್ದೇವಿಯ ಸರ್ವವ್ಯಾಪಕತ್ವವನ್ನು ಋಕ್ಸಂಹಿತೆಯು ಈ ರೀತಿ ವರ್ಣಿಸಿದೆ.

"ಸಕಲ ರುದ್ರರೊಡನೆಯೂ; ಪಸುಗಳೊಡನೆಯೂ ಆದಿತ್ಯರೊಡನೆಯೂ ಎಂದರೆ ಈ ಎಲ್ಲ ರೂಪಗಳಿಂದಲೂ ಕೂಡಿ ಜಗತ್ತಿನಲ್ಲಿ ವ್ಯಾಪಿಸುತ್ತೇನೆ. ಮಿತ್ರಾವರುಣಾದಿ ಸಕಲ ದೇವತೆಗಳನ್ನೂ ನಾನು ಧರಿಸುತ್ತೇನೆ. ಅತ್ಯುತ್ತಮವಾದ ಪೂಜೆಗೂ ಧ್ಯಾನಕ್ಕೂ ಯೋಗ್ಯವಾದ ಬ್ರಹ್ಮತತ್ತ್ವವನ್ನ

---

1 ವಾಚಂ ಸರ್ವಗತಾಂ ದೇವೀಂ ಸ್ತೌತಿ ಯದ್ವಾಗಿತಿ ದ್ವ್ಯೃಚೇ ।
(ಬೃಹದ್ದೇವತಾ- ೬.೧೨೧)

ಋ. ಸಂ. ೮.೧೦೦.೧೦.೧೧. ಈ ಎರಡು ಋಕ್ಕುಗಳಲ್ಲಿ ಋಷಿಯು ಸರ್ವವ್ಯಾಪಕಳಾದ ವಾಗ್ದೇವಿಯನ್ನು ಸ್ತುತಿಸಿದ್ದಾನೆಂದು ತಾತ್ಪರ್ಯ.

ರಿತವಳಾಗಿ ನಾನು ಸರ್ವಲೋಕಕ್ಕೂ ಈಶ್ವರಳಾಗಿದ್ದೇನೆ. ನಾನೇ ಸರ್ವ ವ್ಯಾಪಕಳು. ಅನ್ನವನ್ನು ಭೋಗಿಸುವವರೂ, ವಾಗ್ವ್ಯವಹಾರವುಳ್ಳವರೂ ಚಕ್ಷುರಾದೀಂದ್ರಿಯ ದರ್ಶನಸಾಮರ್ಥ್ಯವುಳ್ಳವರೂ ಸಕಲರೂ ತಮ್ಮ ವ್ಯವಹಾರಕ್ಕೆ ನನ್ನ ಅನುಗ್ರಹವನ್ನೇ ನಂಬಿರುತ್ತಾರೆ.

ಬ್ರಹ್ಮಜ್ಞಾನ ಸಂಪಾದನೆಗಾಗಲಿ, ಪರಬ್ರಹ್ಮ ಸ್ತುತಿಗಾಗಲಿ ಉತ್ತಮವಾದ ಧ್ಯಾನಕ್ಕಾಗಲಿ ಎಲ್ಲರೂ ನನ್ನ ಆಶ್ರಯವನ್ನೇ ಪಡೆಯಬೇಕು." [1]

ಮಂತ್ರರೂಪಾತ್ಮಕವಾದ ವಾಕ್ಕಿನ ಪತಿಯಾಗಿರುವುದರಿಂದ ವಿಶ್ವಕರ್ಮನು ಬೃಹಸ್ಪತಿ ಮತ್ತು ಬ್ರಹ್ಮಣಸ್ಪತಿಯೆಂದೂ ಪ್ರಸಿದ್ಧನು. ಮಂತ್ರಾತ್ಮಕವಾದ ವಿಭಾಗಗಳೂ ವಿಶ್ವಜ್ಯೋತಿಯ ಮೂರು ರೂಪಗಳನ್ನೂ ಸೇವಿಸುತ್ತವೆಯೆಂದೇ ತಾತ್ಪರ್ಯ. [2]

"ಋಕ್, ಯಜುಸ್, ಸಾಮ ಎಂಬ ಪ್ರಭೇದಗಳುಳ್ಳದ್ದಾಗಿ ಮಂತ್ರರೂಪಾತ್ಮಕವಾದ ವಾಕ್ಕು ಮೂರು ಭಾಗವಾಗಿದೆ. ಪೂರ್ಣವಾದ ವಾಕ್ತತ್ತ್ವವು ವಿಶ್ವಾತ್ಮಕನಾದ ಆದಿತ್ಯಾಂತರ್ಗತನಾದ ಪುರುಷನನ್ನು ಪ್ರತಿಬಿಂಬಿಸಿದರೆ, ಋಙ್ಮಂತ್ರವು ಆದಿತ್ಯಮಂಡಲವನ್ನೂ ಸಾಮವು ತೇಜಸ್ಸನ್ನೂ, ಯಜುರ್ಮಂತ್ರಗಳು ಆದಿತ್ಯಾಂತರ್ಗತನಾದ ಪುರುಷನನ್ನೂ ಪ್ರತಿಬಿಂಬಿಸುತ್ತವೆ." ಇದು ವಾಕ್ಕಿನ ಸ್ವರೂಪ. ಮಂತ್ರಾತ್ಮಕವಾದ ಈ ವಾಕ್ಕಿಗೆ ಪತಿ

---

2 ಅಹಂ ರುದ್ರೇಭಿರ್ವಸುಭಿಶ್ಚರಾಮ್ಯಹಮಾದಿತ್ಯೈರುತ ವಿಶ್ವೇದೇವೈಃ |
ಅಹಂ ಮಿತ್ರಾವರುಣೋಭಾ ಬಿಭರ್ಮ್ಯಹ ಮಿಂದ್ರಾಗ್ನೀ ಅಹಮಶ್ವಿನೋಭಾ ಅಹಂ ರಾಷ್ಟ್ರೀ ಸಂಗಮನೀ ವಸೂನಾಂ ಚಿಕಿತುಷೀ ಪ್ರಥಮಾ ಯಜ್ಞಿಯಾನಾಂ |
ತಾಂ ಮಾ ದೇವಾ ವ್ಯದಧುಃ ಪುರುತ್ರಾ ಭೂರಿಸ್ಥಾತ್ರಾಂ ಭೂರ್ಯಾವೇಶಯಂತೀಂ ||

ಮಯಾ ಸೋಽನ್ನಮತ್ತಿ ಯೋ ವಿಪಶ್ಯತಿ ಯಃ ಪಾಣಿಃ ಯ
ಅಮಂತವೋ ಮಾಂ ತ ಉಪ ಕ್ಷಿಯಂತಿ ಶ್ರುಧಿ ಶ್ರುತ ಶ್ರದ್ಧಿವಂ ತೇ ವದಾಮಿ ||

(ಋ. ಸಂ. ೧೦. ೧೨೫.)

1 ಶ. ಬ್ರಾ. ೧೦.೫.೧.೫.

ಯಾಗಿರುವುದರಿಂದ ಮೂಲತತ್ತ್ವವು " ವಾಚಸ್ಪತಿ ", " ಬೃಹಸ್ಪತಿ " ಎಂಬ ಹೆಸರುಗಳಿಂದ ಪ್ರಸಿದ್ಧವಾಗಿದೆ.

" ವಾಕ್ " ಮತ್ತು " ವಾಕ್ಕಿನ ಪತಿ " ಎಂಬುದರಿಂದ ಸ್ತ್ರೀ ಮತ್ತು ಪುಮಾನ್ ಎಂಬ ಎರಡು ಬೇರೆ ಬೇರೆ ತತ್ತ್ವಗಳು ಪ್ರತಿಪಾದಿತವಾಗಿವೆ ಯೆಂದು ಹೇಳಲಾಗುವುದಿಲ್ಲ. " ಸ್ತ್ರಿಯಃ ಸತೀಃ ", " ಅಯಂ ಸ ಶಿಙ್ಕ್ತೇ " ಎಂಬ ಎರಡೂ ಮಂತ್ರಗಳು ಈ ವಿಷಯವನ್ನು ಸಿಸ್ಪಷ್ಟ ವಾಗಿ ತಿಳಿಸುತ್ತವೆ.

" ಆದಿತ್ಯರಶ್ಮಿಗಳಲ್ಲಿ ಸ್ತ್ರೀಪ್ರಕೃತಿಯೂ ಪುರುಷ ಪ್ರಕೃತಿಯೂ ಮಿಶ್ರ ವಾಗಿವೆ. ಉದಕರೂಪವಾದ ಗರ್ಭವನ್ನು ಧರಿಸುವಾಗ ಸ್ತ್ರೀ ರೂಪವೂ ಅದೇ ವೃಷ್ಟಿಸೇಚನವನ್ನು ಮಾಡುವಾಗ ಪುಂರೂಪವೂ ಪ್ರಕಟಿತವಾಗು ತ್ತದೆ. ಸ್ತ್ರೀ ರೂಪವನ್ನು ಪ್ರಕಟಿಸುವಾಗ ಅತ್ಯಂತ ಆಕರ್ಷಕವಾಗಿಯೂ ಪುಂರೂಪವನ್ನು ಪ್ರಕಟಿಸುವಾಗ ಅತ್ಯಂತ ಶಕ್ತಿಯುತವಾಗಿಯೂ ಇರುತ್ತದೆ. ಇದರ ಸ್ವರೂಪವನ್ನು ಕೇವಲ ಭೌತಿಕವಾದ ಚಕ್ಷುಸ್ಸಿನಿಂದ ಗ್ರಹಿಸಲು ಸಾಧ್ಯವಿಲ್ಲ. ಈ ರಹಸ್ಯವನ್ನು ಜ್ಞಾನದೃಷ್ಟಿಯಿಂದ ಕೂಡಿದ ಮಹಾತ್ಮನು ಮಾತ್ರ ತಿಳಿಯುತ್ತಾನೆ ". ಇದು " ಸ್ತ್ರಿಯಃ ಸತೀಃ " ಎಂಬ ಮಂತ್ರದ ವಿವರಣೆ. ಇದೇ ತತ್ತ್ವವನ್ನು ಪ್ರತಿಪಾದಿಸುವ " ಅಯಂ ಸ ಶಿಂಕ್ತೇ " ಎಂಬ ಮಂತ್ರಾರ್ಥವನ್ನು ವಿವರಿಸುವಾಗ ಸಾಯಣರು ಒಂದು ಕಥಾ ಸಂದರ್ಭವನ್ನು ತಿಳಿಸುತ್ತಾರೆ.

ಶಾಕಪೂಣಿಯು " ನಾನು ಸಕಲ ದೇವತೆಗಳ ಸ್ವರೂಪವನ್ನೂ ತಿಳಿಯುವೆನು " ಎಂದು ಸಂಕಲ್ಪಮಾಡಿದನು. ಆಗ ಲಿಂಗದ್ವಯದಿಂದ ಯುಕ್ತವಾದ ಒಂದು ದೇವತೆಯು ಅವನ ಮುಂದೆ ಪ್ರಾದುರ್ಭೂತ ವಾಯಿತು. ಅವನಿಗೆ ಆ ದೇವತೆಯ ನಿಜವಾದ ಸ್ವರೂಪವು ತಿಳಿಯಲಿಲ್ಲ. " ನಿನ್ನ ಸ್ವರೂಪವನ್ನು ಸರಿಯಾಗಿ ತಿಳಿಸು " ಎಂದು ಪ್ರಾರ್ಥಿಸಿದಾಗ ಆ ದೇವತೆಯು " ಅಯಂ ಸ ಶಿಂಕ್ತೇ " ಎಂಬ ಋಙ್ಮಂತ್ರವನ್ನು ನಿರ್ದೇಶಿಸಿ ಈ ಋಕ್ಕಿನಲ್ಲಿ ಯಾವ ದೇವತೆಯನ್ನುದ್ದೇಶಿಸಿ ಪ್ರಶಂಸಿಸಿದೆಯೋ ಅದೇ ದೇವತೆಯೆಂದು ತಿಳಿಯಬೇಕೆಂದೂ, ಈ ಮಂತ್ರಪ್ರಶಂಸೆಯು ತನ್ನನ್ನೇ ಉದ್ದೇಶಿಸಿರುವುದಾಗಿಯೂ ಅವನಿಗೆ ಹೇಳಿತು.

" ಅಯಂ ಸ ಶಿಂಕ್ತೇ ಯೇನ ಗೌರಭೀವೃತಾ ಮಿಮಾತಿ
ಮಾಯುಂ ಧ್ವಸನಾವಧಿ ಶ್ರಿತಾ ॥"
(ಋ. ಸಂ. ೧.೧೬೪.೨೯.)

ಎಂಬ ಈ ಮಂತ್ರದಲ್ಲಿ ಗೌಃ ಎಂದರೆ ಮಾಧ್ಯಮಿಕಾ ವಾಕ್ಕು, ಮಾಯು ಎಂದರೆ ಆದಿತ್ಯ.[1] ಇದು ಉಭಯಲಿಂಗಾತ್ಮಕ.

ಸುಲಭವಾಗಿ ಅರಿಯಲು ಸಾಧ್ಯವಲ್ಲದ ತತ್ತ್ವವನ್ನು ತಿಳಿಯುವೆನೆಂದು ಪ್ರೌಢಿಮೆಯನ್ನು ತೋರಿ ಆತ್ಮಾಭಿಮಾನದಿಂದ ಕೂಡಿದ ಶಾಕಪೂಣಿಯನ್ನು ವ್ಯಾಮೋಹಿತನಾಗುವಂತೆ ಮಾಡುತ್ತೇನೆಂದುದ್ದೇಶಿಸಿ ಸಂದಿಗ್ಧವಾದುದೂ ಉಭಯಲಿಂಗಾತ್ಮಕವಾದುದೂ ಆದ ದೇವತೆಯು ಪ್ರಾದುರ್ಭೂತವಾಯಿತು ಎನ್ನುವಾಗ ದೇವತಾದ್ವಯವಿದೆಯೆಂಬುದು ಸಹಜವಾದ ತಾತ್ಪರ್ಯವಾಗುತ್ತದೆ. ಆದರೆ ಮಂತ್ರವು ಒಂದೇ ದೇವತೆಯನ್ನುದ್ದೇಶಿಸಿ ಪ್ರಶಂಸಿಸುತ್ತದೆ. ಲಿಂಗದ್ವಯಾತ್ಮಕವಾದ ಆಕಾರವಿರುವಾಗ ಒಂದೇ ದೇವತೆ ಎನ್ನುವುದು ಹೇಗೆ ಎಂಬ ಆಕ್ಷೇಪಕ್ಕೆ ಅವಕಾಶವಿರುತ್ತದೆ. ಈ ಸನ್ನಿವೇಶವನ್ನು ಸಾಯಣರು ವಿವರಿಸಿ (" ಅಯಂ ಸ ಯೇನ..." ಇತ್ಯೇತೇಷಾಂ...ದೇವತ್ಯೈಕ್ಯೋಪಪತ್ತೇಃ ") ವ್ಯಾವಹಾರಿಕ ಸಂದರ್ಭಗಳಿಂದ ರೂಪಗಳನ್ನು ಬೇರೆ ಬೇರೆಯಾಗಿ ಹೊಂದಿ ಲಿಂಗವ್ಯತ್ಯಾಸವನ್ನು ಸೂಚಿಸುತ್ತಿದ್ದರೂ (ಏಕೈವ ವಾ ಮಹಾನಾತ್ಮಾ ದೇವತಾ) ಎಲ್ಲಕ್ಕೂ ಆತ್ಮಭೂತವಾದುದು ಒಂದೇ ದೇವತೆ ಎಂದು ಹೇಳಿರುವಂತೆ ಇಲ್ಲಿಯೂ ಸಕಲ ರೂಪಗಳಲ್ಲಿಯೂ ಇರುವ ದೇವತಾ ವಿಶೇಷಗಳಿಗೂ ಮೂಲ ದೇವತೆಯು ಒಂದೇ ಅಧಿಷ್ಠಾನವು. ಆದುದರಿಂದ ಇಲ್ಲಿ ಲಿಂಗಭೇದವು ದೇವತಾ ಭೇದವನ್ನು ತೋರಿಸುವುದಿಲ್ಲ. ಆಕಾರ ಭೇದವಿದ್ದರೂ ತಾತ್ತ್ವಿಕವಾದ ಐಕ್ಯವಿದೆ ಎಂದು ಸಮಾಧಾನವನ್ನು ಹೇಳಿದ್ದಾರೆ.

" ಯಾ ಇದಾನೀಂ ಸ್ತ್ರಿಯಃ ಸತೀ; ಸ್ತ್ರೀತ್ವಂ ಪ್ರಾಪ್ತಾ
ಆಹುರ್ಲೌಕಿಕಾಸ್ತಾನ್ ಉ.......ಪುಂಸ ಆಹುಸ್ತತ್ತ್ವಜ್ಞಾಃ "
(ಸಾ. ಭಾ. ೧.೧೬೪.೧೬)

---

1 " ಮಾಯುರಾದಿತ್ಯೋ ಭವತಿ ಸರ್ವಭೂತನಿರ್ಮಾತಾ ".
(ನಿರುಕ್ತ. ೨.೯.)

" ಸ್ತ್ರಿಯಃ ಸತೀಃ " ಎಂಬ ಮಂತ್ರದಲ್ಲಿ ಯಾವ ರಶ್ಮಿತತ್ತ್ವವನ್ನು ಸ್ತ್ರೀರೂಪಿಯೆಂದು ಲೌಕಿಕರು ಹೇಳುವರೋ ಅದನ್ನೇ ತತ್ತ್ವಜ್ಞರು ಪುರುಷರೂಪಿಯೆಂದು ಹೇಳುತ್ತಾರೆ. ಆದರೆ, ಇಲ್ಲೊಂದು ಆಕ್ಷೇಪ.

ಕಥಮನ್ಯಸ್ಯ ಅನ್ಯಭಾವ ಉಚ್ಯತೇ । ಏಕಸ್ಯೈವ
ನಿರಸ್ತಸಮಸ್ತೋಪಾಧಿಕಸ್ಯ ಆತ್ಮನಸ್ತದ್ದೇಹಾವಸ್ಥಾನ
ಮಾತ್ರೇಣ ತತ್ತದ್ವ್ಯಪದೇಶೋಪಪತ್ತೇಃ ॥

ಹಾಗಾದರೆ, ಸ್ತ್ರೀರೂಪಿಯಾದ ತತ್ತ್ವವನ್ನು ಪುಂರೂಪಿಯೆಂದು ಹೇಳುವುದು ಹೇಗೆ ಎಂಬ ಆಕ್ಷೇಪವು ಸಂಭವಿಸುವುದಾದರೆ ಸಮಸ್ತ ಉಪಾಧಿಗಳಿಂದಲೂ ರಹಿತವಾಗಿ ಸಕಲರೂಪಗಳನ್ನೂ ತನ್ನ ಸಂಕಲ್ಪಮಾತ್ರದಿಂದಲೇ ವಹಿಸುವ ಶಕ್ತಿಯುಳ್ಳ ಈ ಆದಿತತ್ತ್ವದ ಮಹಿಮೆಯ ವಿಷಯದಲ್ಲಿ ಇಂಥ ಆಕ್ಷೇಪಗಳಿಗೆ ಅವಕಾಶವೇ ಇಲ್ಲವೆಂದು ಸಮಾಧಾನ ಹೇಳಿದೆ. ಅದ್ವಿತೀಯನಾಗಿದ್ದು ಸೃಷ್ಟಿಕಾಮನಾದಮೇಲೆ ತನ್ನ ಇಚ್ಛಾಮಾತ್ರದಿಂದಲೇ ಸ್ತ್ರೀರೂಪವನ್ನು ಧರಿಸಿ ತಾನೇ ಸ್ತ್ರೀ ಪುಂರೂಪಗಳೆರಡನ್ನೂ ವಹಿಸಿ ಜಗತ್ ಸೃಷ್ಟಿಯನ್ನುಂಟುಮಾಡಿದ ವರ್ಣನೆಯು ಉಪನಿಷದಾದಿಗಳಲ್ಲಿಯೂ ವರ್ಣಿತವಾಗಿದೆ.

ಆತ್ಮೈವೇದಮಗ್ರ ಆಸೀತ್ಪುರುಷವಿಧಃ............
ಸ ಹೈತಾವಾನಾಸ ಯಥಾ ಸ್ತ್ರೀ ಪುಮಾಂಸೌ
ಸಂಪರಿಷ್ವಕ್ತೌ ಸ ಇಮಮೇವಾತ್ಮಾನಂ
ದ್ವೇಧಾಪಾತಯತ್ ॥

(ಬೃ. ಉ. ೧.೪.೧–೩).

ಆದಿಯಲ್ಲಿ ವಿಶ್ವಾತ್ಮನು ಅದ್ವಿತೀಯನಾಗಿದ್ದು ತನ್ನನ್ನುಳಿದು ಇನ್ನಾವ ಎರಡನೆಯ ವಸ್ತುವನ್ನೂ ಕಾಣಲಿಲ್ಲ. ಆದ್ದರಿಂದ, ತನಗೆ ಹರ್ಷವಿಲ್ಲದೆ ತನಗೆ ಹರ್ಷವನ್ನುಂಟುಮಾಡತಕ್ಕ ಎರಡನೆ ವಸ್ತುವೊಂದನ್ನು ಸೃಜಿಸಬೇಕೆಂದಿಚ್ಛಿಸಿದನು. ಅನಂತರ, ಸ್ತ್ರೀಪುರುಷರಿಬ್ಬರೂ ಒಟ್ಟಿಗೆ ಸೇರಿದರೆ ಎಷ್ಟು ವಿಸ್ತೃತವಾಗುವುದೋ ಅಷ್ಟು ವಿಸ್ತೃತವಾಗಿ ಬೆಳೆದನು. ಒಡನೆಯೇ ರೂಪದ್ವಯವನ್ನು ಹೊಂದಿ ಪತಿಪತ್ನೀರೂಪದಲ್ಲಿ ಪರಿಣಮಿಸಿದನು. ಆದ್ದರಿಂದಲೇ " ಈ ಆಕಾಶವೆಲ್ಲವೂ ಸ್ತ್ರೀರೂಪದಿಂದ ವ್ಯಾಪ್ತವಾಗಿದೆ. ವಿಶ್ವಾ

ತ್ಮನು ಈ ಸ್ತ್ರೀರೂಪದೊಡನೆ ಸೇರಲು ಮಾನವಾದಿಗಳ ಸೃಷ್ಟಿಯಾಯಿತು" ಎಂದು ಯಾಜ್ಞವಲ್ಕ್ಯರು ವಿವರಿಸಿದ್ದಾರೆ.

ಪ್ರಜಾಕಾಮೋ ವೈ ಪ್ರಜಾಪತಿಃ ಸ
ತಪೋಽತಪ್ಯತ ಸ ತಪಸ್ತಪ್ತ್ವಾ ಸ
ಮಿಥುನಮುತ್ಪಾದಯತೇ ರಯಿಂ ಚ ಪ್ರಾಣಂ
ಚೇತ್ಯೇತೌ ॥

(ಪ್ರ. ೧.೪).

ಪ್ರಜಾಪತಿಯು ಪ್ರಜಾಕಾಮನಾಗಿ ತಪಸ್ಸಿನ ಮಹಿಮೆಯಿಂದ ಸ್ತ್ರೀರೂಪಿಯಾದ ಪ್ರಕೃತಿಯನ್ನೂ (ರಯಿಂ) ಪುಂರೂಪಿಯಾದ ಪ್ರಾಣವನ್ನೂ ಸೃಜಿಸಿ ಆ ಮಿಥುನದಿಂದ ಪ್ರಜಾವೃದ್ಧಿಯನ್ನುಂಟುಮಾಡಿದನು, ಎಂದು ಸ್ತ್ರೀಪುಂರೂಪಗಳೆರಡನ್ನೂ ಧರಿಸಿದ ಕ್ರಮವನ್ನು ಪ್ರಶ್ನೋಪನಿಷತ್ತಿನಲ್ಲಿ ವರ್ಣಿಸಿದೆ. ಇದನ್ನೇ ಶ್ವೇತಾಶ್ವತರೋಪನಿಷತ್ತಿನಲ್ಲಿ

"ತ್ವಂ ಸ್ತ್ರೀ ತ್ವಂ ಪುಮಾನಸಿ ಕುಮಾರ ಉತ ವಾ ಕುಮಾರೀ ।
ತ್ವಂ ಜೀರ್ಣೋ ದಂಡೇನ ವಂಚಸಿ ತ್ವಂ ಜಾತೋ ಭವಸಿ
ವಿಶ್ವತೋಮುಖಃ ॥

(ಶ್ವೇ. ಉ. ೪.೩).

ವಿಶ್ವತೋಮುಖನಾದ ನೀನು ಸ್ತ್ರೀರೂಪನಾಗಿಯೂ ಪುಂರೂಪಿಯಾಗಿಯೂ, ಇದೇ ರೀತಿ ಕುಮಾರ ಕುಮಾರಿಯರ ರೂಪವುಳ್ಳವನಾಗಿಯೂ ಇದ್ದೀಯೆ ಎಂದು ಪ್ರಶಂಸಿಸಿದೆ. ಕೇನೋಪನಿಷತ್ತಿನಲ್ಲಿ ವರ್ಣಿತವಾಗಿರುವ ಯಕ್ಷದ ಆವಿರ್ಭಾವವೂ ಈ ತತ್ತ್ವವನ್ನೇ ಸಮರ್ಥಿಸುತ್ತದೆ.

ದೇವತೆಗಳೆಲ್ಲರೂ ಯಕ್ಷದ ಸ್ವರೂಪವೇನೆಂದು ತಿಳಿಯಲು [ಅಗ್ನ್ಯಾದಿಗಳ ಪ್ರಯತ್ನವು ವ್ಯರ್ಥವಾದಮೇಲೆ] ಇಂದ್ರನನ್ನು ಕಳುಹಿಸಿದಾಗ ಇಂದ್ರನು ಅದರ ಸಮೀಪಕ್ಕೆ ಹೋದನು. ಆಗ ಅತ್ಯಂತ ಆಕರ್ಷಕವೂ ಪ್ರಕಾಶಮಾನವೂ ಆದ ಒಂದು ಸ್ತ್ರೀವ್ಯಕ್ತಿಯನ್ನು ಅಂತರಿಕ್ಷದಲ್ಲಿ ನೋಡಿದನು. ಇದು ಯಾವುದೆಂದು ಪ್ರಶ್ನಿಸಲು,

ಸಾ ಬ್ರಹ್ಮೇತಿ ಹೋವಾಚ. (ಕೇನ. ೪.೧).

ಈ ಸ್ತ್ರೀ ವ್ಯಕ್ತಿಯೇ ಬ್ರಹ್ಮನೆಂಬ ಉತ್ತರ ಬಂದಿತು. ಋಕ್ಸಂಹಿತೆಯಲ್ಲಿ

" ಸ್ತ್ರಿಯಃ ಸತೀಃ " ಇತ್ಯಾದಿ ವಾಕ್ಯಗಳಲ್ಲಿ ಪ್ರಶಂಸಿತವಾಗಿರುವ ತತ್ತ್ವವೇ ಇಲ್ಲಿಯೂ ವರ್ಣಿತವಾಗಿದೆ.

ಪುರುಷ ಮತ್ತು ವಿರಾಟ್, ದಕ್ಷ ಮತ್ತು ಅದಿತಿ ಇವರ ಸಂಬಂಧವೂ ಮೇಲಿನ ಅಂಶವನ್ನೇ ವಿವರಿಸುತ್ತದೆ.

ತಸ್ಮಾದ್ವಿರಾಡಜಾಯತ, ವಿರಾಜೋ ಅಧಿ ಪೂರುಷಃ.

ಎಂಬ ಪುರುಷಸೂಕ್ತವಾಕ್ಯವು ಪುರುಷ ಮತ್ತು ವಿರಾಟರ ಪರಸ್ಪರೋತ್ಪಾದ್ಯೋತ್ಪಾದಕ ಸಂಬಂಧವನ್ನು ತಿಳಿಸುತ್ತದೆ.

ಸಾಧಾರಣವಾಗಿ ಋಕ್ಸಂಹಿತೆಯಲ್ಲಿ ವಿರಾಟ್ ಶಬ್ದದ ಪ್ರಯೋಗವಿರುವಾಗೆಲ್ಲ (೯.೬೬.೧೮ ಇತ್ಯಾದಿ ಒಂದೆರಡು ಸನ್ನಿವೇಶಗಳನ್ನು ಬಿಟ್ಟು) ಸ್ತ್ರೀವಾಚಕವಾಗಿಯೇ ಇದೆ. ಅಥರ್ವವೇದದಲ್ಲಿ ವಾಕ್ಕಿಗೂ ವಿರಾಟ್ಟಿಗೂ ತಾದಾತ್ಮ್ಯವನ್ನೇ ಹೇಳಿದೆ. (ವಾಗ್ವಿರಾಟ್. ಅ. ವೇ. ೯.೧೦.೨೪), ವಿರಾಟ್ ಛಂದಸ್ಸಿನ ಮಹಾತ್ಮ್ಯವೂ ಅತ್ಯಧಿಕವಾದುದು. ಈ ಛಂದಸ್ಸಿಗೂ ವಾಕ್ಕಿಗೂ ಅನೇಕವೇಳೆ ತಾದಾತ್ಮ್ಯವನ್ನು ಹೇಳಿದೆ.

ವಿವಿಧಾನಿ ರಾಜಂತೇಽತ್ರ ವಸ್ತೂನೀತಿ ವಿರಾಟ್ ಎಂದು ಸಾಯಣರು ವಿವರಿಸುವಂತೆ (೧೦.೯೦.೫) ಅನೇಕ ವಿಧವಾಗಿ ಪ್ರಕಾಶಿಸುವುದರಿಂದ ಅಥವಾ ಸಕಲ ಲೋಕವೂ ಇವನಲ್ಲೇ ವಿಧವಿಧವಾಗಿ ಪ್ರಕಾಶಿಸುವುದರಿಂದ ವಿರಾಟ್ ಎಂಬ ಹೆಸರು ಪ್ರಸಿದ್ಧವಾಗಿದೆ ಎಂಬುದೇ ತಾತ್ಪರ್ಯವಾದರೆ, ಇದೇ ರೀತಿ ವಾಗ್ದೇವಿಯೂ ವರ್ಣಿತಳಾಗಿದ್ದಾಳೆ. ಹೇಗೆಂದರೆ—

ಮಹೋ ಅರ್ಣಃ ಸರಸ್ವತೀ ಪ್ರಚೇತಯತಿ ಕೇತುನಾ ।
ಧಿಯೋ ವಿಶ್ವಾ ವಿ ರಾಜತಿ ॥
(೧ ೩.೧೨)

ವಾಗ್ದೇವಿಯಾದ ಸರಸ್ವತಿಯು ಅನೇಕ ವಿಧವಾಗಿ ವಿರಾಜಿಸುತ್ತಾಳೆ ಎಂಬ ವರ್ಣನವು ಇರುತ್ತದೆ. ಇಲ್ಲಿ ಇನ್ನೊಂದಂಶವನ್ನು ಗಮನಿಸಬೇಕು.

ಪಿತಾ ಯತ್ಸ್ವಾಂ ದುಹಿತರಮಧಿಷ್ಕನ್ ಕ್ಷ್ಮಯಾ ರೇತಃ
ಸಂಜಗ್ಮಾನೋ ನಿ ಷಿಂಚತ್ ।
ಸ್ವಾಧ್ಯೋಽಜನಯನ್ ಬ್ರಹ್ಮ ದೇವಾ ವಾಸ್ತೋಷ್ಪತಿಂ
ವ್ರತಪಾಂ ನಿರತಕ್ಷನ್ ॥
(೧೦.೬೧.೭.)

ಪ್ರಜಾಪತಿಯು ತನ್ನ ಪುತ್ರಿಯೊಡನೆ ಸಂಗಮನ ಮಾಡಿದಾಗ ಪೃಥ್ವಿಯೊಡಗೂಡಿ ರೇತಸ್ಸನ್ನು ಸುರಿಸಿದನು. ಆಗ ಬ್ರಹ್ಮನ ಜನನವಾಯಿತು, ಎಂದಿರುತ್ತದೆ. ಇಲ್ಲಿ ಪುತ್ರಿ ಯಾರು ಎಂಬುದಕ್ಕೆ ಸಾಯಣರು ನಿಶ್ಚಿತವಾದ ಅರ್ಥವನ್ನು ಹೇಳಿಲ್ಲ. ಉಷಸ್, ವಾಕ್ ಹೀಗೆ ವೈಕಲ್ಪಿಕವಾದ ಅರ್ಥವನ್ನು ಹೇಳಬಹುದು. ಪುತ್ರಿಯನ್ನೇ ಪತ್ನಿಯಾಗಿ ಮಾಡಿಕೊಂಡು ಪುತ್ರೋತ್ಪಾದನ ಕ್ರಿಯೆಯನ್ನು ನೆರವೇರಿಸಿದನು ಎಂದಿರುತ್ತದೆ. ಇದನ್ನೇ ತೈತ್ತಿರೀಯ ಸಂಹಿತಾ ವಾಕ್ಯವೂ ವಿವರಿಸುತ್ತಾ,

ಪ್ರಜಾಪತಿರ್ವಿರಾಜಮಪಶ್ಯತ್ತಯಾ ಭೂತಂ ಚ ಭವ್ಯಂ
ಚಾಸೃಜತ ... (ತೈ. ಸಂ. ೩.೩.೫.೨.)

ಪ್ರಜಾಪತಿಯು ವಿರಾಟ್ಟನ್ನು ವೀಕ್ಷಿಸಿದನು ಎಂದಿರುತ್ತದೆ. (ಇಲ್ಲಿಯೂ ವಿರಾಟ್ ಎಂದರೆ ಯಾರು ಎಂಬುದಕ್ಕೆ ನಿಷ್ಕೃಷ್ಟವಾದ ಅರ್ಥವನ್ನು ಹೇಳಿಲ್ಲ). ಅವಳೊಡನೆ ಸೇರಿ ಭೂತ ಮತ್ತು ಭವಿಷ್ಯತ್ಕಾಲದ ಸಕಲ ಪ್ರಜೆಗಳನ್ನೂ ಉತ್ಪನ್ನಮಾಡಿದನು ಇತ್ಯಾದಿಯಾಗಿದೆ. ಇನ್ನು ಕೆಲವೆಡೆ ವಿಶ್ವಕರ್ಮನು ವಾಕ್ಕಿನೊಡನೆ ಸೇರಿ ಪ್ರಜೋತ್ಪತ್ತಿ ಮಾಡಿದನೆಂದಿದೆ.

ಹೀಗೆ ವಿರಾಟ್ ಶಬ್ದಕ್ಕೆ ಯಾವ ಅರ್ಥವನ್ನು ಹೇಳಿದರೂ, ಒಟ್ಟಿನಲ್ಲಿ, ಸೃಷ್ಟಿ ಕರ್ತನು ತನ್ನಿಂದ ಉತ್ಪನ್ನವಾದ ವಸ್ತುವಿನೊಡನೆಯೇ ತಾನು ಸೇರಿ ಪ್ರಪಂಚರೂಪವಾದ ವಿಸ್ತೃತಿಯನ್ನು ಹೊಂದುತ್ತಾನೆ ಎಂಬುದು ಸ್ಪಷ್ಟವಾಗಿದೆ. ಇಂದ್ರನೇ ಪರಮಪುರುಷನೆಂದಾದರೆ ಅವನ ಪತ್ನಿಯು ವಿರಾಟ್ ಎಂದು ಬೃಹದಾರಣ್ಯಕದಲ್ಲಿ ವರ್ಣಿಸಿದೆ.

ಅಥೈತದ್ವಾಮೇಽಕ್ಷಿಣಿ ಪುರುಷರೂಪ
ಮೇಷಾಸ್ಯ ಪತ್ನೀ ವಿರಾಟ್ ತಯೋರೇಷ ಸಂಸ್ತಾವಃ ॥

(ಬೃ. ಉ. ೪.೨.೩.)

ದಕ್ಷಿಣಾಕ್ಷಿಯಲ್ಲಿ (ಬಲಗಣ್ಣಿನಲ್ಲಿ) ಇಂದ್ರನು ವಿರಾಜಿಸುತ್ತಾನೆ. ವಾಮಾಕ್ಷಿಯಲ್ಲಿ (ಎಡಗಣ್ಣು) ಇವನ ಪತ್ನಿಯಾದ ವಿರಾಟ್‌ತತ್ತ್ವವು ವಿರಾಜಿಸುತ್ತದೆ. ಈ ಎರಡು ತತ್ತ್ವಗಳಿಗೂ ಹೃದಯಾಕಾಶವೇ ಸಂಯೋಗಸ್ಥಾನ ಎಂದು ಪುರುಷ ಮತ್ತು ವಿರಾಟ್ ತತ್ತ್ವದ ಸಂಬಂಧವನ್ನು ತಿಳಿಸಿದೆ. ಇದೇ ರೀತಿ,

ಅದಿತೇರ್ದಕ್ಷೋ ಅಜಾಯತ ದಕ್ಷಾದದಿತಿಃ ಪರಿ |

(ಋ. ಸಂ. ೧೦.೭೨.೪.)

ಅದಿತಿಯಿಂದ ದಕ್ಷನೂ, ದಕ್ಷನಿಂದ ಅದಿತಿಯೂ ಉತ್ಪನ್ನರಾದರು ಎಂದು ದಕ್ಷ ಮತ್ತು ಅದಿತಿಗಳಿಗೂ ಪರಸ್ಪರ ಉತ್ಪಾದ್ಯೋತ್ಪಾದಕ ಸಂಬಂಧವು ತಿಳಿಸಿದೆ, ದಕ್ಷ ಮತ್ತು ಅದಿತಿಯರು ಒಂದೇ ಮೂಲತತ್ತ್ವದ ಎರಡು ಅಂಶ ವಿಶೇಷಗಳೆಂದು ತಿಳಿಯಬೇಕು. ಒಟ್ಟಿನಲ್ಲಿ ಲಿಂಗಭೇದವು ದೇವತಾಭೇದ ವನ್ನು ತೋರಿಸುವುದಿಲ್ಲವೆಂದು ತಾತ್ಪರ್ಯ. "ವೃಷಭಶ್ಚ ಧೇನುಃ'' ಇತ್ಯಾದಿ ವಾಕ್ಯಗಳಿಂದಲೂ ಇದೇ ವಿಷಯವನ್ನು ಋಕ್ಸಂಹಿತೆಯು ವಿಶದಪಡಿಸು ತ್ತದೆ.

ಆದಿತ್ಯಾಂತರ್ಗತವಾಗಿರುವ ವಾಕ್ತತ್ತ್ವಕ್ಕೆ ಎರಡು ಅವಸ್ಥೆಯಿರು ತ್ತದೆ. ಸೃಷ್ಟಿಗೆ ಪೂರ್ವ ಮತ್ತು ಸೃಷ್ಟಿರೂಪ. ಸೃಷ್ಟಿಗೆ ಪೂರ್ವ ತ್ರಯೀ ರೂಪವಾದ ವಾಕ್ತತ್ತ್ವವು ಆದಿತ್ಯನ ಸಂಕಲ್ಪರೂಪ ; ಅನಂತರ ನಾಮ ರೂಪಾತ್ಮಕವಾದ ವ್ಯಾಕರಣಾವಸ್ಥೆ. ಇದನ್ನೇ,

"ಪತಂಗೋ ವಾಚಂ ಮನಸಾ ಬಿಭರ್ತಿ | ತಾಂ ಗಂಧರ್ವೋಽ
ವದದ್ಗರ್ಭೇ ಅಂತಃ"

(೧೦.೧೭೭.೨)

ಇತ್ಯಾದಿ ವಾಕ್ಯಗಳಿಂದ ಪ್ರಶಂಸಿಸಿದೆ.[1] ದಿವ್ಯಜ್ಯೋತೀರೂಪನಾದ ಆದಿತ್ಯ ನಿಗೆ ಪ್ರಜಾಪತಿ, ಬೃಹಸ್ಪತಿ, ವಾಚಸ್ಪತಿ, ವಾಯು, ಗಂಧರ್ವ, ಸರಸ್ವಾನ್ ಇತ್ಯಾದಿ ವಿಶೇಷಣಗಳಿರುವಂತೆ, ವಾಗ್ದೇವಿಗೂ ಇದಕ್ಕನುಸಾರವಾಗಿ ಪಾವೀ ರವೀ ಕನ್ಯಾ, ವೀರಪತ್ನೀ, (ಮಾಧ್ಯಮಿಕಾ ವಾಕ್) ಗಾಂಧರ್ವೀ, ಗೌರೀ, ಧೇನುಃ, ಸರಸ್ವತೀ ಇತ್ಯಾದಿ ವಿಶೇಷಣಗಳಿರುತ್ತವೆ. ಇವೆಲ್ಲವೂ ವಾಕ್ಕಿಗೂ ಯಜ್ಞಕ್ಕೂ ಇರುವ ಸಂಬಂಧವನ್ನು ತಿಳಿಸುತ್ತವೆ.

---

1 ಸಾಯಣರು ಈ ವಾಕ್ಯಕ್ಕೆ ಎರಡು ವಿಧವಾದ ತಾತ್ಪರ್ಯವನ್ನು ಹೇಳಿದ್ದಾರೆ.

ಆದಿತ್ಯಪರವಾದ ಅರ್ಥವೊಂದು ಮತ್ತು ಪರಮಾತ್ಮಪರವಾದ ಅರ್ಥವೊಂದು. ಮೊದಲನೆಯದಾಗಿ—

ಆದಿತ್ಯನು ತ್ರಯೀರೂಪವಾದ ವಾಕ್ತತ್ತ್ವವನ್ನು ತನ್ನ ಪ್ರಜ್ಞೆಯಿಂದ ಧರಿಸುತ್ತಾನೆ. ಎಂದರೆ, ತೈತ್ತಿರೀಯ ಬ್ರಾಹ್ಮಣದಲ್ಲಿ ವಿವರಿಸಿರುವಂತೆ,

"ಅಗ್ನಿರ್ಗಾಂಧರ್ವೀಂ ಪಥ್ಯಾಮೃತಸ್ಯಾಗ್ನೇಃ"

(೧೦.೮೦.೬)

ಇತ್ಯಾದಿ ಮಂತ್ರಗಳು ಯಜ್ಞಾಗ್ನಿ, ಯಜ್ಞ ಮತ್ತು ವಾಕ್ಕುಗಳ ಅನ್ಯೋನ್ಯ ಸಂಬಂಧವನ್ನು ಇನ್ನೂ ವಿಶದಪಡಿಸುತ್ತವೆ.

ಸೃಷ್ಟಿರೂಪವಾದ ಯಜ್ಞಕ್ಕೆ ಯಾವ ರೀತಿ ವಾಕ್ಕಿನ ಸಹಾಯವು ಆವಶ್ಯವೋ ಅದರಂತೆಯೇ ವಾಕ್ತತ್ತ್ವವನ್ನು ತಿಳಿಯಲು ಯಜ್ಞದ ಸ್ವರೂಪ ಜ್ಞಾನವು ಅತ್ಯವಶ್ಯ, [1] "ಉಪಹ್ವಯೇ ಸು ದುಘಾಂ", "ಹಿಙ್ಕೃಣ್ವತೀ", "ಗೌರಮೀಮೇದನು", "ಅಪಶ್ಯಂ ಗೋಪಾಂ" [2] ಇತ್ಯಾದಿ ಮಂತ್ರಗಳು ವಾಕ್ತತ್ತ್ವಕ್ಕೂ ಯಜ್ಞಕ್ಕೂ ಇರುವ ಸಂಬಂಧವನ್ನು ತಿಳಿಸುತ್ತವೆ. ಮುಖ್ಯವಾಗಿ ಇವು ಪ್ರವರ್ಗ್ಯವಾಚ್ಯವಾದ ಯಜ್ಞ ಸಂಬಂಧಿಯಾದ

---

"ಪ್ರಾತಃಕಾಲದಲ್ಲಿ ಋಗ್ರೂಪವಾದ ವಾಕ್ಕಿನೊಡನೆ ಅಂತರಿಕ್ಷದಲ್ಲಿ ಸಂಚರಿಸುತ್ತಾನೆ. ಮಧ್ಯಾಹ್ನಕಾಲದಲ್ಲಿ ಯಜುರ್ವೇದ ರೂಪವಾದ ವಾಕ್ಕಿನಲ್ಲಿ ಸ್ಥಾಪಿತನಾಗುತ್ತಾನೆ. ಮತ್ತು ಅಸ್ತಕಾಲದಲ್ಲಿ ಸಾಮರೂಪವಾದ ವಾಕ್ಕಿನಿಂದ ಕೊಂಡಾಡಲ್ಪಡುತ್ತಾನೆ." ಹೀಗೆ ಸರ್ವಕಾಲದಲ್ಲೂ ತ್ರಯೀರೂಪವಾದ ವಾಕ್ಕಿನೊಡನೆ ನಿಯತವಾದ ಸಂಬಂಧವನ್ನು ಹೊಂದಿರುತ್ತಾನೆ. ಇದೇ ವಾಕ್ಕನ್ನು ಗಂಧರ್ವನು ಪ್ರೇರಿಸುತ್ತಾನೆ. ದಿವ್ಯಪ್ರಕಾಶವನ್ನು ಹೊಂದಿರುವ ಈ ವಾಗ್ದೇವಿಯನ್ನು ಮೇಧಾವಿಗಳಾದ ಋಷಿಗಳು ಯಜ್ಞಸ್ಥಾನದಲ್ಲಿ ರಕ್ಷಿಸುತ್ತಾರೆ.

ಎರಡನೆಯದಾಗಿ—

ಪತಂಗನು (ಪರಮಾತ್ಮನು) ಜಗತ್ಸೃಷ್ಟಿಗಿಂತಲೂ ಪೂರ್ವದಲ್ಲಿ ಸಕಲಾರ್ಥ ಪ್ರತಿಪಾದಕವಾದ ವೇದವನ್ನು ತನ್ನ ಮನಸ್ಸಿನಲ್ಲಿ ಧರಿಸಿದನು. ಬ್ರಹ್ಮಾಂಡಾಂತರ್ಗತನಾದ ಹಿರಣ್ಯಗರ್ಭನು ಈ ವೇದರೂಪವಾದ ವಾಕ್ಕನ್ನು ಪ್ರಥಮತಃ ಉಚ್ಚರಿಸಿದನು. ಕ್ರಾಂತದರ್ಶಿಗಳಾದ ದೇವತೆಗಳು ಈ ವಾಕ್ಕನ್ನು ಸತ್ಯಾತ್ಮಕನಾದ ಬ್ರಹ್ಮನ ಸ್ಥಾನದಲ್ಲಿ ರಕ್ಷಿಸುತ್ತಾರೆ; ಎಂದು ಸೃಷ್ಟಿಗೆ ಪೂರ್ವದ ಈಶ್ವರಸಂಕಲ್ಪರೂಪದ ಅವಸ್ಥೆ ಮತ್ತು ಸೃಷ್ಟಿರೂಪವಾದ ವ್ಯಾಕರಣಾವಸ್ಥೆ ಎರಡನ್ನೂ ವಿವರಿಸಿದೆ.

1 ಯಜ್ಞೇನ ವಾಚಃ ಪದವೀಯಮಾಯನ್ |

(೧೦.೭೧.೩.)

2 ಋ. ಸಂ. ೧.೧೬೪. ೨೬—೩೧.

ಮಂತ್ರಗಳು. ಪ್ರವರ್ಗ್ಯವು ಯಜ್ಞಗಳಿಗೆಲ್ಲ ಶಿರೋರೂಪವಾದುದು. ಈ ಋಕ್ಕುಗಳಲ್ಲಿ ಉದ್ದಿಷ್ಟವಾಗಿರುವ ಮುಖ್ಯದೇವತೆ ಆದಿತ್ಯ. ಪ್ರವರ್ಗ್ಯಾಖ್ಯವಾದ ಯಜ್ಞತತ್ತ್ವವನ್ನರಿತವನು ಆದಿತ್ಯ ತತ್ತ್ವವನ್ನರಿತು ಅವನ ದಿವ್ಯ ಜ್ಯೋತಿಯೊಡನೆ ಸೇರಿ ತಾನೂ ಜ್ಯೋತೀರೂಪನಾಗುತ್ತಾನೆಂದು ಪ್ರಶಂಸಿಸಿದೆ.

ಸೃಷ್ಟಿಯಿಂದ ಆರಂಭಿಸಿ ಸಕಲ ವ್ಯವಹಾರಗಳಿಗೂ ಆವೃತ್ತಿರೂಪವಾದ ವಿಶ್ವಚಕ್ರಕ್ಕೂ ಮೂಲನಾದ ಪರಬ್ರಹ್ಮನೇ ಯಜ್ಞದಲ್ಲಿ ನಿತ್ಯನಾಗಿ ಪ್ರತಿಷ್ಠಿತನಾಗಿದ್ದಾನೆ. ಯಾವ ವ್ಯಕ್ತಿಯು ಯಜ್ಞರೂಪವಾದ ವಿಶ್ವತತ್ತ್ವವನ್ನರಿಯದೆ ಮತ್ತು ವಿಶ್ವಚಕ್ರದ ಹಾದಿಯನ್ನನುಸರಿಸದೆ ಸ್ವೇಚ್ಛೆಯಾಗಿರುವನೋ ಅವನು ಪಾಪಿಷ್ಠನು.[1]

ಯಜ್ಞತತ್ತ್ವದಲ್ಲಿಡಬೇಕಾದ ಈ ಶ್ರದ್ಧೆಯು ಕೇವಲ ಅಂಧಶ್ರದ್ಧೆಯಲ್ಲ. ಈ ಶ್ರದ್ಧೆಯು ಆಧ್ಯಾತ್ಮಿಕವಾದ ತತ್ತ್ವವನ್ನು ಗ್ರಹಣಮಾಡುವ ಶಕ್ತಿಯುಳ್ಳದ್ದಾಗಿರಬೇಕು. ಇದು ಸಕಲ ಭುವನನಾಭಿಯಾದ ಯಜ್ಞಕ್ಕೂ ಬ್ರಹ್ಮತತ್ತ್ವಕ್ಕೂ ಇರುವ ಸಂಬಂಧವನ್ನರಿಯುವುದಾಗಿರಬೇಕು. ಆಧ್ಯಾತ್ಮಿಕಜ್ಞಾನದ ಆಧಾರದ ಮೇಲೆ ನಿಂತಿರುವ ಈ ಶ್ರದ್ಧೆಯುಳ್ಳ ಯಜಮಾನನು ತನಗೂ ಯಜ್ಞಕ್ಕೂ ತಾದಾತ್ಮ್ಯವನ್ನು ಕಲ್ಪಿಸಿಕೊಳ್ಳುತ್ತಾನೆ. ಯಜ್ಞಕ್ಕೂ ಪ್ರಜಾಪತಿಗೂ ಇರುವ ತಾದಾತ್ಮ್ಯವನ್ನರಿಯುತ್ತಾನೆ. ಪ್ರಜಾಪತಿ ರೂಪಿಯಾದ ಪರಬ್ರಹ್ಮನ ವಿಶ್ವವ್ಯವಹಾರಗಳೆಲ್ಲವೂ ಯಜ್ಞತತ್ತ್ವದಲ್ಲಡಗಿರುತ್ತದೆಯೆಂದರಿಯುತ್ತಾನೆ. ವಿಶ್ವಚಕ್ರದ ಗತಿಯಲ್ಲಿ ತಾನೂ ಭಾಗವಹಿಸುತ್ತಾನೆ.

ಉಪನಿಷತ್ತುಗಳಲ್ಲಿ ವರ್ಣಿತವಾಗಿರುವ ವೈಯಕ್ತಿಕವಾದ ಪುರುಷಯಜ್ಞವು ಅನಾದ್ಯನಂತವಾದ ವಿಶ್ವಕರ್ಮನ ವಿಶ್ವಯಜ್ಞದ ಪ್ರತಿಬಿಂಬ. ವಿಶ್ವಕರ್ಮನ ಯಜ್ಞಕ್ಕೆ ಆದಿಯಿಲ್ಲ. ಅಂತ್ಯವಿಲ್ಲ. ಅದು ನಿರಂತರ ಮುಂದುವರಿಯುತ್ತಲೇ ಇದೆ. ಈ ಯಜ್ಞದ ಫಲವಾಗಿ ಸೃಷ್ಟಿಸ್ಥಿತಿಲಯಗಳೂ ನಿರಂತರ. ಹೀಗೆ ಅನಾದ್ಯನಂತವಾದರೂ ಪ್ರತಿಯೊಂದು ಸೃಷ್ಟಿಯೂ

---

1 ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ।
ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ॥
ಭ. ಗೀ. ೩.೧೬

ಯಜ್ಞಫಲವಾಗಿರುವುದರಿಂದ ಪ್ರತಿಯೊಂದು ಯಜ್ಞಕ್ಕೂ ಕಾಲರೂಪವಾದ ಅಥವಾ ದೇಶರೂಪವಾದ ಒಂದು ಪ್ರಮಾಣವು ಅವಶ್ಯ. ಕಾಲರೂಪವಾದ ಅವಧಿಗೆ ಸಂವತ್ಸರವೇ ಪ್ರಮಾಣ. ಸಂವತ್ಸರಕ್ಕೆ ವಸಂತ, ಗ್ರೀಷ್ಮ ಮತ್ತು ಶರತ್ತುಗಳು ಅವಯವಗಳಾಗಿರುವಂತೆ ಸಂವತ್ಸರಾತ್ಮಕವಾದ ಯಜ್ಞಕ್ಕೂ ಆಜ್ಯಾಹುತಿ, ಸಮಿತ್ತಿನ ಅರ್ಪಣ ಮತ್ತು ಹವಿರರ್ಪಣ ಎಂಬ ಮೂರು ಸಂಕೇತರೂಪವಾದ ಅವಯವಗಳಿರುತ್ತವೆ.

ಪ್ರಜಾಪತಿ, ಪುರುಷ ಇತ್ಯಾದಿ ಸಂಜ್ಞೆಗಳಿಂದ ನಿರ್ದಿಷ್ಟನೂ ವಿಶ್ವ ರೂಪಿಯೂ ಆದ ವಿಶ್ವಕರ್ಮನು ಹಿಂದಿನ ಮಾದರಿಯನ್ನೇ ಅನುಸರಿಸಿ ಸೃಷ್ಟಿಹೇತುವಾದ ತನ್ನ ಪ್ರತಿಯೊಂದು ಯಜ್ಞದಲ್ಲಿಯೂ ತನ್ನನ್ನೇ ಪೂರ್ಣ ನಾದ ಆಹುತಿಯನ್ನಾಗಿ ಅರ್ಪಿಸಿ,

"ತಸ್ಮಾತ್ಪಶ್ಚಾದ್ವರೀಯಸಃ ಪ್ರಜನನಾದಿಮಾಃ ಪ್ರಜಾಃ ಪ್ರಜಾಯಂತೇ"

(ಶ. ಬ್ರಾ. III. 5.1.11.)

ಇತ್ಯಾದಿಯಾಗಿ ವರ್ಣಿತವಾಗಿರುವಂತೆ ಯಜ್ಞರೂಪವಾದ ಸ್ತ್ರೀಯೋನಿ ಯಿಂದ ಪ್ರಜೆಗಳನ್ನು ಉತ್ಪನ್ನಮಾಡುತ್ತಾನೆ.

ದೇವತೆಗಳು ಮತ್ತು ಅಸುರರಾದಿಯಾಗಿ ಅಣುರೂಪವಾದ ಮೃತ್ತಿನ ವರೆಗೆ ಉತ್ಪನ್ನವಾದ ಸಕಲವೂ ಈ ಯಜ್ಞದ ಫಲ. ಈ ಯಜ್ಞಕರ್ತರು ಮೂವರು.

(೧) ಪ್ರಜಾಪತಿ,
(೨) ಪಾರ್ಥಿವಾಗ್ನಿ,
(೩) ಮಾನವರೂಪನಾದ ಯಜಮಾನ.

ಈ ಮೂವರ ಕರ್ಮವೂ ಒಂದೇ ನಿಯಮವನ್ನನುಸರಿಸಬೇಕು. ಮಾನವನು ತನ್ನ ವೈಯಕ್ತಿಕವಾದ ಪುರುಷಯಜ್ಞದ ಕಾಲದಲ್ಲಿ ವಿಶ್ವ ಕರ್ಮನ ಯಜ್ಞತತ್ತ್ವವನ್ನನುಸರಿಸಬೇಕು. ಪುರುಷನ ಕರ್ತವ್ಯಗಳಿಗೆ ಅಗ್ನಿಯೇ ಮಾದರಿ.[1] ಆದುದರಿಂದ "ಅಗ್ನೇ ನಯ" ಇತ್ಯಾದಿಯಾಗಿ ಸನ್ಮಾರ್ಗ ದರ್ಶಕನಾದ ಅಗ್ನಿಯನ್ನು ಪ್ರಾರ್ಥಿಸಿದೆ.

---

1 IV. 9.

" ಅಗ್ನೇ ತದಸ್ಯ ಕಲ್ಪಯ ..
ಪುರುಷ ಸಂಮಿತೋ ಯಜ್ಞಃ . *
ತೈ. ಬ್ರಾ. III. 7.11.5.

ಇತ್ಯಾದಿ ವಾಕ್ಯಗಳಲ್ಲಿ ತಿಳಿಸಿರುವಂತೆ ಪುರುಷನು (ಯಜಮಾನನು) ಯಜ್ಞ ತತ್ತ್ವವನ್ನರಿತು ತನ್ನ ಕ್ರಿಯೆಯನ್ನು ಆಚರಿಸಿದರೆ ತಾನೂ ಮೂಲಪುರುಷನ ಪ್ರಮಾಣವನ್ನೇ ಹೊಂದುತ್ತಾನೆ, ಎಂದರೆ ಸಂಕುಚಿತರೂಪವುಳ್ಳವನು ತನ್ನ ಯಜ್ಞಕ್ರಿಯೆಯಿಂದ ವಿಕಾಸವನ್ನು ಹೊಂದಿ ಸಂಕೋಚದಿಂದ ಮುಕ್ತನಾಗುತ್ತಾನೆ. ಈ ವಿಧವಾದ ಆತ್ಮವಿಸ್ತೃತಿಯೇ ಯಜ್ಞದ ಉದ್ದಿಶ್ಯ.



# ಪುರುಷಾರ್ಥ

ಪರಿಚಿನ್ಮರ್ತೋ ದ್ರವಿಣಂ ಮಮನ್ಯಾದೃತಸ್ಯ ಪಥಾ
ನಮಸಾ ವಿವಾಸೇತ್ ।
ಉತ ಸ್ವೇನ ಕ್ರತುನಾ ಸಂ ವದೇತ ಶ್ರೇಯಾಂಸಂ
ದಕ್ಷಂ ಮನಸಾ ಜಗೃಭ್ಯಾತ್ ॥
(ಋ. ಸಂ. ೧೦.೩೧.೨.)

ಪುರುಷನು ಸರ್ವಪ್ರಯತ್ನದಿಂದಲೂ ಧನಾರ್ಜನೆಯನ್ನು ಮಾಡಬೇಕು. ಋತಮಾರ್ಗದಲ್ಲಿ ಜೀವನವನ್ನು ನಡೆಸಿ ಯಜ್ಞರೂಪವಾದ ಕ್ರಿಯೆಯಲ್ಲಿ ಅದನ್ನು ವಿನಿಯೋಗಿಸಿ ಈಶ್ವರ ಪೂಜೆಯಲ್ಲಿ ನಿರತನಾಗಬೇಕು. ಜ್ಞಾನಪೂರ್ವಕವಾದ ಧ್ಯಾನದಲ್ಲಿ ಮಗ್ನನಾಗಿ ಈ ಧ್ಯಾನದ ಮೂಲಕ ಸರ್ವವ್ಯಾಪಿಯೂ ಸರ್ವಶಕ್ತನೂ ಆದ ಈಶ್ವರನನ್ನು ಸಾಕ್ಷಾತ್ಕಾರಮಾಡಿಕೊಳ್ಳಬೇಕು. ಇದೇ ಪುರುಷಾರ್ಥ.

ಪುರುಷಾರ್ಥವು ಎರಡುವಿಧ[1] ಮೊದಲನೆಯದಾಗಿ, ಆರ್ಥಿಕ ಸಂಪತ್ತು; ಅದರಿಂದ ಜೀವನದ ಪೌಷ್ಕಲ್ಯ ಮತ್ತು ಸೌಂದರ್ಯ. ಎರಡನೆಯದಾಗಿ, ಆಧ್ಯಾತ್ಮಸಂಪತ್ತು; ಅದರಿಂದ ವಿಶ್ವಸಾಮರಸ್ಯಸಾಕ್ಷಾತ್ಕಾರ.

ಈ ಎರಡು ಧ್ಯೇಯಗಳ ಸಂಪಾದನೆಗೂ ಉತ್ತಮವಾದ ಕರ್ಮವು ಅತ್ಯವಶ್ಯ. ಉತ್ತಮವಾದ ಕರ್ಮಕ್ಕೂ ಉತ್ತಮವಾದ ಜೀವನಕ್ಕೂ ಅನ್ಯೋನ್ಯಾಶ್ರಯ. ಜೀವನದ ಪೌಷ್ಕಲ್ಯವು ಉತ್ತಮವಾದ ಕರ್ಮವನ್ನು ಅವಲಂಬಿಸಿರುವಂತೆ ಉತ್ತಮವಾದ ಕರ್ಮವೂ ಜೀವನದ ಆರ್ಥಿಕಸಂಪತ್ತು ಮತ್ತು ಮಾನಸಿಕಸುಖಸಂತೋಷಗಳನ್ನವಲಂಬಿಸಿದೆ. ಕರ್ಮವು ಎಷ್ಟು ಮುಖ್ಯವೋ ಕರ್ಮಸಾಧಕವಾದ ದೈಹಿಕ ಮತ್ತು ಮಾನಸಿಕ ಸುಖಶಾಂತಿಗಳೂ ಅಷ್ಟೇ ಮುಖ್ಯ.

---

1 **ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳೂ ಇದರಲ್ಲೇ ಅಡಗಿವೆ.**

೧

ಪುಷ್ಕಲವಾದ ಜೀವನವನ್ನು ಹೊಂದಲು ಎಲ್ಲರಿಗೂ ಅಧಿಕಾರವಿಲ್ಲ. ವಿಶ್ವನಿಯಮದಲ್ಲಿ ಶ್ರದ್ಧೆಯನ್ನಿಟ್ಟು ಅದೇ ನಿಯಮವನ್ನು ವೈಯುಕ್ತಿಕ ಜೀವನದಲ್ಲೂ ಅನುಸರಿಸಬೇಕು. ಅಂಥ ಸತ್ಯಾತ್ಮಕ ಮತ್ತು ನೀತಿಯುತ ಜೀವನವನ್ನು ಆಚರಿಸಲು ಯಾರಿಗೆ ಸಾಧ್ಯವೋ ಅವರಿಗೆ ಮಾತ್ರ ಈ ಅಧಿಕಾರ ಜೀವನದಲ್ಲಿ ಸುಖಸಂಪತ್ತುಗಳು ದೈವಾನುಗ್ರಹದ ಫಲವಾದರೆ, ದೈವಾನುಗ್ರಹಕ್ಕೆ ಪುರುಷಕಾರವೇ ಮೂಲ.

“ ಪ್ರಾಮಾಣಿಕನಾದ ಕರ್ಮಕರ್ತನ ಸಖ್ಯವನ್ನು ಮಾಡಲು ದೇವತೆಗಳು ಇಚ್ಛಿಸುತ್ತಾರೆ. ನಾವು ಋಜುಮಾರ್ಗವುಳ್ಳ ಯಜ್ಞಕರ್ತರು. ಆದ್ದರಿಂದ ದೇವತೆಗಳ ಉದಾರವಾದ ಅನುಗ್ರಹವು ನಮ್ಮಮೇಲಿರಲಿ. ನಮ್ಮ ಪ್ರಾಮಾಣಿಕತೆಯ ಫಲವಾಗಿ ಅವರು ನಮ್ಮ ಆಯುಸ್ಸನ್ನು ಬೆಳಿಸಲಿ ”[1]

“ ಋತಮಾರ್ಗವನ್ನನುಸರಿಸುವ ಕರ್ಮಕರ್ತನಿಗೆ ಮಾತ್ರ ಪೂಜ್ಯನಾದ ಸವಿತೃವು ಉತ್ತಮವಾದ ಅನ್ನಸಂಪತ್ತನ್ನು ಕೊಡುತ್ತಾನೆ ”[2]

“ ಪ್ರಾಮಾಣಿಕನಾದ ಪುರುಷನನ್ನು ದೇವತೆಗಳು ಸಕಲ ಆಪತ್ತುಗಳಿಂದ ರಕ್ಷಿಸುತ್ತಾರೆ ”[3] ಇತ್ಯಾದಿ ವಾಕ್ಯಗಳು ಮನುಷ್ಯನ ಪ್ರಾಮಾಣಿಕತೆಗೂ ದೈವಾನುಗ್ರಹಕ್ಕೂ ಇರುವ ನಿಯತವಾದ ಸಂಬಂಧವನ್ನು ತಿಳಿಸುತ್ತವೆ.

---

1 ದೇವಾನಾಂ ಭದ್ರಾ ಸುಮತಿರ್ಋಜೂಯತಾಂ ದೇವಾನಾಂ
ರಾತಿರಭಿ ನೋ ನಿ ವರ್ತತಾಂ |
ದೇವಾನಾಂ ಸಖ್ಯಮುಪ ಸೇದಿಮಾ ವಯಂ ದೇವಾ ನ ಆಯುಃ
ಪ್ರತಿರನ್ತು ಜೀವಸೇ ||
(ಋ. ಸಂ. ೧.೮೯.೨.)

2 ಆ ನೋ ದೇವಃ ಸವಿತಾ ಸಾವಿಷದ್ವಯ ಋಜೂಯತೇ
ಯಜಮಾನಾಯ ಸುನ್ವತೇ |
(ಋ. ಸಂ. ೧೦.೧೦೦.೩.)

3 “ ಯೋ ಮಿತ್ರಾಯ ವರುಣಾಯಾವಿಧಜ್ಜನೋಽನರ್ವಾಣಂ
ತಂ ಪರಿ ಪಾತೋ ಅಂಹಸಃ |
(ಋ. ಸಂ. ೧.೧೩೬.೫.)

ವಿಶ್ವನಿಯಮದಲ್ಲಿ ಶ್ರದ್ಧೆಯಿರುವವನಿಗೆ ಸತ್ಯಯುತವಾದ ಜೀವನವು ಸಹಜವಾಗಿಯೇ ಉಂಟಾಗುತ್ತದೆ. "ಯಾವ ಇಂದ್ರನ ಕೀರ್ತಿಯನ್ನು ಗಂಗಾದಿಸಪ್ತನದಿಗಳೂ ಪ್ರಪಂಚಕ್ಕೆ ಹರಡುವುವೋ, ಯಾವ ಆದಿತ್ಯರೂಪನಾದ ಇಂದ್ರನ ದಿವ್ಯತೇಜಸ್ಸನ್ನು ದ್ಯಾವಾಪೃಥಿವಿಗಳೂ ಧರಿಸುವುವೋ, ಯಾರ ನಿಯಮಾನುಸಾರ ಸೂರ್ಯಾಚಂದ್ರಮಸರು ತಮ್ಮ ಪರ್ಯಾಯ ರೂಪವಾದ ಪರಿಭ್ರಮಣವನ್ನು ಹೊಂದಿರುವರೋ ಆ ಇಂದ್ರನ ನಿಯಮದಲ್ಲಿ ಶ್ರದ್ಧೆಯನ್ನಿಡಬೇಕು" ಎಂದು ಋಕ್ಸಂಹಿತೆಯ ಸಂದೇಶ. ವೈಯಕ್ತಿಕವಾದ ಮತ್ತು ವ್ಯಾವಹಾರಿಕವಾದ ಋಜುತ್ವಕ್ಕೆ ಈ ಶ್ರದ್ಧೆಯೇ ಮೂಲ. ಶ್ರದ್ಧಾಯುತವಾದ ಋಜುಮಾರ್ಗಾನುಸರಣವು ಸಕಲಸಂಪತ್ತಿಗೂ ಕಾರಣ. ಇದರ ಫಲವಾಗಿ "ವಾಯ್ವಾತ್ಮಕನಾದ ಈಶ್ವರನು ಮಧುರವಾದ ಕರ್ಮಫಲಗಳನ್ನುಸುರಿಸುತ್ತಾನೆ ನದಿಗಳು ತಮ್ಮ ಮಧುರವಾದ ರಸವನ್ನು ಹರಿಸುತ್ತವೆ. ದ್ಯಾವಾಪೃಥಿವಿಗಳು ಇವನಿಗೆ ಸುಖಕಾರಕರಾಗುತ್ತಾರೆ."[1] ಇದೇ ಅಲ್ಲದೆ, ಋಜುಮಾರ್ಗಾವಲಂಬಿಯಾದ ವ್ಯಕ್ತಿಯ ಪ್ರಪಂಚವು ಸಂಕುಚಿತವಾಗಿ ಇರದೆ ಬಹಳ ವಿಸ್ತೃತವಾಗುತ್ತದೆ. "ಋತಮಾರ್ಗವನ್ನವಲಂಬಿಸುವ ಮನುಷ್ಯನಿಗಾಗಿ ಆದಿತ್ಯರು ಮೂರುಲೋಕಗಳಲ್ಲೂ ತೇಜಸ್ಸನ್ನು ಹರಡಿದ್ದಾರೆ. ಇವನ ಸೌಖ್ಯಸಂಪಾದನೆಯ ವಿಷಯದಲ್ಲಿ ಅವರು ಯಾವಾಗಲೂ ಜಾಗರೂಕರು. ಇಂಥ ಕರ್ಮಕರ್ತನಿಗಾಗಿ ಅವರು ಕೊಂಚವೂ ಆಲಸ್ಯವಿಲ್ಲದೆ ಕಣ್ಣಿನ ಎವೆಯನ್ನು ಇಕ್ಕದೆ ಕರ್ತವ್ಯೋನ್ಮುಖರಾಗಿದ್ದಾರೆ."[2]

"ಎಲೈ ಇಂದ್ರಾವಿಷ್ಣುಗಳೇ, ನಮ್ಮಿಂದ ಅರ್ಪಿತವಾದ ಸೋಮವನ್ನು ಪಾನಮಾಡಿ ಆ ಹರ್ಷದ ಫಲವಾಗಿ ನಮ್ಮ ಸೌಖ್ಯಕ್ಕಾಗಿ ನೀವು ನೆರವೇರಿ

---

1 "ಮಧು ವಾತಾ ಋತಾಯತೇ ಮಧು ಕ್ಷರಂತಿ ಸಿಂಧವಃ"

(೧.೯೦.೬.)

2 "ತ್ರೀ ರೋಚನಾ ದಿವ್ಯಾ ಧಾರಯಂತ ಹಿರಣ್ಯಯಾಃ
ಶುಚಯೋ ಧಾರಪೂತಾಃ ।
ಅಸ್ವಪ್ನಜೋ ಅನಿಮಿಷಾ ಅದಬ್ಧಾ ಉರುಶಂಸಾ
ಋಜವೇ ಮರ್ತ್ಯಾಯ ॥

(೨.೨೭.೯.)

ಿದ ಕಾರ್ಯವು ಬಹಳ ಪ್ರಶಂಸನೀಯವಾಗಿದೆ. ನಮ್ಮ ಉತ್ತಮವಾದ ಜೀವನಕ್ಕಾಗಿ ನೀವು ದ್ಯಾವಾಪೃಥಿವಿಗಳನ್ನೇ ವಿಸ್ತೃತವಾಗಿ ಹರಡುವಂತೆ ಮಾಡಿದಿರಿ"[1] ಇತ್ಯಾದಿ ಪ್ರಶಂಸೆಗಳು ಋಜುಮಾರ್ಗಾವಲಂಬಿಯಾದ ಪುರುಷನ ಸೌಭಾಗ್ಯಕ್ಕಾಗಿ ಪ್ರಪಂಚವು ಎಷ್ಟು ವಿಸ್ತೃತವಾಗಿ ಮಾಡಲ್ಪಡುವುದೆಂದೂ ಇವೆಲ್ಲವೂ ಅವನ ಕರ್ಮದ ಫಲವೆಂದೂ ತಿಳಿಸುತ್ತವೆ.

ಋತಮಾರ್ಗವನ್ನನುಸರಿಸುವವನಿಗೆ ಸಂಪತ್ಸಮೃದ್ಧಿ ಎಷ್ಟು ಖಚಿತವೋ ಅಷ್ಟೇ ಖಚಿತವಾಗಿ ಅಪ್ರಾಮಾಣಿಕನೂ, ಕರ್ಮಭ್ರಷ್ಟನೂ ಆದ ವ್ಯಕ್ತಿಗೆ ದಂಡವು ಸಿದ್ಧ. ಯಜ್ಞಾದಿ ಕರ್ಮರಹಿತನೂ ಸ್ವಾರ್ಥಿಯೂ ಆದವನ ಧನನಾಶವು ಖಂಡಿತ. ಅವನ ಸರ್ವನಾಶವೂ ಸಿದ್ಧ.

"ಕರ್ಮಕರ್ತನಾದ ಇಂದ್ರನು ಕರ್ಮರಹಿತನ ಧನವನ್ನು ಅಪಹರಿಸುತ್ತಾನೆ"[2]

"ತಾವೂ ಯಜ್ಞಮಾಡದೆ ಯಜ್ಞಕರ್ತರಿಗೆ ಹಿಂಸಕರಾದವರನ್ನು ಯಜ್ಞಕರ್ತನ ಸ್ತುತಿಯಿಂದ ಪ್ರೇರಿತನಾದ ಇಂದ್ರನು, ನಾಶಪಡಿಸುತ್ತಾನೆ."[3] "ಧನವಂತನಾದರೂ ದಾನಮಾಡಲಿಚ್ಛಿಸದ ಪುರುಷನ ಧನವು ನಾಶವಾಗುತ್ತದೆ."[4]

---

1 ಇಂದ್ರಾವಿಷ್ಣೂ ತತ್ಪನಯಾಯ್ಯಂ ವಾಂ ಸೋಮಸ್ಯ
ಮದ ಉರು ಚಕ್ರಮಾಥೇ |
ಅಕೃಣುತಮಂತರಿಕ್ಷಂ ವರೀಯೋಽಪ್ರಥತಂ ಜೀವಸೇ
ನೋ ರಜಾಂಸಿ ||
(ಋ. ಸಂ. ೬.೬೯.೫.)

2 ಸ ಆದೃತ್ವಾ ಪರಿಪಂಥೀವ ಶೂರೋಽಯಜ್ವನೋ
ವಿಭಜನ್ನೇತಿ ವೇದಃ |
(ಋ. ಸಂ. ೧.೧೦೩.೬.)

3 ಜಘನ್ವಾನಿಂದ್ರ ಮಿತ್ರೇರೂಞ್ಚೋದಪ್ರವೃದ್ಧೋ
ಹರಿವೋ ಅದಾಶೂನ್ |
(ಋ. ಸಂ. ೧.೧೭೪.೬.)

4 ೧೦.೧೧೭.

ದೈವಾನುಗ್ರಹವನ್ನಪೇಕ್ಷಿಸುವವನು ಕರ್ಮರಾಹಿತ್ಯವೇ ಮುಂತಾದ ಅನೇಕ ಪಾಪಗಳಿಂದ ದೂರನಾಗಿರುತ್ತೇನೆಂದು ತಿಳಿಸಿ, "ಪಾಪರಹಿತನಾದ ನಾನು ವರುಣನನ್ನು ಪೂಜಿಸುತ್ತೇನೆ. ನನಗೆ ವರುಣನು ಧನಪ್ರೇರಕ ನಾಗಲಿ "[1]

"ಆಗ್ನ್ಯಾದಿ ದೇವತೆಗಳ ವಿಷಯದಲ್ಲಿ ನಾನು ಪ್ರಮಾಣಿಕನೂ ಪಾಪರಹಿತನೂ ಆಗಿದ್ದೇನೆ. ನನಗೆ ಸಕಲ ದೇವತೆಗಳ ರಕ್ಷಣೆಯೂ ಸಿಕ್ಕಲಿ"[2]

ಇತ್ಯಾದಿಯಾಗಿ ತನ್ನ ಪಾಪರಾಹಿತ್ಯವನ್ನೂ ಆತ್ಮಶುದ್ಧಿಯನ್ನೂ ದೇವತೆಗಳ ಮುಂದೆ ವ್ಯಕ್ತಪಡಿಸುತ್ತಾನೆ.

ಪಾಪದಲ್ಲಿ ಎರಡು ವಿಧ. ಪುರುಷನ ಆತ್ಮಕೃತ ಮತ್ತು ಆಧಿದೈವಿಕ. ಸ್ವಪ್ರಯತ್ನದಿಂದ ಮೊದಲನೆ ಜಾತಿಗೆ ಸೇರಿದ ಪಾಪಗಳನ್ನು ನಾಶಮಾಡಿ ಕೊಳ್ಳಬಹುದು. ದಾರಿದ್ರ್ಯ, ದಾರಿದ್ರ್ಯಫಲವಾದ ಸಂಕಟಗಳು ಇವನ್ನು ನಾಶಪಡಿಸಲು ಪುರುಷಪ್ರಯತ್ನದಷ್ಟೇ ದೈವಸಹಾಯವೂ ಬೇಕು. ಇವುಗಳ ನಾಶವಿಲ್ಲದೆ ಜೀವನದಲ್ಲಿ ಸುಖಶಾಂತಿಗಳಿಲ್ಲ ಕರ್ಮಾಚರಣೆಯು ಅದಕ್ಕೆ ಮೊದಲೆ ಇಲ್ಲ. ಮನುಷ್ಯನು ಮನುಷ್ಯನಾಗಿ ಬಾಳಬೇಕಾದರೆ, ಸುಸಂಸ್ಕೃತ ನಾಗಿ ಕರ್ತವ್ಯೋನ್ಮುಖನಾಗಬೇಕಾದರೆ ಅವನಿಗೆ ದಾರಿದ್ರ್ಯ ಮೊದಲನೆ ಪ್ರತಿಬಂಧಕ. ರೋಗಾದಿಗಳು ಎರಡನೆ ಪ್ರತಿಬಂಧಕ. ಆದ್ದರಿಂದಲೇ,

---

1 ಅರಂ ದಾಸೋ ನ ಮೀಳ್ಹುಷೇ ಕರಾಣ್ಯಹಂ ದೇವಾಯ
ಭೂರ್ಣಯೇಽನಾಗಾಃ |
ಅಚೇತಯದಚಿತೋ ದೇವೋ ಅರ್ಯೋ ಗೃತ್ಸಂ ರಾಯೇ
ಕವಿತರೋ ಜುನಾತಿ ||
(೭.೮೬.೭.)

2 ಮಹೋ ಅಗ್ನೇಃ ಸಮಿಧಾನಸ್ಯ ಶರ್ಮಣ್ಯನಾಗಾ ಮಿತ್ರೇ
ವರುಣೇ ಸ್ವಸ್ತಯೇ |
(೧೦.೩೬.೧೨.)

ಅನಾಗಾಸ್ತ್ವೇನ ಹರಿಕೇಶ ಸೂರ್ಯಾಹ್ನಾಹ್ನಾ ನೋ
ವಸ್ಯಸಾವಸ್ಯಸೋದಿ ಹಿ |
(೧೦.೩೭.೯.)

"ಎಲೈ ಅಗ್ನಿಯೇ, ನಮ್ಮ ಹಸಿವನ್ನು ದೂರಮಾಡು. ನಮ್ಮ ಪಾಪವನ್ನು ನಾಶಪಡಿಸು"

"ಎಲೈ ಇಂದ್ರನೆ, ನಮಗೆ ಗೋಧನವನ್ನು ಅನುಗ್ರಹಿಸುವುದರ ಮೂಲಕ ನಮ್ಮ ದಾರಿದ್ರ್ಯದಿಂದ ಉತ್ಪನ್ನವಾದ ದುರ್ಬುದ್ಧಿಯನ್ನೂ ನಮ್ಮ ಹಸಿವನ್ನೂ ದೂರಮಾಡಲು ಸಹಾಯಮಾಡು"

"ಎಲೈ ಸೂರ್ಯನೇ, ಯಾವ ನಿನ್ನ ತೇಜಸ್ಸಿನಿಂದ ಅಂಧಕಾರವನ್ನು ನಾಶಮಾಡಿ ಜಗತ್ತನ್ನು ಪ್ರಕಾಶಗೊಳಿಸುವೆಯೋ ಅದೇ ತೇಜಸ್ಸಿನಿಂದ ನಮ್ಮ ಅನ್ನಾಭಾವವನ್ನೂ ರೋಗಾದಿಗಳನ್ನೂ ನಾಶಮಾಡು"[1] ಎಂಬ ಪ್ರಾರ್ಥನೆಯು ನಿರಂತರವಾಗಿದೆ.

ಪ್ರಾರ್ಥನೆ, ಮತ್ತು ಅದರ ಫಲದ ವಿಷಯದಲ್ಲಿ ಪೂರ್ಣವಾದ ಶ್ರದ್ಧೆಯಿದ್ದರೂ ಪುರುಷಾರ್ಥಸಾಧನೆಗೆ ಅದಕ್ಕಿಂತಲೂ ಮೊದಲನೆಯದಾಗಿ ಪುರುಷಪ್ರಯತ್ನವು ಅತ್ಯವಶ್ಯ. ಸಂಪತ್ಸಮೃದ್ಧಿಯು ಕೇವಲ ಪ್ರಾರ್ಥನೆಯ ಫಲವಾಗಿ ಅಂತರಿಕ್ಷದಿಂದ ಸುರಿಯುವುದಿಲ್ಲ. ಇದು ಪುರುಷನ ಸತತವಾದ ದುಡಿಮೆಯ ಫಲವಲ್ಲದೆ ಬೇರೆಯಿಲ್ಲ, ಎಂಬುದು ಋಕ್ಸಂಹಿತಾಕಾರರಾದ ಋಷಿಗಳ ನಿಶ್ಚಿತವಾದ ನಂಬಿಕೆ.

ಪುರುಷಪ್ರಯತ್ನಪೂರ್ವಕವಾದ ಪುರುಷಾರ್ಥಸಾಧನೆಗೆ ನಿದ್ರೆ ಮತ್ತು ಜಲ್ಪಿ ಇವೆರಡೂ ಶತ್ರುಗಳು. ನಿದ್ರೆಯೆಂದರೆ ಸೋಮಾರಿತನ. ಜಲ್ಪಿಯೆಂದರೆ ಆತ್ಮಪ್ರಶಂಸೆಯೇ ಮುಂತಾದ ದುರಭಿಮಾನದ ಮಾತುಗಳು. ಆದ್ದರಿಂದಲೇ "ನಿದ್ರಾ ಮತ್ತು ಜಲ್ಪಿ ಇವೆರಡೂ ನಮ್ಮನ್ನು ಆವರಿಸದಿರಲಿ, ನಾವು ಅದಕ್ಕೆ ವಶವಾಗದೆ ಇರೋಣ"[2] ಎಂದು ಪ್ರಾರ್ಥಿಸಿದೆ. ಆಲಸ್ಯ

---

1 ಯೇನ ಸೂರ್ಯ ಜ್ಯೋತಿಷಾ ಬಾಧಸೇ ತಮೋ ಜಗಚ್ಚ
ವಿಶ್ವಮುದಿಯರ್ಷಿ ಭಾನುನಾ ||
ತೇನಾಸ್ಮದ್ವಿಶ್ವಾಮನಿರಾಮನಾಹುತಿಮಪಾಮೀವಾಮಪ
ದುಃಷ್ವಪ್ನ್ಯಂ ಸುವ ||
(೧೦.೩೭.೪.)

2 ತ್ರಾತಾರೋ ದೇವಾ ಅಧಿ ವೋಚತಾ ನೋ ಮಾ ನೋ
ನಿದ್ರಾ ಈಶತ ಮೋತ ಜಲ್ಪಿಃ |

ವಿಲ್ಲದೆ ಚಟುವಟಿಕೆಯಿಂದಿರುವ ಕಾರ್ಯತತ್ಪರತೆಗೆ ಅಗ್ನ್ಯಾದಿದೇವತೆಗಳೇ ಆದರ್ಶ.

" ಅಗ್ನಿಯ ರಶ್ಮಿಗಳು ಯಾವಾಗಲೂ ಜಾಗರೂಕವಾಗಿವೆ. ಆಪತ್ತಿನಿಂದ ರಕ್ಷಿಸುವ ಕಾರ್ಯದಲ್ಲಿ ತತ್ಪರವಾಗಿವೆ. ಕರ್ತವ್ಯನಿರ್ವಹಣದಲ್ಲಿ ಕೊಂಚವೂ ಶ್ರಮವನ್ನು ತೋರುವುದಿಲ್ಲ ಇವೆಲ್ಲವೂ ಅಗ್ನಿಯ ಜಾಗರೂಕತೆಯ ಫಲ "[1] ಹೀಗೆಯೇ, ದಶದಿಕ್ಕುಗಳೂ ವರುಣಾದಿ ದೇವತೆಗಳೂ ಅನಿಮಿಷರಾಗಿ ಲೋಕರಕ್ಷಣವನ್ನು ಮಾಡುತ್ತಾರೆ. ಈ ಋಣವನ್ನೆಲ್ಲಿ ಮಾನವನು ತನ್ನ ಶ್ರದ್ಧಾಭಕ್ತಿಯುತವಾದ ಕರ್ಮಗಳಿಂದ ತೀರಿಸಬೇಕು. " ಕರ್ಮರೂಪವಾದ ಶ್ರಮವಿಲ್ಲದೆ ದೇವತೆಗಳ ಸಖ್ಯವಿಲ್ಲ. "[2] ಋಭುಗಳು ಮಾನವರಾದರೂ ತಮ್ಮ ತಪಃಸಾಧನೆಯಿಂದಲೂ ಉತ್ಕಟವಾದ ಕರ್ಮೇಚ್ಛೆಯಿಂದಲೂ ದೇವತೆಗಳ ಸಖ್ಯವನ್ನು ಪಡೆದು ತಾವೂ ದೇವತ್ವವನ್ನು ಹೊಂದಿದರು. ಋಭುಗಳು, ಅಂಗಿರಸ್ಸುಗಳು ಇವರ ಮಾರ್ಗದರ್ಶಿತ್ವದಲ್ಲಿ ಕರ್ಮ ಮಾಡುವುದೇ ಸಕಲ ಸಂಪತ್ಸಾಧಕ. ಆದ್ದರಿಂದಲೇ, " ಸೃಷ್ಟಿಕಾಲದಲ್ಲೇ ಉತ್ಪನ್ನರೂ ಇತರರೂ ಆದ ಯಾವ ನಮ್ಮ ಪೂರ್ವಜರಾದ ಮಾರ್ಗದರ್ಶಿಗಳಾಗಿದ್ದಾರೋ ಅವರಿಗೆಲ್ಲ ನಮಸ್ಕಾರ " ಎಂದು ಕೃತಜ್ಞತೆಯನ್ನರ್ಪಿಸಿದೆ.[3] ಸತ್ಯಾತ್ಮಕನಾದ ಅಗ್ನಿಯನ್ನು ಪ್ರಶಂಸಿಸುತ್ತ ಯಜ್ಞಕರ್ಮವನ್ನು ಲೋಕಕ್ಕೆ ಪ್ರಥಮತಃ ಉಪದೇಶಿಸಿದ ಅಂಗಿರಸ್ಸುಗಳೇ ಈ ಮಾರ್ಗದರ್ಶಿಗಳಲ್ಲಿ ಮೊದ

---

**ವಯಂ ಸೋಮಸ್ಯ ವಿಶ್ವಹ ಪ್ರಿಯಾಸಃ ಸುವೀರಾಸೋ**
**ವಿದಥಮಾ ವದೇಮ ||**

**(೮.೪೮.೧೪.)**

1 **ಅಪ್ನಸ್ವಜಸ್ತರಣಯಸ್ಸುಶೇವಾ ಅತಂದ್ರಾಸೋಽವೃಕಾ ಅಶ್ರಮಿಷ್ಠಾಃ |**
**(೪.೪.೧೨.)**

2 **ಇದಾಹ್ನಃ ಪೀತಿಮುತ ವೋ ಮದಂ ಧುರ್ನ ಋತೇ ಶ್ರಾಂತಸ್ಯ ಸಖ್ಯಾಯ ದೇವಾಃ |**
**(೪.೩೩.೧೧.)**

3 **ಇದಂ ನಮ ಋಷಿಭ್ಯಃ ಪೂರ್ವಜೇಭ್ಯಃ ಪೂರ್ವೇಭ್ಯಃ ಪಥಿಕೃದ್ಭ್ಯಃ |**
**(೧೦.೧೪.೧೫.)**

ಲನೆಯುವರು.[1] ಇದೇ ಮಾರ್ಗವನ್ನನುಸರಿಸಿ ಯಜ್ಞಾದಿಕರ್ಮಗಳಲ್ಲಿ ಯಾರು ನಿರತರೋ ಅವರುಮಾತ್ರ ಸತ್ಸಂಪತ್ತಿಗೆ ಅರ್ಹರು. ಐಹಿಕ ಜೀವನದ ಸುಖಸಂತುಷ್ಟಿಗಳೆಲ್ಲವೂ ಈ ಕರ್ಮಕ್ರಮದ ಫಲ.

ಧನಸಂಪಾದನೆಯು ಅತಿ ಮುಖ್ಯವಾದರೆ ಆ ಧನವನ್ನು ಸಂಪಾದಿಸುವ ಸಾಧನವು ನೀತಿಯುತವಾಗಿರಬೇಕು. ಶುದ್ಧವಾಗಿಯೂ ಮನಸ್ಸಿಗೆ ಶಾಂತಿಯನ್ನು ಕೊಡುವುದಾಗಿಯೂ ಇರಬೇಕು. ಅಧಿಕವಾಗಿ ಧನಸಂಪಾದನೆಯನ್ನು ಮಾಡುವೆನೆಂದು ದ್ಯೂತಾದಿಗಳಿಗೆ ವಶನಾದರೆ ಆ ಪುರುಷನು ಅನೇಕ ದುಃಖಗಳಿಗೀಡಾಗಬೇಕಾಗುತ್ತದೆ. ಧನಸಂಪಾದನೆಗಾಗಿ ಪ್ರಯತ್ನಿಸಿದ ಜೂಜುಗಾರನ ದುಃಸ್ಥಿತಿಯನ್ನು ವರ್ಣಿಸಿ ಋಕ್ಸಂಹಿತೆಯು ಅವನಿಗೆ ತಕ್ಕ ಉಪದೇಶವನ್ನೂ ಕೊಡುತ್ತದೆ. ದ್ಯೂತಗಾರನ ದುಃಸ್ಥಿತಿಯನ್ನು ಅವನ ಬಾಯಲ್ಲೇ ಈ ರೀತಿ ಹೇಳಿಸಿದೆ.

"ದ್ಯೂತಸಾಧನವಾದ ಪಗಡೆದಾಳದ ಆಕರ್ಷಣವು ಬಹಳ ಪ್ರಬಲವಾದುದು. ಅದು ನನ್ನನ್ನು ದ್ಯೂತಕ್ಕೆ ಹುರಿದುಂಬಿಸುತ್ತದೆ.

"ನನ್ನನ್ನು ಅತಿಯಾಗಿ ಪ್ರೀತಿಸುವವಳೂ, ನನ್ನ ತಪ್ಪುಗಳನೆಲ್ಲ ಮರೆಯುವವಳೂ, ಬಹಳ ತಪ್ಪಿತಸ್ಥರಾದರೂ ನನ್ನ ಮನಸ್ಸಿಗೆ ನೋವಾಗಬಹುದೆಂದು ನನ್ನ ದುಷ್ಟ ಸ್ನೇಹಿತರನ್ನೂ ಗೌರವಿಸುವವಳೂ ಆದ ನನ್ನ ಪ್ರಿಯಪತ್ನಿಯನ್ನೂ ನಾನು ತಿರಸ್ಕಾರಮಾಡುವಂತೆ ದಾಳವು ನನ್ನನ್ನು ಆಕರ್ಷಿಸುತ್ತದೆ."[2]

---

1 **ಋತಂ ಶಂಸಂತ ಋಜು ದೀಧ್ಯಾನಾ ದಿವಸ್ಪುತ್ರಾಸೋ**
**ಅಸುರಸ್ಯ ವೀರಾಃ ।**
**ವಿಪ್ರಂ ಪದಮಂಗಿರಸೋ ದಧಾನಾ ಯಜ್ಞಸ್ಯ ಧಾಮ**
**ಪ್ರಥಮಂ ಮನನ್ತ ॥**
(೧೦.೬೭.೨.)

2 **ನ ಮಾ ಮಿಮೇಥ ನ ಜಿಹೀಳ ಏಷಾ ಶಿವಾ ಸಖಿಭ್ಯ**
**ಉತ ಮಹ್ಯಮಾಸೀತ್ ।**
**ಅಕ್ಷಸ್ಯಾಹಮೇಕಪರಸ್ಯ ಹೇತೋರನುವ್ರತಾಮಪ ಜಾಯಾ**
**ಮರೋಧಮ್ ॥**
(೧೦.೩೪.೨.)

"ಇದೇ ವಿದ್ಯೆಯನ್ನೇ ಮುಂದುವರಿಸುವುದರಿಂದ ನನ್ನ ಧರ್ಮ ಪತ್ನಿಯೂ ನನ್ನ ವಿಷಯದಲ್ಲಿ ಜಿಗುಪ್ಸೆ ಹೊಂದುತ್ತಾಳೆ. ನನ್ನ ಅತ್ತೆಯು ನನ್ನಲ್ಲಿ ಜಿಗುಪ್ಸೆಯನ್ನು ತೋರುತ್ತಾಳೆ. ನನಗೆ ಸುಖದಾತರಾರೂ ಇರುವು ದಿಲ್ಲ. ನನಗೆ ಯಾವ ಸೌಖ್ಯವೂ ಇಲ್ಲ. ನನ್ನಂಥ ಜೂಜುಗಾರನನ್ನು ಕಟ್ಟಿ ಕೊಂಡದ್ದರಿಂದ ಪತಿವ್ರತೆಯಾದ ಪತ್ನಿಗೂ ಅನೇಕ ಅವಮಾನವಾಗುವ ಸಂದರ್ಭವೊದಗುತ್ತದೆ. ಆ ಸಂದರ್ಭದಲ್ಲಿ ನನ್ನಂಥ ಜೂಜುಗಾರನ ತಂದೆ ತಾಯಿಗಳೂ ಅಣ್ಣತಮ್ಮಂದಿರೂ ಅವನ ಕೈಬಿಡುತ್ತಾರೆ. ಒಂದೊಂದು ಸಲ ತಾತ್ಕಾಲಿಕವಾದ ಪಶ್ಚಾತ್ತಾಪವುಂಟಾದರೂ ಪುನಃ ದಾಳವು ಖಂಡಿತ ಆಕರ್ಷಿಸುತ್ತದೆ ಎಲ್ಲವನ್ನೂ ಮರೆತು ಜೂಜಿಗೆ ಧುಮುಕಿ ಅಂತಹವನು ಹಾಳಾಗುತ್ತಾನೆ. ಕೇಳುವವರಿಲ್ಲದೆ ಬೀದಿ ಅಲೆಯುತ್ತಾನೆ. ಮಾತಾಪತ್ನಿ ಗಳಿಗೆ ದುಃಖಕಾರಕನಾಗುತ್ತಾನೆ."[1] ಅನಂತರ ತನ್ನ ಅನುಭವವನ್ನು ವರ್ಣಿಸುತ್ತ ಇತರರಿಗೆ ಈ ರೀತಿ ಸಂದೇಶವನ್ನು ಕೊಡುತ್ತಾನೆ.

---

1 ದ್ವೇಷ್ಟಿ ಶ್ವಶ್ರೂರಪ ಜಾಯಾ ರುಣದ್ಧಿ ನ ನಾಥಿತೋ
ವಿನ್ದತೇ ಮರ್ಡಿತಾರಂ |
ಅಶ್ವಸ್ಯೇವ ಜರತೋ ವಸ್ನ್ಯಸ್ಯ ನಾಹಂ ವಿನ್ದಾಮಿ
ಕಿತವಸ್ಯ ಭೋಗಮ್ ||
ಅನ್ಯೇ ಜಾಯಾಂ ಪರಿ ಮೃಶನ್ತ್ಯಸ್ಯ ಯಸ್ಯಾಗೃಧದ್ವೇದನೇ ವಾಜ್ಯಕ್ಷಃ |
ಪಿತಾ ಮಾತಾ ಭ್ರಾತರ ಏನಮಾಹುರ್ನ ಜಾನೀಮೋ
ನಯತಾ ಬದ್ಧಮೇತಂ ||
ಯದಾದೀಧ್ಯೇ ನ ದವಿಷಾಣ್ಯೇಭಿಃ ಪರಾಯದ್ಭ್ಯೋಽವ
ಹೀಯೇ ಸಖಿಭ್ಯಃ |
ನ್ಯುಪ್ತಾಶ್ಚ ಬಭ್ರವೋ ವಾಚಮಕ್ರತಗ್ಂ ಏಮೀದೇಷಾಂ
ನಿಷ್ಕೃತಂ ಜಾರಿಣೀವ ||
ಜಾಯಾ ತಪ್ಯತೇ ಕಿತವಸ್ಯ ಹೀನಾ ಮಾತಾ ಪುತ್ರಸ್ಯ
ಚರತಃ ಕ್ವ ಸ್ವಿತ್ |
ಋಣಾವಾ ಬಿಭ್ಯದ್ಧನಮಿಚ್ಛಮಾನೋಽನ್ಯೇಷಾಮಸ್ತಮುಪ
ನಕ್ತಮೇತಿ ||
(೧೦.೩೪. ೩–೧೦)

"ಎಲೈ ದ್ಯೂತಗಾರನೇ, ನನ್ನ ಉಪದೇಶಕ್ಕೆ ಗಮನಕೊಡು. ಜೂಜಾಡಿಕೆಡಬೇಡ. ಕೃಷಿಯನ್ನುಮಾಡು. ಶ್ರಮಪಟ್ಟು ಕೃಷಿಯಿಂದ ಧನಾರ್ಜನೆಮಾಡು. ಆ ಧನಸಂಪತ್ತು ನಿನಗೆ ಸುಖಸಂತೋಷಗಳನ್ನು ಕೊಡುತ್ತದೆ. ಅದು ಧನಕನಕಾದಿಗಳನ್ನು ತುಂಬಿಕೊಡುತ್ತದೆ. ಗೃಹದಲ್ಲಿ ಪತ್ನಿಯ ಆದರವನ್ನು ಬೆಳೆಸಿ ದಾಂಪತ್ಯಸೌಖ್ಯವನ್ನು ಅಧಿಕಮಾಡುತ್ತದೆ. ಸಕಲ ಸೌಭಾಗ್ಯಗಳೂ ದೊರೆಯುತ್ತವೆ. ಇದೇ ಸವಿತೃವು ನನಗೆ ಉಪದೇಶಿಸಿದ ತತ್ತ್ವ"[1] ಇದೇ ಋಕ್ಸಂಹಿತೆಯ ಉಪದೇಶ.

ಕೇವಲ ಧನವೇ ಪುರುಷನಿಗೆ ಪೂರ್ಣವಾಗಿ ಸುಖಪ್ರದವಾಗಲಾರದು. ಮನುಷ್ಯನಿಗೆ ಮೊದಲು ಬೇಕಾದುದು ಆರೋಗ್ಯ. "ವಾಯುರೂಪದ ಪರಮೇಶ್ವರನು ನಮಗೆ ಆಯುರಾರೋಗ್ಯವನ್ನು ಕೊಡಲಿ. ನಮ್ಮ ಆಯುಸ್ಸನ್ನು ವೃದ್ಧಿಮಾಡಲಿ" ಎಂದು ಶಂಭುವೂ (ಕಲ್ಯಾಣಕಾರಕನು) ಮಯೋಭುವೂ (ಸೌಖ್ಯಕಾರಕ) ಆದ ಈಶ್ವರನನ್ನು ಪ್ರಾರ್ಥಿಸಿದೆ.[2]

ಆದರೆ, ಜೀವನವು ಸುಖದುಃಖಮಿಶ್ರಿತವಾಗಿದೆ. ಜೀವನದಲ್ಲಿ ಕ್ಲೇಶದಾಯಕವಾದ ಸನ್ನಿವೇಶಗಳನೇಕ ಇವೆ. ಅವನ್ನೆಲ್ಲ ಎದುರಿಸಲು ಧೈರ್ಯಸ್ಥೈರ್ಯಾದಿಗಳು ಅತ್ಯವಶ್ಯ. "ಜೀವನವೇ ಒಂದು ಬಂಡೆಗಳಿಂದ ಕೂಡಿದ ನದಿ. ಇಲ್ಲಿ ಅಮಂಗಳಕರವಾದ ಸನ್ನಿವೇಶಗಳನ್ನು ದಾಟಿ ನಮಗೆ ಕಲ್ಯಾಣಾ

---

1 ಯೋ ವಃ ಸೇನಾನೀರ್ಮಹತೋ ಗಣಸ್ಯ ರಾಜಾ ವ್ರಾತಸ್ಯ
ಪ್ರಥಮೋ ಬಭೂವ |
ತಸ್ಮೈ ಕೃಣೋಮಿ ನ ಧನಾ ರುಣಧ್ಮಿ ದಶಾಹಂ ಪ್ರಾಚೀ
ಸ್ತದೃತಂ ವದಾಮಿ ||
ಅಕ್ಷೈರ್ಮಾ ದೀವ್ಯಃ ಕೃಷಿಮಿತ್ಕೃಷಸ್ವ ವಿತ್ತೇ ರಮಸ್ವ
ಬಹು ಮನ್ಯಮಾನಃ |
ತತ್ರ ಗಾವಃ ಕಿತವ ತತ್ರ ಜಾಯಾ ತನ್ಮೇ ವಿ ಚಷ್ಟೇ
ಸವಿತಾಯಮರ್ಯಃ ||
(೧೦.೩೪-೧೨-೧೩)

2 ವಾತ ಆ ವಾತು ಭೇಷಜಂ ಶಂಭು ಮಯೋಭು ನೋ ಹೃದೇ |
ಪ್ರ ಣ ಆಯೂಂಷಿ ತಾರಿಷತ್ |
(೧೦.೧೮೬.೧.)

ವಹವಾದ ಅಂಶಗಳನ್ನು ಸಂಗ್ರಹಿಸುತ್ತ ಎದೆಗುಂದದೆ ಮುನ್ನುಗ್ಗಬೇಕು."[1] ಈ ರೀತಿ ಕ್ಲೇಶಗಳನ್ನು ದಾಟಿ ಮುನ್ನುಗ್ಗಬೇಕಾದರೆ ಜಯಪ್ರದವಾದ ಪ್ರಜ್ಞಾನವು ಬೆಳೆಯಬೇಕು. (ಜೈತ್ರಂ ಕ್ರತುಂ ದದಾತನ)[2] ಧೈರ್ಯದಿಂದಲೂ ವಿವೇಕದಿಂದಲೂ ಮುನ್ನುಗ್ಗಿದರೆ, ಲೋಕೇಶ್ವರನಾದ ಇಂದ್ರನ ಸಹಾಯವೂ ಲಭಿಸುತ್ತದೆ.

"ಎಲೈ ವೀರರೇ, ಮುನ್ನುಗ್ಗಿರಿ. ಜಯವನ್ನು ಪಡೆಯಿರಿ. ಇಂದ್ರನು ನಿಮ್ಮ ರಕ್ಷಕನಾಗಿರುತ್ತಾನೆ. ನಿಮಗೆ ಯಾವ ನೋವೂ ಉಂಟಾಗದಂತೆ ರಕ್ಷಿಸುತ್ತಾನೆ." ಎಂಬ ಶ್ರದ್ಧೆಯು ಋಕ್ಸಂಹಿತೆಯಲ್ಲಿ ಮೊದಲಿಂದ ಕೊನೆಯ ವರೆಗೂ ಕಾಣುತ್ತದೆ.[3] ಎಂದರೆ, ಬಾಹುಬಲವನ್ನೂ ತೋರಿ ಧೈರ್ಯಸ್ಥೈರ್ಯಗಳಿಂದ ಮುನ್ನುಗ್ಗುವವರಿಗೆ ಮಾತ್ರ ಜಯವೆಂಬುದು ಸ್ಪಷ್ಟ. (ಉಗ್ರಾ ವಃ ಸಂತು ಬಾಹವಃ),

"ಸುವೀರ್ಯಸ್ಯ ಪತಯಃ ಸ್ಯಾಮ" (೧೦.೧೩೧.೭);

"ನೃಭಿರ್ನೃವಂತಃಸ್ಯಾಮ" (೭.೪೧.೩)

"ಮಾ ಭೇಮ ಮಾ ಶ್ರಮಿಷ್ಮೋಗ್ರಸ್ಯ ಸಖ್ಯೇ ತವ. (೮.೪.೭).

ಇತ್ಯಾದಿ ವಾಕ್ಯಗಳು ವೀರಜೀವನದ ಆಕಾಂಕ್ಷೆಯನ್ನು ತಿಳಿಸುತ್ತವೆ. "ಸಕಲ ಶಕ್ತಿಗಳನ್ನು ಜಯಿಸುವವನೂ, ಅಜೇಯನೂ ಆದ ಇಂದ್ರನೇ. ನಿನ್ನ ರಕ್ಷಣೆಯಲ್ಲಿರುವ ನಮಗೆ ಯಾವ ಭೀತಿಯೂ ಇಲ್ಲ" ಎಂಬ ನಂಬಿಕೆಯನ್ನಿಟ್ಟು ನಿರ್ಭೀತಿಯಿಂದಲೂ ಸ್ವಾತಂತ್ರ್ಯಮೂಲವಾದ ಧನಸಂಪತ್ತುಗಳಿಂದಲೂ ಕೂಡಿದ ಆದರ್ಶಜೀವನವೇ ಋಕ್ಸಂಹಿತಾಕಾರರ ಆದರ್ಶ ಜೀವನ.

---

1 ಅಶ್ಮನ್ವತೀ ರೀಯತೇ ಸಂರಭಧ್ವಮುತ್ತಿಷ್ಠತ ಪ್ರ ತರತಾ ಸಖಾಯಃ ।
ಅತ್ರಾ ಜಹಾಮ ಯೇ ಅಸನ್ನಶೇವಾಃ ಶಿವಾನ್ವಯ
ಮುತ್ತರೇಮಾಭಿ ವಾಜಾನ್ ॥
(೧೦.೫೩.೮.)

2 ಋ. ಸಂ. ೧೦.೩೬.೧೦.

3 ಪ್ರೇತಾ ಜಯತಾ ನರ ಇಂದ್ರೋ ವಃ ಶರ್ಮ ಯಚ್ಛತು ।
ಉಗ್ರಾ ವಃ ಸಂತು ಬಾಹವೋಽನಾಧೃಷ್ಯಾ ಯಥಾಸಥ ॥
(೧೦.೧೦೩.೧೩.)

ಸತ್ಸಂಪತ್ತಾಗಲಿ ಅಥವಾ ಸತ್ಸಂತತಿಯಾಗಲಿ ಕೇವಲ ಐಹಿಕ ಮತ್ತು ವೈಯಕ್ತಿಕವಾದ ಭೋಗಕ್ಕೆಮಾತ್ರ ಸಾಧಕವಾಗಿರದೆ ಜೀವನದ ಪರಮ ಪುರುಷಾರ್ಥವನ್ನೂ ಸಾಧಿಸುವ ಸಾಧನವಾಗಿರಬೇಕು. ವಿಶ್ವಯಜ್ಞದ ಮರ್ಮವನ್ನರಿತು ಅದರ ಪ್ರತಿಬಿಂಬವಾದ ವೈಯಕ್ತಿಕ ಯಜ್ಞಾಚರಣೆಯಿಂದ ಪರಮಪುರುಷಾರ್ಥವು ಸಿದ್ಧಿಸುತ್ತದೆ.

ವಿಶ್ವಯಜ್ಞವು ವಿಶ್ವಕರ್ಮನಿಂದ ಪ್ರೇರಿತವಾದುದು. ಅದು ನಿರಂತರವಾಗಿ ನಡೆಯುತ್ತಲೇ ಇರುತ್ತದೆ. ಇದನ್ನೇ ಬ್ರಹ್ಮಚಕ್ರವೆಂದು ಭಗವದ್ಗೀತೆಯಲ್ಲಿ ಹೇಳಿದೆ. ಪುರುಷನು ಈ ಬ್ರಹ್ಮಚಕ್ರದ ಹಾದಿಯಲ್ಲಿಯೇ ನಡೆಯಬೇಕು. ಪರಮಪುರುಷನು ತಾನು ನಿತ್ಯತೃಪ್ತನಾದರೂ ಲೋಕಸಂಗ್ರಹಕ್ಕಾಗಿ ಹೇಗೆ ಸರ್ವದಾ ಕರ್ಮಾಚರಣೆಯಲ್ಲಿ ತೊಡಗಿರುವನೋ ಅದರಂತೆ ಮಾನವನೂ ಲೋಕಸಂಗ್ರಹಾರ್ಥವಾಗಿ ಸರ್ವದಾ ಕರ್ಮಾಚರಣೆಯಲ್ಲಿ ತೊಡಗಿರಬೇಕು. ಜೀವನದಲ್ಲಿ ಸ್ವಾರ್ಥದಂತೆಯೇ, ಸ್ವಾರ್ಥಕ್ಕಿಂತಲೂ ಮೀರಿದ ಘನವಾದ ಧ್ಯೇಯವಿರುತ್ತದೆ. ಲೋಕಸಂಗ್ರಹದಲ್ಲಿ ನಿರತವಾಗದ ಜೀವನವು ಪಾಪಮಯವಾದುದು.[1] ತ್ಯಾಗವಿಲ್ಲದ ಭೋಗವು ಕ್ಷಯಕ್ಕೆ ಹೇತುವಾಗುತ್ತದೆ. ಲೋಕಕಲ್ಯಾಣಕ್ಕಾಗಿ ತ್ಯಾಗಬುದ್ಧಿಯಿಂದ ದಾನ ಮಾಡಿದವನ ಸಂಪತ್ತು ನಾಶವಾಗುವುದಿಲ್ಲ. ದಾನಮಾಡದವನ ಸಂಪತ್ತು ಉಳಿಯುವುದಿಲ್ಲ, ಅವನಿಗೆ ಸೌಖ್ಯವೂ ಇಲ್ಲ.[2]

ದಾನವು ಎರಡುವಿಧ ಮತ್ತು ದಾನಕ್ಕೆ ಪಾತ್ರರೂ ಎರಡು ವಿಧ ಅರ್ಯಮಾದಿ ದೇವತೆಗಳಿಗೆ ಅರ್ಪಿಸತಕ್ಕ ಯಜ್ಞರೂಪದ ದಾನ ಮತ್ತು ಹಸಿದ ಮಾನವವರ್ಗಕ್ಕೆ ನೀಡುವ ಅನ್ನರೂಪವಾದ ದಾನ. ಅನ್ನಸಂಪತ್ತನ್ನು ಹೊಂದಿರುವವನು ಈ ಎರಡು ವಿಧವಾದ ದಾನಗಳನ್ನೂ ಮಾಡದೆ

---

1 ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ |
ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ||

(ಭ. ಗೀ- ೩.೧೬,)

2 ಉತೋ ರಯಿಃ ಪೃಣತೋ ನೋಪ ದಸ್ಯತ್ಯುತಾಪೃಣನ್
ಮರ್ಡಿತಾರಂ ನ ವಿಂದತೇ |

(೧೦-೧೧೭.೧.)

ತನ್ನ ಸ್ವಸೌಖ್ಯದಲ್ಲಿಯೇ ಮಗ್ನನಾದರೆ ಅವನು ಇದ್ದರೂ ಸತ್ತಂತೆಯೇ. ಆ ಜೀವನವು ಕೇವಲ ಪಾಪಮಯವಾದ ಜೀವನ.[1] ಕೇವಲ ತನ್ನ ಭೋಗಕ್ಕಾಗಿ ಮಾತ್ರ ಪ್ರಯತ್ನಪಡುವವನು ಕಳ್ಳನೇ ಸರಿ.

ವೈಯಕ್ತಿಕ ಪೌಷ್ಕಲ್ಯವು ಸಂಸಾರ ಸೌಖ್ಯಕ್ಕೆ ಸಾಧಕವಾಗಬೇಕು. ಉತ್ತಮವಾದ ದಾಂಪತ್ಯಜೀವನ ಮತ್ತು ಸತ್ಕರ್ಮನಿರತರಾದ ವೀರಪುತ್ರರು ಇವೇ ಈ ಋಷಿಗಳ ಐಹಿಕಜೀವನದ ಉತ್ತಮಧ್ಯೇಯ. ಪರಿಶುದ್ಧವಾದದೂ ಮಂಗಳಾತ್ಮಕವೂ ಸುಖಶಾಂತಿಗಳ ನೆಲೆವೀಡೂ ಆದ ಆದರ್ಶ ದಾಂಪತ್ಯಜೀವನದ ವರ್ಣನವು ಋಕ್ಸಂಹಿತೆಯಲ್ಲಿರುವಂತೆ ಇನ್ನೆಲ್ಲೂ ಕಾಣುವುದಿಲ್ಲ

ಸೂರ್ಯಾ ಮತ್ತು ಪೂಷದೇವನ ದಾಂಪತ್ಯವು ಐಹಿಕದಾಂಪತ್ಯ ಜೀವನಕ್ಕೆ ಆದಿಯಿಂದಲೂ ಆದರ್ಶವಾಗಿದೆ. ಪರಸ್ಪರಪ್ರೇಮವೇ, ದಾಂಪತ್ಯ ಜೀವನಕ್ಕೆ ಪ್ರಥಮ ಸೋಪಾನ. "ಯಾವ ಪತಿಯನ್ನು ಪಡೆಯಬೇಕೆಂದು ಸೂರ್ಯೆಯು ಇಚ್ಛಿಸಿದಳೊ ಅಂಥ ಪತಿಗೇ ಸವಿತೃವು ಅವಳನ್ನು ಒಪ್ಪಿಸಿದನು." ಎಂಬ ವಾಕ್ಯವು ಪತಿಪತ್ನಿಯರಿಗೆ ಮೊದಲು ಬೇಕಾದುದು ಪರಸ್ಪರಪ್ರೇಮ ವೆಂಬುದನ್ನು ತಿಳಿಸುತ್ತದೆ ಈ ಪ್ರೇಮವು ಕೇವಲ ದೇಹಸೌಂದರ್ಯವನ್ನೇ ಅವಲಂಬಿಸಬಾರದು. ಅದನ್ನು ಮೀರಿ ಇಬ್ಬರ ಹೃದಯವೂ ಒಂದಾಗ ಬೇಕು. "ಮಾತರಿಶ್ವಾದಿ ಸಕಲ ದೇವತೆಗಳೂ ನಮ್ಮಿಬ್ಬರ ಹೃದಯವು

---

1 "ಮೋಘಮನ್ನಂ ವಿಂದತೇ ಅಪ್ರಚೇತಾಃ ಸತ್ಯಂ ಬ್ರವೀಮಿ
ವಧ ಇತ್ಸ ತಸ್ಯ |
ನಾರ್ಯಮಣಂ ಪುಷ್ಯತಿ ನೋ ಸಖಾಯಂ ಕೇವಲಾಘೋ
ಭವತಿ ಕೇವಲಾದೀ ||

(೧೦.೧೧೭.೬.)

ಇಷ್ಟಾನ್ ಭೋಗಾನ್ ಹಿ ವೋ ದೇವಾ ದಾಸ್ಯಂತೇ ಯಜ್ಞಭಾವಿತಾಃ
ತೈರ್ದತ್ತಾನ ಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ ||
ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ |
ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್ ||

(ಭ. ಗೀ. ೩. ೧೨–೧೩.)

ಒಂದಾಗಿ ಕಲೆಯುವಂತೆ ಅನುಗ್ರಹಿಸಲಿ"[1] ಎಂಬ ಪ್ರಾರ್ಥನೆಯೂ, "ನಾನು ಸಾಮ, ನೀನು ಋಕ್; ನಾನು ದ್ಯುಲೋಕ, ನೀನು ಪೃಥ್ವೀ" ಇತ್ಯಾದಿ ವಾಕ್ಯಗಳೂ ಅವರವರ ಅನುಕೂಲ ಸಂಬಂಧವನ್ನು ವಿವರಿಸುತ್ತವೆ.

ಪಾರ್ಥಿವ ಜೀವವಿರುವ ವರೆಗೆ ಪತಿಪತ್ನಿಯರು ಪರಸ್ಪರ ಸಂತೋಷ ದಾಯಕರು ಪತಿಗೃಹಕ್ಕೆ ಪತ್ನಿಯು ರಾಣಿ. ಪತಿಗೃಹಕ್ಕೆ ರಾಣಿಯಾದ ಪತ್ನಿಯ ಪ್ರಭುತ್ವದಲ್ಲಿ ಉಳಿದವರಿರಬೇಕು. "ಪತ್ನಿಯೇ ಗೃಹ"[2]. ಪತ್ನಿಯಿಲ್ಲದ ಗೃಹವು ಶೂನ್ಯ. ಸಂತೋಷದಾಯಕಳಾದ ಪತ್ನಿಯೊಡಗೂಡಿ ಅವಳಿಂದ ಯಾವಾಗಲೂ ವಿರಹವಿಲ್ಲದೆ ಪುತ್ರಪೌತ್ರಾದಿಗಳ ಜೊತೆಯಲ್ಲಿ ದೀರ್ಘಕಾಲ ಸಂತೋಷವನ್ನನುಭವಿಸುತ್ತ ಜೀವಿಸುವುದಕ್ಕಿಂತ ಅಧಿಕವಾದ ಸೌಖ್ಯವು ಬೇರಿಲ್ಲ.[3] ಪತಿಗೃಹಕ್ಕೆ ಸಕಲ ಸೌಭಾಗ್ಯಗಳನ್ನೂ ತರತಕ್ಕವಳೇ ಪತ್ನಿ. ಇವಳೇ ಸಕಲ ಸೌಖ್ಯಕ್ಕೂ ಕಾರಣಳು. "ನನ್ನ ಸೌಭಾಗ್ಯಕ್ಕಾಗಿ ನಿನ್ನ ಕೈಯನ್ನು ಹಿಡಿಯುತ್ತೇನೆ, ನಿನ್ನ ಕೈಹಿಡಿಯುವುದು ನನ್ನ ಭಾಗ್ಯ. ಸುಮಂಗಲಿಯಾದ ನೀನು ನನ್ನ ಗೃಹವನ್ನು ಪ್ರವೇಶಿಸು"[4]

---

1 ಸಮಂಜನ್ತು ವಿಶ್ವೇ ದೇವಾಃ ಸಮಾಪೋ ಹೃದಯಾನಿ ನೌ ।
ಸಂ ಮಾತರಿಶ್ವಾ ಸಂ ಧಾತಾ ಸಮು ದೇಷ್ಟ್ರೀ ದಧಾತು ನೌ ॥
(೧೦.೮೫.೪೭.)

2 ಜಾಯೇದಸ್ತಂ ಮಘವನ್ತ್ಸೇದು ಯೋನಿಸ್ತದಿತ್ತ್ವಾ ಯುಕ್ತಾ
ಹರಯೋ ವಹನ್ತು ।
(೩.೫೩.೪)

3 ಸುಮಂಗಲೀರಿಯಂ ವಧೂರಿಮಾಂ ಸಮೇತ ಪಶ್ಯತ ।
ಸೌಭಾಗ್ಯಮಸ್ಯೈ ದತ್ತ್ವಾಯಾಥಾಸ್ತಂ ವಿ ಪರೇತನ ।
(೧೦.೮೫.೩೩.)

4 ಗೃಹಾನ್ ಗಚ್ಛ ಗೃಹಪತ್ನೀ ಯಥಾಸೋ ವಶಿನೀ ತ್ವಂ
ವಿದಥಮಾ ವದಾಸಿ ।
(೧೦.೮೫.೨೬.)

ಗೃಭ್ಣಾಮಿ ತೇ ಸೌಭಗತ್ವಾಯ ಹಸ್ತಂ ಮಯಾ ಪತ್ಯಾ
ಜರದಷ್ಟಿರ್ಯಥಾಸಃ ।
(೧೦.೮೫.೩೬.)

ಎಂದು ಗೃಹಕ್ಕೆ ಅವಳನ್ನು ಕರೆದುಕೊಂಡು ಬಂದಾಗಿನಿಂದ ಪತಿಗೆ ಆ ಗೃಹವೇ ಸ್ವರ್ಗ.

ಜೀವನದ ಸಕಲ ಸೌಭಾಗ್ಯಗಳನ್ನು ಅನುಭವಿಸುವುದೇ ದಾಂಪತ್ಯ ಜೀವನದ ಗುರಿ. ಆದರೆ, ಅದು ಕೇವಲ ಭೋಗಸಂತೃಪ್ತಿಯಲ್ಲಿ ಪರ್ಯವಸಾನವನ್ನು ಹೊಂದಬಾರದೆಂದು ಋಕ್ಸಂಹಿತೆಯು ಎಚ್ಚರಿಸುತ್ತದೆ. ಅನ್ನ ಸಂಪತ್ತು, ಅಲಂಕಾರ ಸಂಪತ್ತು, ಪುತ್ರಪೌತ್ರಾದಿ ಸಂಪತ್ತು, ಧನಕನಕಾದಿ ಸಂಪತ್ತು ಈ ಸಕಲ ಸುಖಸಾಧನಗಳನ್ನೂ ಹೊಂದಿ ಸುಖವನ್ನು ಅನುಭವಿಸುವ ದಂಪತಿಗಳಿಗೆ ಇವನ್ನು ಸದ್ವಿನಿಯೋಗಪಡಿಸುವ ಕರ್ತವ್ಯವೂ ವಿಹಿತವಾಗಿದೆ. ವಿಶ್ವವೆಲ್ಲವೂ ಯಜ್ಞಮಯವಾಗಿರುವಾಗ ಇದೇ ವಿಶ್ವನಿಯಮವನ್ನನುಸರಿಸುವ ವೈಯಕ್ತಿಕ ಜೀವನವೂ ಯಜ್ಞಕರ್ಮಾಚರಣೆಯಲ್ಲಿ ನಿರತವಾಗಿರಬೇಕು. ತಮ್ಮ ಸಂಪತ್ತನ್ನು ಯಜ್ಞಕರ್ಮಕ್ಕಾಗಿ ವಿನಿಯೋಗಿಸಿದರೆ ಅದಕ್ಕೆ ತಕ್ಕ ಫಲವೂ ಇದ್ದೇ ಇದೆ.[1] ದಾಂಪತ್ಯಸುಖವನ್ನು ಅನುಭವಿಸುತ್ತ ಪತ್ನಿಯೊಡಗೂಡಿ ಯಜ್ಞಕರ್ಮವನ್ನು ವಿಧಿವತ್ತಾಗಿ ಆಚರಿಸುವ ಪುರುಷನಿಗೆ ತತ್ಫಲವಾಗಿ ಪುತ್ರಪೌತ್ರಾದಿ ಸಂಪತ್ತು ಇನ್ನೂ ವೃದ್ಧಿಯಾಗುತ್ತದೆ.

" ಎಲೈ ದೇವತೆಗಳೇ, ಪರಿಶುದ್ಧವಾದ ಮನಸ್ಸಿನಿಂದ ಯಜ್ಞಾಹುತಿಗಳನ್ನು ಅರ್ಪಿಸುವ ಈ ದಂಪತಿಗಳ ಗೃಹದಲ್ಲಿ ಯಜ್ಞಸಾಮಗ್ರಿಗಳು ವೃದ್ಧಿಯಾಗಲಿ, ಅವರಿಗೆ ಯಾವಾಗಲೂ ಅನ್ನದ ಅಭಾವವು ಇಲ್ಲದಿರಲಿ. "

" ಈ ದಂಪತಿಗಳಿಗೆ ಪುತ್ರಪೌತ್ರಾದಿ ಸಂಪತ್ತು ಬೆಳೆಯಲಿ, ಇವರು ಉತ್ತಮವಾದ ಆಭರಣಗಳಿಂದ ತಮ್ಮ ದೇಹಗಳನ್ನು ಅಲಂಕರಿಸಿಕೊಂಡು ದೀರ್ಘಾಯುಗಳಾಗಿ ಸುಖವಾಗಿ ಬಾಳಲಿ, ಇವರ ಸಂತಾನವು ನಿರಂತರವಾಗಿ ಬೆಳೆಯಲಿ "[2] ಎಂದು ಯಜ್ಞಕರ್ಮಕ್ಕೂ ದಾಂಪತ್ಯಸೌಖ್ಯಕ್ಕೂ ಇರುವ ಸಂಬಂಧವನ್ನು ತಿಳಿಸಿದೆ.

---

1 ಕರ್ಮಾಚರಣೆಯು ಕರ್ತವ್ಯದೃಷ್ಟಿಯಿಂದ. ಆದರೆ ಕರ್ಮಕ್ಕೆ ತಕ್ಕ ಫಲ ಇದ್ದೇ ಇದೆ. ಕರ್ಮಕ್ಕೂ ತತ್ಫಲಕ್ಕೂ ಇರುವ ಸಂಬಂಧವನ್ನು Do ut des policy ಎನ್ನಬಾರದು. ಇದು ವ್ಯಾಪಾರ ಸಂಬಂಧವಲ್ಲ.

2 ಯಾ ದಂಪತೀ ಸಮನಸಾ ಸುನುತ ಆ ಚ ಧಾವತಃ ।
ದೇವಾಸೋ ನಿತ್ಯಯಾಶಿರಾ ॥

ನಿರಂತರವಾದ ಸಂತತಿಯೇ ದಾಂಪತ್ಯಜೀವನದ ಚರಮಧ್ಯೇಯ. ಆ ಪುತ್ರಸಂತಾನದ ಲಕ್ಷಣವೇನು ಅದು ಹೇಗಿರಬೇಕು ಎಂಬುದೂ ಆ ಧ್ಯೇಯಗಳಿಗೇ ಸೇರಿದೆ. "ಹವಿಸ್ಸನ್ನರ್ಪಿಸುವ ಯಜಮಾನನಿಗೆ ಲೌಕಿಕವಾದ ಕೆಲಸಗಳಲ್ಲಿ ಕುಶಲನೂ, ಗೃಹಕೃತ್ಯಗಳಲ್ಲಿ ನಿಪುಣನೂ, ದರ್ಶಪೂರ್ಣಮಾಸಾದಿ ಯಜ್ಞಪರನೂ, ಸಕಲ ಶಾಸ್ತ್ರಗಳ ಜ್ಞಾನದಿಂದ ವಿದ್ವಾಂಸರ ಸಭೆಗೆ ಭೂಷಣನೂ ಮತ್ತು ತಂದೆಯ ಹೆಸರನ್ನು ಪ್ರಸಿದ್ಧಪಡಿಸಿ ತಂದೆಗೆ ಗೌರವವನ್ನು ತರುವವನೂ ಆದ ಯೋಗ್ಯಪುತ್ರನು ಲಭಿಸುತ್ತಾನೆ" ಎಂಬ ಈ ವಿವರಣೆಯಲ್ಲಿ,[1] ಕರ್ಮಣ್ಯ, ಸಾದನ್ಯ, ವಿದಥ್ಯ, ಸಭೇಯ, ಪಿತೃಶ್ರವಣ ಇತ್ಯಾದಿ ವಿಶೇಷಣಗಳು ಸತ್ಪುತ್ರನ ಲಕ್ಷಣವನ್ನು ತಿಳಿಸುತ್ತವೆ.

೨

ಹೀಗೆ, ಸತ್ಕರ್ಮಕ್ಕೆ ಫಲವಾದ ಧನಕನಕಾದಿ ಸಂಪತ್ತು, ಉತ್ತಮವಾದ ದಾಂಪತ್ಯ, ಸತ್ಪುತ್ರಸಂತಾನ ಇತ್ಯಾದಿ ಸಕಲ ಭೋಗಭಾಗ್ಯಗಳೊಡನೆಯೂ ಕೂಡಿ ದೀರ್ಘಾಯುವಾಗಿರಬೇಕೆಂಬುದೇ ಪುರುಷನ ಆಶಯ. ಆದರೆ, ಇಂಥ ದೀರ್ಘಾಯುಸ್ಸು ಕೇವಲ ಐಹಿಕಸುಖಭೋಗಗಳಲ್ಲಿಯೇ ಮಗ್ನವಾಗದೆ, ವಿಶ್ವಸತ್ಯಸಾಕ್ಷಾತ್ಕಾರ ಮತ್ತು ವಿಶ್ವಸೌಂದರ್ಯಾನುಭವ

ಪ್ರತಿ ಪ್ರಾಶವ್ಯಾನ್ ಇತಃ ಸಮ್ಯಞ್ಚಾ ಬರ್ಹಿರಾಶಾತೇ |
ನ ತಾ ವಾಜೇಷು ವಾಯತಃ |
ಪುತ್ರಿಣಾ ತಾ ಕುಮಾರಿಣಾ ವಿಶ್ವಮಾಯುರ್ವ್ಯಶ್ನುತಃ |
ಉಭಾ ಹಿರಣ್ಯಪೇಶಸಾ ||
(ಅ.೩೧. ೫—೯)

1 ಸೋಮೋ ಧೇನುಂ ಸೋಮೋ ಅರ್ವಂತಮಾಶುಂ
ಸೋಮೋ ವೀರಂ ಕರ್ಮಣ್ಯಂ ದದಾತಿ |
ಸಾದನ್ಯಂ ವಿದಥ್ಯಂ ಸಭೇಯಂ ಪಿತೃಶ್ರವಣಂ ಯೋ ದದಾಶದಸ್ಮೈ ||
(೧.೯೧.೨೦.)
ಯತೋ ವೀರಃ ಕರ್ಮಣ್ಯಃ ಸುದಕ್ಷೋ ಯುಕ್ತಗ್ರಾವಾ
ಜಾಯತೇ ದೇವಕಾಮಃ |
(೩.೪.೯.)

ಇವನ್ನು ಹೊಂದುವ ಸತತವಾದ ಪ್ರಯತ್ನವನ್ನು ಮಾಡಬೇಕು. ಇದೇ ಜೀವನದ ಪರಮಧ್ಯೇಯ ಎಂಬ ಪ್ರತ್ಯಯವು ಋಕ್ಸಂಹಿತೆಯಲ್ಲಿರುವ ಮುಖ್ಯವಾದ ವಿಷಯ. ಈ ಆಧ್ಯಾತ್ಮ ಸಂಪತ್ಸಾಧನೆಯೇ ಪರಮ ಪುರುಷಾರ್ಥ.

" ವಿಶ್ವಾಹಾ ತ್ವಾ ಸುಮನಸಃ ಸುಚಕ್ಷಸಃ ಪ್ರಜಾವಂತೋಽ
ನಮೀವಾ ಅನಾಗಸಃ |
ಉದ್ಯಂತಂ ತ್ವಾ ಮಿತ್ರಮಹೋ ದಿವೇ ದಿವೇ ಜ್ಯೋಗ್ಜೀವಾಃ
ಪ್ರತಿ ಪಶ್ಯೇಮ ಸೂರ್ಯ ||
(೧೦.೩೭.೭.)

" ಎಲೈ ಸೂರ್ಯನೇ, ಪ್ರೀತಿಯುತವಾದ ಮನಸ್ಸುಳ್ಳವರೂ, ಉತ್ತಮವಾದ ದರ್ಶನ ಸಾಮರ್ಥ್ಯವುಳ್ಳವರೂ, ಪುತ್ರಾದಿ ಸಂಪದ್ಯುಕ್ತರೂ, ರೋಗ ರಹಿತರೂ, ಪಾಪರಹಿತರೂ ಆದ ನಾವು ನಿನ್ನನ್ನು ಚಿರಕಾಲ ನೋಡುತ್ತ ಪೂಜಿಸುವಂತೆ ನಮಗೆ ದೀರ್ಘಾಯುಸ್ಸನ್ನು ಕೊಡು, ಎಂಬ ಈ ಪ್ರಾರ್ಥನೆಯಲ್ಲಿ, ಪರಿಷ್ಕೃತವಾದ ಜೀವನವೆಂದರೆ ಕೇವಲ ಆರ್ಥಿಕ ಅಥವಾ ದೈಹಿಕವಾದ ಪೌಷ್ಕಲ್ಯ ಮಾತ್ರವಲ್ಲ. ಈಶ್ವರನ ದಿವ್ಯತ್ವವನ್ನು ಪ್ರಶಂಸಿಸುತ್ತ ಸುಂದರವಾದ ಅವನ ಸೂರ್ಯರೂಪದ ಪ್ರತಿಬಿಂಬವನ್ನು ನೋಡುತ್ತ ಧ್ಯಾನ ರೂಪದಲ್ಲಿ ತದಂತರ್ಗತವಾದ ದಿವ್ಯಮೂರ್ತಿಯನ್ನು ಪೂಜಿಸುತ್ತ ಇರುವ ಜೀವನವೆಂದರ್ಥ. ಇದೇ ಆಧ್ಯಾತ್ಮಜೀವನ.

ದೀರ್ಘವಾದ ಆಯುಸ್ಸಿಗಾಗಿ ಯಾವ ದೇವತೆಯನ್ನು ಪ್ರಾರ್ಥಿಸಿದರೂ ಉದಯಿಸುತ್ತಿರುವ ಆದಿತ್ಯದರ್ಶನವೇ ದೀರ್ಘಾಯುಸ್ಸಿನ ಉದ್ದಿಶ್ಯ ಸತ್ಯಸೌಂದರ್ಯಗಳೆರಡನ್ನೂ ಪ್ರತಿಬಿಂಬಿಸುವ ಆದಿತ್ಯಬಿಂಬದ ದರ್ಶನಕ್ಕಿಂತಲೂ ಉತ್ತಮವಾದ ಧ್ಯೇಯವಿನ್ನಾವುದೂ ಇಲ್ಲ. ಮಹತ್ತಾದ ತೇಜಸ್ಸುಳ್ಳವನೂ ಜಗತ್ತಿಗೆಲ್ಲ ಸುಖಕಾರಕನೂ ಅಂತರಿಕ್ಷದಲ್ಲಿ ಪ್ರಕಾಶಿಸುತ್ತಿರುವವನೂ ಆದ ಆದಿತ್ಯನನ್ನು ನೋಡಿ ಚಿರಕಾಲ ಆನಂದಿಸುವ ಭಾಗ್ಯಕ್ಕಾಗಿ ಪದೇ ಪದೇ ಪ್ರಾರ್ಥನೆಯಿರುತ್ತದೆ.[1]

---

1 **ಮಹಿ ಜ್ಯೋತಿರ್ಬಿಭ್ರತಂ ತ್ವಾ ವಿಚಕ್ಷಣ ಭಾಸ್ವಂತಂ**
**ಚಕ್ಷುಷೇ ಚಕ್ಷುಷೇ ಮಯಃ |**

ಆದಿತ್ಯದರ್ಶನವು ಎರಡು ವಿಧ. ವ್ಯವಹಾರ ಜಗತ್ತಿನಲ್ಲಿ ವೈವಿಧ್ಯ ವನ್ನು ಹೊಂದುವ ಈಶ್ವರನ ನಾನಾ ಪ್ರಕಾರಗಳ ದರ್ಶನ ಮತ್ತು ವೈವಿಧ್ಯ ದಲ್ಲಿ ಐಕ್ಯವನ್ನು ತೋರುವ ಸಾಮರಸ್ಯದರ್ಶನ.

" ಚಕ್ಷುರ್ನೋ ಧೇಹಿ ಚಕ್ಷುಷೇ ಚಕ್ಷುರ್ವಿಖ್ಯೈ ತನೂಭ್ಯಃ ।
ಸಂ ಚೇದಂ ವಿ ಚ ಪಶ್ಯೇಮ ॥

(ಋ. ಸಂ. ೧೦.೧೫೮.೪.)

ಎಲೈ ಸೂರ್ಯನೇ, ಜಗತ್ತಿಗೆ ಮೂಲವಾದ ಏಕತತ್ತ್ವದ ಸಮ್ಯಗ್ಜ್ಞಾನ ವನ್ನೂ ಜಗತ್ತಿನ ವಿಶೇಷಜ್ಞಾನವನ್ನೂ ಪಡೆಯಲು ನಮ್ಮ ಇಂದ್ರಿಯ ಗಳನ್ನು ಶಕ್ತಿಯುತವಾಗಿಯೂ ತೇಜೋಯುತವಾಗಿಯೂ ಮಾಡು ಎಂದು ಅನೇಕ ಕಡೆ ಆದಿತ್ಯನಿಗೆ ಮೊರೆಯಿರುತ್ತದೆ.

ಆದಿತ್ಯನನ್ನೇ ಒಂದು ವೃಕ್ಷಕ್ಕೆ ಹೋಲಿಸಿದೆ. ಈ ವೃಕ್ಷದಲ್ಲಿ ರಶ್ಮಿಗಳು ರಾತ್ರಿಯ ಕಾಲದಲ್ಲಿ ಪ್ರವೇಶಿಸಿ ಪುನಃ ಉದಯಕಾಲದಲ್ಲಿ ಪ್ರಸರಿಸಿ ಲೋಕ ಗಳಲ್ಲೆಲ್ಲ ಅವನ ಪ್ರಕಾಶವನ್ನು ಹರಡುತ್ತವೆ. ಈ ಆದಿತ್ಯನ ಉಪಾಸನೆ ಯಿಂದ ಲಭಿಸುವ ಫಲವು ಜಗತ್ಪಾಲಕವೂ ರಸವತ್ತೂ ಆಗಿದೆ. ಉಳಿದ ಎಲ್ಲ ಫಲಗಳಿಗಿಂತಲೂ ಇದು ಅತ್ಯುತ್ತಮವಾದುದೆಂದು ತತ್ತ್ವಜ್ಞರ ಮತ. ಯಾರು ಜಗತ್ಪಾಲಕನಾದ ಆದಿತ್ಯನನ್ನು ಉಪಾಸನಾದಿಗಳಿಂದ ತಿಳಿಯು ವುದಿಲ್ಲವೋ ಅವನು ಆ ಫಲವನ್ನು ಪಡೆಯಲಾರ.[1] ಎಂಬ ತಾತ್ಪರ್ಯವನ್ನು

---

ಆರೋಹಂತಂ ಬೃಹತಃ ಪಾಜಸಸ್ಪರಿ ವಯಂ ಜೀವಾಃ
ಪ್ರತಿ ಪಶ್ಯೇಮ ಸೂರ್ಯ ।
(೧೦.೩೭.೮.)

ಅಸುನೀತೇ ಪುನರಸ್ಮಾಸು ಚಕ್ಷುಃ ಪುನಃ ಪ್ರಾಣಮಿಹ ನೋ
ಧೇಹಿ ಭೋಗಂ ।
ಜ್ಯೋಕ್ ಪಶ್ಯೇಮ ಸೂರ್ಯಮುಚ್ಚರಂತಮನುಮತೇ
ಮೃಳಯಾ ನಃ ಸ್ವಸ್ತಿ ।
(೧೦.೫೯.೬.)

1 ಯಸ್ಮಿನ್ ವೃಕ್ಷೇ ಮಧ್ವದಃ ಸುಪರ್ಣಾ ನಿವಿಶಂತೇ
ಸುವತೇ ಚಾಧಿ ವಿಶ್ವೇ ।
ತಸ್ಯೇದಾಹುಃ ಪಿಪ್ಪಲಂ ಸ್ವಾದ್ವಗ್ರೇ ತನ್ನೋನ್ನಶದ್ಯಃ
ಪಿತರಂ ನ ವೇದ ॥
(೧.೧೬೪.೨೨.)

ಕೊಡುವ ಋಕ್ಕುಗಳಲ್ಲಿ ಆದಿತ್ಯನಿಗೂ ಪರಮಾತ್ಮನಿಗೂ ತಾದಾತ್ಮ್ಯವನ್ನು ತಿಳಿಸಿದೆ. "ಯಃ ಪಿತರಂ ನ ವೇದ" ಇತ್ಯಾದಿ ವಾಕ್ಯಗಳು ಉಪಾಸನೆಗೆ ಆಧಾರವಾದ ಜ್ಞಾನದ ಆವಶ್ಯಕತೆಯನ್ನೂ ತಿಳಿಸುತ್ತವೆ. ಉಪಾಸನೆಯ ಫಲದ ಆಸ್ವಾದದಿಂದ ಲಭಿಸುವ ಪರಮಾನನ್ದದ ತೃಪ್ತಿಗೆ ಸಮನಾದ ತೃಪ್ತಿಯು ಎಲ್ಲೂ ದೊರೆಯಲಾರದು [1]

ಆದಿತ್ಯನ ಸ್ವರೂಪವೆರಡುವಿಧ. ಲೌಕಿಕಪ್ರತ್ಯಕ್ಷಕ್ಕೆ ಗೋಚರವಾಗ ತಕ್ಕದ್ದು ಮತ್ತು ಲೌಕಿಕ ಪ್ರತ್ಯಕ್ಷಕ್ಕೆ ಗೋಚರವಾಗದೇ ಇರತಕ್ಕದ್ದು. ಕಾಲನಿಯಮಕ್ಕೆ ಅಧೀನವಾದ ಚಲನವಲನಗಳನ್ನಿಟ್ಟುಕೊಂಡು ಪರಿಭ್ರಮಣ ವನ್ನು ಹೊಂದುವ ಆದಿತ್ಯಮಂಡಲವು ಸಾಧಾರಣವಾದ ದೃಷ್ಟಿಗೆ ಗೋಚರ ವಾಗುವ ವಿಷಯ. ಆದರೆ, ಕಾಲಾತೀತವಾಗಿ, ಕಾಲಗತಿಗಳನ್ನು ತನ್ನ ನಿಯಮನದಲ್ಲೇ ಇಟ್ಟುಕೊಂಡಿರುವವನೂ ಆದಿತ್ಯಮಂಡಲಾರ್ಗತನೂ ಆದ ಹಿರಣ್ಮಯಪುರುಷನು ಸಾಧಾರಣವಾದ ದೃಷ್ಟಿಗೆ ಗೋಚರನಲ್ಲ. ಉತ್ತಮ ವಾದ ತಪಸ್ಸು ಮತ್ತು ಉಪಾಸನೆಯೇ ಆ ದಿವ್ಯದರ್ಶನಕ್ಕೆ ಸಾಧನ ಭೌತಿಕ ವಾದ ಚಕ್ಷುಸ್ಸಿನಿಂದ ನೋಡುವವನಿಗೆ ಆದಿತ್ಯನು ಎದುರಿಗಿದ್ದರೂ ಆದಿತ್ಯ ಮಂಡಲದಲ್ಲಿರುವ ಪರವಸ್ತುವು ಅಂತರ್ಹಿತವಾಗಿಯೇ ಇದೆ.[2] ಯಾವ ಇಂದ್ರನ ದಿವ್ಯಜ್ಯೋತಿಯಿಂದಲೇ ಭೂತ, ವರ್ತಮಾನ ಮತ್ತು ಭವಿಷ್ಯತ್ಕಾ ಲಕ್ಕೆ ಸೇರಿದ ಸಕಲ ತತ್ತ್ವಗಳೂ ಉತ್ಪನ್ನವಾಗಿವೆಯೋ ಮತ್ತು ಪುರಾತನ

---

1 "ಯತ್ರ ಜ್ಯೋತಿರಜಸ್ರಂ ಯಸ್ಮಿನ್ ಲೋಕೇ ಸ್ವರ್ಹಿತಂ |
ಯತ್ರ ಕಾಮಾ ನಿಕಾಮಾಶ್ಚ ಯತ್ರ ಬ್ರಧ್ನಸ್ಯ ವಿಷ್ಟಪಂ |
ಸ್ವಧಾ ಚ ಯತ್ರ ತೃಪ್ತಿಶ್ಚ ತತ್ರ ಮಾಮಮೃತಂ ಕೃಧಿ ||
(೯.೧೧೩. ೬–೧೦.)

ಇತ್ಯಾದಿ ವಾಕ್ಯಗಳು ಈ ಆನನ್ದಸ್ವರೂಪವನ್ನು ತಿಳಿಸುತ್ತವೆ.

2 ಯ ಈಂ ಚಕಾರ ನ ಸೋ ಅಸ್ಯ ವೇದ ಯ ಈಂ
ದದರ್ಶ ಹಿರುಗಿನ್ನು ತಸ್ಮಾತ್ |
ಸ ಮಾತುರ್ಯೋನಾ ಪರಿವೀತೋ ಅಂತರ್ಬಹು ಪ್ರಜಾ
ನಿರ್ಋತಿಮಾ ವಿವೇಶ ||
(೧.೧೬೪.೩೨.)

cf ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ | (ಈಶ)

ನಾದ ಯಾವ ದಿವ್ಯಜ್ಯೋತಿಯನ್ನು ದೇವಮಾನವಾದಿ ಪಂಚಜನರೂ ಸೇವಿಸುವರೋ ಆ ದಿವ್ಯಜ್ಯೋತಿಯು ನಿಗೂಢವಾಗಿದೆ.[1] ಪ್ರಸಿದ್ಧವಾದ ಇಂದ್ರನ ದಿವ್ಯ ಶರೀರವನ್ನು ತಿಳಿಯಲರಿಯದೇ ಇರುವುದಕ್ಕೆ ಮಾನವನ ಪರಾಙ್ಮುಖತೆಯೇ ಕಾರಣ[2] ಈ ದಿವ್ಯದರ್ಶನವನ್ನು ಹೊಂದಬೇಕೆಂಬ ಹಂಬಲ, ಇದಿಲ್ಲದಿರುವುದರ ಕೊರತೆ, ಅಜ್ಞಾನಕ್ಕಾಗಿ ದುಃಖ ಇವೆಲ್ಲವೂ ಪದೇ ಪದೇ ವ್ಯಕ್ತವಾಗುತ್ತಿವೆ. "ಪರವಸ್ತುವು ಬೇರೆಯಲ್ಲ, ನಾನು ಬೇರೆಯಲ್ಲ. ಆದರೆ ನಾನೇ ಸಕಲ ಪ್ರಪಂಚವ್ಯಾಪಿಯಾದ ಬ್ರಹ್ಮನಾಗಿರಬಹುದೇ ಎಂಬ ತತ್ತ್ವವನ್ನು ನಾನು ವಿಚಾರಮಾಡಿ ಅರಿತಿಲ್ಲ. ಆದ್ದರಿಂದಲೇ ಅವಿದ್ಯೆಯಿಂದ ಆವರಿಸಲ್ಪಟ್ಟವನೂ, ವಿಷಯಾದಿಗಳಿಂದ ಬಂಧಿತನೂ ಬಹಿರ್ಮುಖವಾದ ಮನಸ್ಸುಳ್ಳವನೂ ಆಗಿ ವ್ಯವಹರಿಸುತ್ತಿದ್ದೇನೆ. ಸತ್ಯಾತ್ಮಕವಾದ ಪರಬ್ರಹ್ಮಜ್ಞಾನವು ಯಾವಾಗ ಲಭಿಸುವುದೋ ಆ ಒಡನೆಯೇ 'ಅಹಂ ಬ್ರಹ್ಮಾಸ್ಮಿ' ಎಂಬ ಸತ್ಯವನ್ನು ಸಾಕ್ಷಾತ್ಕಾರಮಾಡಿಕೊಳ್ಳುತ್ತೇನೆ."[3] ಎಂಬ ಪರಿದೇವನಾವಾಕ್ಯಗಳನೇಕವಿವೆ. ತನ್ನ ಅಜ್ಞಾನಕ್ಕಾಗಿ ಆತ್ಮನಿಂದಾಪೂರ್ವಕವಾದ ವಿಲಾಪನವೇ ಪರಿದೇವನೆ.[4] ಇದರ ಜೊತೆಯಲ್ಲಿಯೇ ಪರತತ್ತ್ವವನ್ನು ತಿಳಿಯಬೇಕೆಂಬ ಉತ್ಕಟವಾದ ಆಕಾಂಕ್ಷೆಯೂ ಇರುವುದರಿಂದಲೂ,

---

1 ಮಹತ್ತನ್ನಾಮ ಗುಹ್ಯಂ ಪುರುಸ್ಪೃಗ್ಯೇನ ಭೂತಂ ಜನಯೋ ಯೇನ ಭವ್ಯಂ ।
ಪ್ರತ್ನಂ ಜಾತಂ ಜ್ಯೋತಿರ್ಯದಸ್ಯ ಪ್ರಿಯಂ ಪ್ರಿಯಾಃ ಸಮವಿಶಂತ ಪಂಚ ॥
(೧೦.೫೫.೨.)

2 ದೂರೇ ತನ್ನಾಮ ಗುಹ್ಯಂ ಪರಾಚೈಃ ।
(೧೦.೫೫.೧.)

3 ನ ವಿ ಜಾನಾಮಿ ಯದಿವೇದಮಸ್ಮಿ ನಿಣ್ಯಃ ಸಂನದ್ಧೋ ಮನಸಾ ಚರಾಮಿ ।
ಯದಾ ಮಾಗನ್ ಪ್ರಥಮಜಾ ಋತಸ್ಯಾದಿದ್ವಾಚೋ ಅಶ್ನುವೇ ಭಾಗಮಸ್ಯಾಃ ॥
(೧.೧೬೪.೩೭.)

4 ನಿರುಕ್ತ. ೭.೩.

ಪರಮಾರ್ಥತತ್ತ್ವವು ದೇವತೆಗಳ ಗೋಚರಕ್ಕೂ ಮೀರಿರುವುದರಿಂದಲೂ ಅಲ್ಪಮತಿಯುಳ್ಳವನೂ ಅಪರಿಪಕ್ವವಾದ ಮನಸ್ಸುಳ್ಳವನೂ ತತ್ತ್ವಾರ್ಥವನ್ನು ಸ್ವತಂತ್ರವಾಗಿ ತಿಳಿಯಲಶಕ್ತನೂ ಆದ ಪುರುಷನು ಅದನ್ನು ತಿಳಿಯುವ ಕುತೂಹಲದಿಂದ ಅದನ್ನರಿತ ಪ್ರಾಜ್ಞರ ಸಹಾಯವನ್ನಪೇಕ್ಷಿಸುತ್ತಾನೆ.[1]

ಈಶ್ವರನಿಂದಲೇ ಉತ್ಪನ್ನವಾದ ಪ್ರಾಣಿಗಳಿಗೆ ಅವನ ಪೂರ್ಣಮಹಿಮೆಯು ತಿಳಿಯದೇ ಇರಲು ಇರುವ ಕಾರಣಗಳೆರಡು.

(1) ಉತ್ಪನ್ನವಾದ ಸಕಲಪ್ರಾಣಿಗಳಿಗೂ ತಮ್ಮ ಉತ್ಪತ್ತಿಯು ಈಶ್ವರನಿಂದ ಎಂಬ ಪರಿಜ್ಞಾನವಿಲ್ಲದೆ ಕೇವಲ ಸ್ವಾರ್ಥಾಹಂಕಾರಗಳಿಂದಲೂ ಭೋಗಲಾಲಸೆಗಳಿಂದಲೂ ಕೂಡಿ ಅಜ್ಞಾನದಿಂದ ಪೂರಿತವಾಗಿರುವುದರಿಂದ ಈಶ್ವರನ ಸಾಕ್ಷಾತ್ಕಾರಕ್ಕೆ ಯೋಗ್ಯತೆಯನ್ನು ಹೊಂದಿರುವುದಿಲ್ಲ. ಮಂಜಿನಂತಿರುವ ಅಜ್ಞಾನದಿಂದ ಆವೃತರಾಗಿ ತಾವೇ ಸರ್ವಜ್ಞರೆಂಬ ಅಭಿಮಾನವನ್ನು ಮಾತ್ರ ಹೊಂದಿರುತ್ತಾರೆ. ಇವರು ಅಪಶ್ಯರು (ಅಂಧರು), ಅಜ್ಞಾನಕೂಪವೇ ಇವರಿಗೆ ಗತಿ.[2]

---

1 ಕೋ ದದರ್ಶ ಪ್ರಥಮಂ ಜಾಯಮಾನಮಸ್ಥನ್ವಂತಂ
ಯದನಸ್ಥಾ ಬಿಭರ್ತಿ ।
ಭೂಮ್ಯಾ ಅಸುರಸೃಗಾತ್ಮಾ ಕ್ವ ಸ್ವಿತ್ಕೋ ವಿದ್ವಾಂಸಮುಪ
ಗಾತ್ಪ್ರಷ್ಟುಮೇತತ್ ॥
ಪಾಕಃ ಪೃಚ್ಛಾಮಿ ಮನಸಾ ವಿಜಾನನ್ದೇವಾನಾಮೇನಾ
ನಿಹಿತಾ ಪದಾನಿ ।
ವತ್ಸೇ ಬಷ್ಕಯೇಽಧಿ ಸಪ್ತ ತಂತೂನ್ವಿ ತತ್ನಿರೇ ಕವಯ ಓತವಾ ಉ ॥
ಅಚಿಕಿತ್ವಾಞ್ಚಿಕಿತುಷಶ್ಚಿದತ್ರ ಕವೀನ್ ಪೃಚ್ಛಾಮಿ ವಿದ್ಮನೇ
ನ ವಿದ್ವಾನ್ ॥
(೧.೧೬೪.೪—೬.)

2 ನ ತಂ ವಿದಾಥ ಯ ಇಮಾ ಜಜಾನಾನ್ಯದ್ಯುಷ್ಮಾಕ
ಮಂತರಂ ಬಭೂವ ।
ನೀಹಾರೇಣ ಪ್ರಾವೃತಾ ಜಲ್ಪ್ಯಾ ಚಾಸುತೃಪ ಉಕ್ಥಶಾಸಶ್ಚರಂತಿ ॥
(೧೦.೮೨.೭.)
cf. Bg. III. 38.

(2) ಎರಡನೆಯದಾಗಿ, ಈಶ್ವರನು ಎಲ್ಲಕ್ಕಿಂತಲೂ ಅತೀತನು. ಇಂದ್ರಿಯಾದ್ಯುಪಕರಣಗಳಿಗೆ ಪೂರ್ಣವಾಗಿ ಗೋಚರನಾಗತಕ್ಕವನಲ್ಲ. ಅಶಬ್ದನು ಅಸ್ಪರ್ಶನು. ರೂಪರಹಿತನು. ತಪೋಮಹಿಮರಾದ ಮಹರ್ಷಿಗಳೂ ಈಶ್ವರನ ಒಂದೊಂದಂಶವನ್ನು ಮಾತ್ರ ಸಾಕ್ಷಾತ್ಕರಿಸಬಲ್ಲರೇ ವಿನಾ ಅವರಿಗೂ ಪೂರ್ಣವಾದ ಸಾಕ್ಷಾತ್ಕಾರವಿಲ್ಲ.

ಅಲ್ಲದೆ, ಈಶ್ವರಸಾಕ್ಷಾತ್ಕಾರಕ್ಕೆ ಕೇವಲ ಶ್ರದ್ಧೆಯೇ ಸಾಲದು. ಬುದ್ಧಿಶಕ್ತಿ ಮತ್ತು ನಿದಿಧ್ಯಾಸನಶಕ್ತಿ ಇವೆರಡೂ ಅತ್ಯವಶ್ಯ. ಎಲ್ಲ ಶಕ್ತಿಗಳ ಸಮನ್ವಯವೂ ಎಲ್ಲರಲ್ಲಿಯೂ ಒಂದೇ ಸಮನಾಗಿರುತ್ತದೆಂದು ಹೇಳಲಾಗುವುದಿಲ್ಲ. ಒಂದೇ ಗುರುವಿನಿಂದ ಉಪದೇಶವನ್ನು ಹೊಂದಿದ ಶಿಷ್ಯರು ಬಾಹ್ಯವಾದ ಶರೀರಾವಯವಗಳ ದೃಷ್ಟಿಯಿಂದ ಒಂದೇ ಸಮನಾಗಿ ಕಾಣುತ್ತಾರೆ. ಒಂದೇ ಸಮವಾದ ಕಣ್ಣುಗಳು ಮತ್ತು ಒಂದೇ ಸಮವಾದ ಮೂಗುಗಳು. ಆದರೆ ಉಪದೇಶಗ್ರಹಣದಲ್ಲಿ ಮಾತ್ರ ಒಬ್ಬರಿಗೊಬ್ಬರಿಗೆ ವ್ಯತ್ಯಾಸವಿರುತ್ತದೆ. ಬುದ್ಧಿಶಕ್ತಿಯಲ್ಲಿರುವ ವ್ಯತ್ಯಾಸವೇ ಇದಕ್ಕೆ ಕಾರಣ.[1] ಗುಹ್ಯತಮವಾದ ರಹಸ್ಯವನ್ನು ಭೇದಿಸಲು ಯಾವ ಬುದ್ಧಿಗೆ ಸಾಧ್ಯವಿಲ್ಲವೋ ಅದಕ್ಕೆ ಉಪದೇಶಗ್ರಹಣವು ಪೂರ್ಣವಾಗಿ ಸಾಧ್ಯವಿಲ್ಲ. ಇದನ್ನು ಮೀರಿದ ನಿದಿಧ್ಯಾಸನಶಕ್ತಿಯುಳ್ಳ ಮಹರ್ಷಿಗಳ ಗುಂಪಿಗೆ ಇವರು ಸೇರಲಾಗುವುದಿಲ್ಲ. ಪರತತ್ತ್ವದ ಸ್ವರೂಪವೇನು ಎಂಬ ಪ್ರಶ್ನೆಗೆ ಶಾಸ್ತ್ರಮುಖದಿಂದಾಗಲಿ ಅಥವಾ ಗುರುಮುಖದಿಂದಾಗಲಿ ಉತ್ತರ ಸಿಕ್ಕಬಹುದು. ಆದರೆ, ಉಪದೇಶಗ್ರಹಣವಾದೊಡನೆಯೇ ಅವನಿಗೆ ಪೂರ್ಣಜ್ಞಾನವು ಲಭಿಸಿತೆಂದು ತಿಳಿಯಬಾರದು. ಶ್ರವಣಾನಂತರ ಮನನ. ಮನನಾನಂತರ ನಿದಿಧ್ಯಾಸನ ಇವು ಅತ್ಯವಶ್ಯ.[2]

---

1 ಅಕ್ಷಣ್ವಂತಃ ಕರ್ಣವಂತಃ ಸಖಾಯೋ ಮನೋಜವೇಷ್ವಸಮಾ ಬಭೂವುಃ ।
ಆದಘ್ನಾಸ ಉಪಕಕ್ಷಾಸ ಉ ತ್ವೇ ಹ್ರದಾ ಇವ ಸ್ನಾತ್ವಾ ಉ ತ್ವೇ ದದೃಶ್ರೇ ॥
(೧೦ ೭೧.೭.)

2 ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮನ್ತವ್ಯೋ ನಿದಿಧ್ಯಾಸಿತವ್ಯೋ ಮೈತ್ರೇಯ್ಯಾತ್ಮನೋ ವಾ ಅರೇ ದರ್ಶನೇನ ಶ್ರವಣೇನ ಮತ್ಯಾ ವಿಜ್ಞಾನೇನೇದಂ ಸರ್ವಂ ವಿದಿತಂ ॥
(ಬೃ. ಉ. ೨.೪.೫.)

ಬಾಹ್ಯವಾದ ಯಾವ ಸಾಧನಗಳಿದ್ದರೂ ಅವೆಲ್ಲವೂ ಉಪಾಸಕನ ವೈಯಕ್ತಿಕ ಶಕ್ತಿಯನ್ನು ವೃದ್ಧಿಪಡಿಸುವುವೇ ವಿನಾ ದಿವ್ಯಜ್ಯೋತಿಯ ಸಾಕ್ಷಾತ್ಕಾರಕ್ಕೆ ಕೇವಲ ಅವೇ ಮುಖ್ಯಕಾರಣಗಳಾಗಲಾರವು. ವಿಶ್ವಕವಿಯ ಕಾವ್ಯಾತ್ಮಕವಾದ ಜಗದ್ರಹಸ್ಯವನ್ನೂ ಜಗನ್ಮೂಲನಾದ ಕವಿಯ ದಿವ್ಯಸ್ವರೂಪವನ್ನೂ ಅರಿಯಲು ವ್ಯಕ್ತಿಯೂ ಕವಿಹೃದಯವನ್ನು ಹೊಂದಿಲ್ಲದೆ ಸಾಧ್ಯವಿಲ್ಲ. ಪರಮಾತ್ಮನ ದಿವ್ಯಸ್ವರೂಪವನ್ನರಿಯಲು ಸಕಲ ದೇವತೆಗಳೂ ಪ್ರಯತ್ನಿಸಿದರೂ ಕೇವಲ ಇಂದ್ರನಿಂದ ಮಾತ್ರ ಅದನ್ನರಿಯಲು ಸಾಧ್ಯವಾಯಿತು. ಈ ಬ್ರಹ್ಮತತ್ತ್ವವನ್ನು ಸಾಕ್ಷಾತ್ತಾಗಿ ನೋಡುವ ಶಕ್ತಿಯಿದ್ದುದರಿಂದ ಇಂದ್ರನೆಂಬ ವ್ಯವಹಾರ.[1] ಕವಿಹೃದಯವುಳ್ಳವನಿಗೆ ಮಾತ್ರ ಈ **ಇದಂದ್ರ** ಶಕ್ತಿಯು ಸಾಧ್ಯ.

---

1 “ **ಇದಂ ದರ್ಶನಾದಿತ್ಯೌಪಮನ್ಯವಃ** ” (ನಿರುಕ್ತ)

**ಪರಬ್ರಹ್ಮತತ್ತ್ವವನ್ನು ತಿಳಿಯುವ ಸಾಮರ್ಥ್ಯವಿರುವುದರಿಂದ** “ಇಂದ್ರ” ನೆಂಬ ಹೆಸರು ಪ್ರಸಿದ್ಧವಾಗಿದೆ ಎಂದು **ಕೆಲವರ** ಮತ. ಪರತತ್ತ್ವವನ್ನರಿಯುವ ಸಾಮರ್ಥ್ಯವು ದೇವತೆಗಳಲ್ಲೆಲ್ಲ ಇಂದ್ರನಿಗೆ **ಮಾತ್ರವಿರುತ್ತದೆ** ಎಂದು **ತಿಳಿಸಲು ಕೇನೋಪನಿಷತ್ತಿನಲ್ಲಿ ಒಂದು ಕಥೆಯನ್ನು ಹೇಳಿದೆ. ಅದೇನೆಂದರೆ—**

ಪರಬ್ರಹ್ಮವು ದೇವತೆಗಳಿಗಾಗಿ ವಿಜಯವನ್ನು ಗಳಿಸಿತು. ದೇವತೆಗಳು ಆ ಜಯಕ್ಕೆ ತಾವೇ **ಕಾರಣರೆಂದು ಹೆಮ್ಮೆಪಟ್ಟರು. ನಿಷ್ಕಾರಣವಾದ ಆತ್ಮಾಭಿಮಾನವನ್ನು ಹೊಂದಿದ ದೇವತೆಗಳಿಗೆ ಅವರ ನ್ಯೂನತೆಯನ್ನು ತಿಳಿಸಿ ಆ ಅಭಿಮಾನವು ಹೋಗುವಂತೆ ಮಾಡಿತು.**

**ಅಪ್ರಾಕೃತವಾದ ವೇಷವನ್ನು ಹೊಂದಿ ದೇವತೆಗಳ ಮುಂದೆ ಯಕ್ಷವು ಆವಿರ್ಭೂತವಾದಾಗ ಜಾತವೇದಸ್ಸೆಂದು ಪ್ರಸಿದ್ಧನಾದ ಅಗ್ನಿಯಾಗಲಿ, ಮಾತರಿಶ್ವನೆಂದು ಪ್ರಸಿದ್ಧನಾದ ವಾಯುವಾಗಲಿ, ಅಥವಾ ಉಳಿದ ದೇವತೆಗಳಾಗಲಿ ಅದರ ಸ್ವರೂಪವನ್ನರಿಯದಾದರು. ಅತ್ಯಂತ ಆಕರ್ಷಕವಾದ ಸ್ತ್ರೀರೂಪವನ್ನು ಧರಿಸಿದ ಆ ಯಕ್ಷವೇ ಪರಬ್ರಹ್ಮವೆಂದು ಇಂದ್ರನು ಮಾತ್ರ ಅರಿತನು. ಪರಬ್ರಹ್ಮವಸ್ತುವನ್ನು ತಿಳಿಯುವ ಸಾಮರ್ಥ್ಯವಿದ್ದುದರಿಂದಲೇ ಇಂದ್ರನೆಂಬ ವ್ಯವಹಾರವೆಂದು ಔಪಮನ್ಯವನೆಂಬ ಋಷಿಯ ನಿರ್ವಚನದಿಂದ ತಿಳಿಯುತ್ತದೆ. ಅರಣ್ಯಕಾದಿಗಳೂ ಇದೇ ವಿಷಯವನ್ನು ತಿಳಿಸುತ್ತವೆ. ಐತರೇಯಾರಣ್ಯಕದಲ್ಲಿ ಹೇಳಿರುವಂತೆ—**

ಶತಪಥಬ್ರಾಹ್ಮಣದಲ್ಲಿ ಹೇಳಿರುವಂತೆ, ವಿಜ್ಞಾನವೆಂದರೆ, ವಿಶೇಷ ಜ್ಞಾನ. ಇದು ಆನನ್ದಮಯ. ಸತ್ಯಜ್ಞಾನವೇ ಈ ಆನನ್ದಕ್ಕೆ ಕಾರಣ. ಇಂಥ ಸತ್ಯಜ್ಞಾನವು ದೇವತೆಗಳಿಗೆ ಸಾಧ್ಯ. ಒಂದು ವೇಳೆ ಮಾನವರಲ್ಲೂ ಈ ಜ್ಞಾನವನ್ನು ಪಡೆಯುವ ಶಕ್ತಿಯಿದ್ದರೆ ಅವರನ್ನೂ ದೇವತೆಗಳೆಂದೇ ತಿಳಿಯಬೇಕು. ಗೂಢಾರ್ಥವನ್ನು ಪ್ರತಿಪಾದಿಸುವುದೂ ಪ್ರಕಾಶಪಡಿಸುವುದೂ ಅದರ ಗಭೀರತೆಯ ಮಹತ್ತ್ವವನ್ನು ಪ್ರಶಂಸಿಸುವುದೂ ದೇವತೆಗೂ (ಮಾನವ) ಕವಿಗೂ ಇರುವ ಸಾಧಾರಣಧರ್ಮ. ಕವಿಯೆಂದರೆ ಕ್ರಾಂತದರ್ಶಿಯೆಂದರ್ಥ.[1]

ಅನೇಕ ಸಂದರ್ಭಗಳಲ್ಲಿ ಸಾಯಣರು **ಕವಿ** ಶಬ್ದಕ್ಕೆ **ದೇವ** ಎಂಬುದು ಪರ್ಯಾಯಪದವೆಂದೇ ತಿಳಿಸಿದ್ದಾರೆ. ಮಾನವನಾದರೂ ದಿವ್ಯಚಕ್ಷುಸ್ಸುಳ್ಳವನೆಂದರ್ಥ. ಭೌತಿಕವಾಗಿ ಅವನಿಗೆ ಎರಡು ಚಕ್ಷುಸ್ಸುಗಳಿದ್ದರೂ ಅವನ ಅಂತಶ್ಚಕ್ಷುಸ್ಸು ಸಹಸ್ರ ಕಣ್ಣುಗಳಿಗೆ ಸಮಾನವಾಗಿದೆ. ಆದ್ದರಿಂದಲೇ ಋಕ್ಸಂಹಿತೆಯಲ್ಲಿಯೂ ಸಹ,

---

"ಇದಂ ಬ್ರಹ್ಮ ಸಾಕ್ಷಾತ್ ಪಶ್ಯತೀಂದ್ರ |.... ಪರೋಕ್ಷಪ್ರಿಯಾ ಇವ ಹಿ ದೇವಾಃ (?) ಇದಂದ್ರಂ ಸಂತಮಿಂದ್ರ ಇತ್ಯಾಚಕ್ಷತೇ".

ಇದಂ ಶಬ್ದವು ಬ್ರಹ್ಮವಾಚ್ಯ. ಬ್ರಹ್ಮನನ್ನು ಪ್ರತ್ಯಕ್ಷವಾಗಿ ನೋಡುವ ಸಾಮರ್ಥ್ಯವಿದ್ದುದರಿಂದ ಇದಂದ್ರ — ಇಂದ್ರ ಎಂಬ ಹೆಸರು ಪ್ರಸಿದ್ಧವಾಗಿದೆಯೆಂದು ಅಭಿಪ್ರಾಯ

1 ನಿರುಕ್ತಕಾರರು ಕವಿ ಶಬ್ದವನ್ನು ಮನೀಷೀ ಇತ್ಯಾದಿ ಮೇಧಾವಿ ನಾಮಗಳಲ್ಲಿ ಸೇರಿಸಿದ್ದಾರೆ. (ನಿ. ೩.೧೫.).

**ಮೇಧಾವೀ ಕವಿಃ ಕ್ರಾಂತದರ್ಶನೋ ಭವತಿ ಕವತೇರ್ವಾ ||**

(ನಿ ೧೨.೧೩.)

ಕ್ರಮ್ ಧಾತುವಿನಿಂದ ನಿಷ್ಪನ್ನವಾಗಿ ಕ್ರಾಂತದರ್ಶನವುಳ್ಳವನೆಂದಾಗಲಿ, ಅಥವಾ ಕವ್ ಧಾತುವಿನಿಂದ ನಿಷ್ಪನ್ನವಾಗಿ ಸ್ತುತಿಮಾಡತಕ್ಕವನೆಂದಾಗಲಿ ಅರ್ಥವಾಗುತ್ತದೆ. ಸತ್ಯಾರ್ಥಗ್ರಾಹಕವಾದ ಬುದ್ಧಿಯೂ ಭಾವವೂ ಈ ಎರಡು ನಿರ್ವಚನಗಳಿಂದಲೂ ತಿಳಿಯುತ್ತದೆ. ಭೂತಭವಿಷ್ಯದ್ವರ್ತಮಾನಗಳ ವ್ಯವಹಾರಗಳನ್ನೆಲ್ಲ ತಿಳಿಯುವ ಅಲೌಕಿಕವೂ ಅಸಾಧಾರಣವೂ ಆದ ಶಕ್ತಿಯುಳ್ಳವನೆಂದರ್ಥ; ಕವಿಯ ನಿಜವಾದ ಸ್ವರೂಪವನ್ನು ತಿಳಿಸಲು ನಿರುಕ್ತಕಾರರು,

" ಕವಿಗಳು ಸಹಸ್ರನಯನವುಳ್ಳವರು. ಕ್ರಾಂತದರ್ಶಿಗಳು. ಅವರು ಆದಿತ್ಯನನ್ನೂ ರಕ್ಷಿಸುವ ಶಕ್ತಿಯುಳ್ಳವರಾಗಿದ್ದಾರೆ. "[1] ಇಂಥ ಶಕ್ತಿಯಿರುವುದರಿಂದಲೇ, " ಕ್ರಾಂತದರ್ಶಿಗಳಾದ ಕವಿಗಳು ಆದಿತ್ಯಮಂಡಲಾಂತರ್ವರ್ತಿಯಾದ ಪರತತ್ತ್ವವನ್ನು ತಿಳಿಯುತ್ತಾರೆ. ಮತ್ತು ಅದರೊಂದಿಗೆ ತಾದಾತ್ಮ್ಯವನ್ನು ಪಡೆಯಲಿಚ್ಛಿಸುತ್ತಾರೆ "[2] " ಇದೇ ಕವಿಗಳು ಋತದ ಪಥವನ್ನು ಪ್ರವೇಶಿಸಿ ತಮ್ಮ ಅತ್ಯುತ್ತಮವಾದ ರಹಸ್ಯನಾಮಗಳನ್ನು ಧರಿಸಿದ್ದಾರೆ ಮತ್ತು ಅದನ್ನು ಪ್ರಕಾಶಪಡಿಸಿ ಲೋಕಕ್ಕೆ ತಿಳಿಯುವಂತೆ ಮಾಡುತ್ತಾರೆ. "[3] ಇತ್ಯಾದಿಯಾಗಿ ಕವಿಯ ಅಸಾಧಾರಣ ಶಕ್ತಿಯನ್ನು ಪ್ರಶಂಸಿಸಿದೆ.

---

" ವಿಶ್ವಾ ರೂಪಾಣಿ ಪ್ರತಿ ಮುಂಚತೇ ಕವಿಃ "

(ಋ. ಸಂ. ೫ ೮೧.೨.)

ಎಂಬ ಸವಿತೃದೇವತಾಕವಾದ ಮಂತ್ರವನ್ನು ದಾಹರಿಸಿ ವಿವರಿಸಿದ್ದಾರೆ. ಗೂಢವಾಗಿ, ಲೋಕದ ದೃಷ್ಟಿಗೆ ಗೋಚರವಾಗದಿರುವ ಅಂಶಗಳನ್ನು ತನ್ನ ಶಕ್ತಿಯಿಂದರಿತು ಲೋಕದ ದೃಷ್ಟಿಗೂ ಕೊಂಚವುಟ್ಟಿಗೆ ಬೀಳುವಂತೆ ಮಾಡುವ ಪ್ರಭಾವವುಳ್ಳವನೆಂದರ್ಥ.

1 " ಸಹಸ್ರಣೀಥಾಃ ಕವಯೋ ಯೇ ಗೋಪಾಯಂತಿ ಸೂರ್ಯಂ "

(೧೦.೧೫೪.೫.)

ಸಹಸ್ರನಯನವೆಂದರೆ, ಸಹಸ್ರಚಕ್ಷುಸ್ಸುಳ್ಳವರೆಂದಾಗಲಿ, ಅಥವಾ ಸಹಸ್ರಾರು ಅನುಯಾಯಿಗಳಿಗೆ ಮಾರ್ಗದರ್ಶಕರೆಂದಾಗಲಿ ಅರ್ಥಮಾಡಬಹುದು. ಮಾರ್ಗದರ್ಶಕರೆಂದು ಹೇಳುವುದಾದರೆ, ತಾವು ತತ್ತ್ವಾರ್ಥವನ್ನು ತಿಳಿದು ಇತರರಿಗೆ ಬೋಧಿಸುವ ಶಕ್ತಿಯುಳ್ಳವರೆಂದರ್ಥ.

2 ಸಮುದ್ರೇ ಅಂತಃ ಕವಯೋ ವಿ ಚಕ್ಷತೇ ಮರೀಚೀನಾಂ
ಪದಮಿಚ್ಛಂತಿ ವೇಧಸಃ ||

(೧೦.೧೭೭.೧.)

3 ಋತಸ್ಯ ಪದಂ ಕವಯೋ ನಿ ಪಾಂತಿ ಗುಹಾ ನಾಮಾನಿ
ದಧಿರೇ ಪರಾಣಿ || (ಋ. ಸಂ. ೧೦.೫.೨.)

cf. ೧೦.೭೧.೧. ಇತ್ಯಾದಿ

ಅತೀಂದ್ರಿಯಾರ್ಥಗಳನ್ನು ನೋಡುವ ಸಾಮರ್ಥ್ಯವುಳ್ಳ ತತ್ತ್ವಜ್ಞನಾದುದರಿಂದಲೇ ಕ್ರಾಂತದರ್ಶಿಯೆನಿಸಿದ ಕವಿಯೂ **ಋಷಿ**, **ಸೂರಿ** ಇತ್ಯಾದಿ ನಾಮಗಳಿಂದಲೂ ನಿರ್ದಿಷ್ಟನಾಗಿದ್ದಾನೆ.[1]

ಇಂಥ ಕವಿಯು ಪರಿಪಕ್ವಬುದ್ಧಿಯನ್ನು ಹೊಂದಿದವನಾಗಿರುತ್ತಾನೆ ಪರಿಪಕ್ವವಾದ ಹೃದಯವನ್ನೂ ಹೊಂದಿದ್ದಾನೆ. ಯಮನಿಯಮಾದಿ ಸಾಧನ ಸಂಪದ್ಯುಕ್ತನೂ, ಹೃದಯದಲ್ಲಿ ನಿರುದ್ಧವಾದ ಮನಸ್ಸುಳ್ಳವನೂ ಆದ ಕವಿಯು ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಕಾರಣನೂ, ಸೂರ್ಯಮಂಡಲದ ಮಧ್ಯವರ್ತಿಯೂ ಆದ ಪರಮಾತ್ಮನನ್ನು ತನ್ನ ಪರಿಪಕ್ವವಾದ

---

1 "ಋಷತಿ ಜ್ಞಾನೇನ ಸಂಸಾರಪಾರಂ" ಸಂಸಾರಪಾರವನ್ನು ತನ್ನ ಜ್ಞಾನದ ಮೂಲಕ ದಾಟುವುದರಿಂದ ಋಷ್ ಧಾತುವಿನಿಂದ ನಿಷ್ಪನ್ನವಾದ ಋಷಿ ಶಬ್ದಕ್ಕೆ ಜ್ಞಾನಿಯೆಂದರ್ಥ. "ದೃಶ್" ಧಾತುವಿನಿಂದಲೂ ಈ ಪದವು ನಿಷ್ಪನ್ನವಾಗಿರಲು ಸಾಧ್ಯ. "ಋಷಿಕೃತ್", "ಋಷಿಮನಾಃ" (ಋ. ಸಂ. ೧ ೩೧.೧೬, ೯.೯೬.೧೮) ಇತ್ಯಾದಿ ಸಂದರ್ಭಗಳಲ್ಲಿ ಸಾಯಣರು ದರ್ಶನಕಾರೀ, ದರ್ಶನಶೀಲಮನಾಃ ಎಂದರ್ಥಮಾಡಿದ್ದಾರೆ. ತತ್ತ್ವಜ್ಞಾನಕ್ಕೆ ದರ್ಶನವೆಂಬ ಪರ್ಯಾಯ ಪದವೂ ಈ ಅಭಿಪ್ರಾಯವನ್ನು ತಿಳಿಸುತ್ತದೆ.

"ಅಗ್ನಿಃ ಪೂರ್ವೇಭಿರ್ಋಷಿಭಿರೀಡ್ಯಃ" (೧.೧.೨.)

"ತಮೇವ ಋಷಿಂ ತಮು ಬ್ರಹ್ಮಾಣಮಾಹುಃ" (೧೦.೧೦೭.೬.)

ಇತ್ಯಾದಿ ಸಂದರ್ಭಗಳಲ್ಲಿ ಋಷಿ ಶಬ್ದವು ಋಕ್ಸಂಹಿತೆಯಲ್ಲಿ ಕ್ರಾಂತದರ್ಶಿಯಾದ ಕವಿಯೆಂಬರ್ಥದಲ್ಲಿಯೇ ಪ್ರಯುಕ್ತವಾಗಿದೆ.

cf Monier Williams :—Sanskrit-English Dictionary.

ವಿಶ್ವದ ರಹಸ್ಯತತ್ತ್ವವನ್ನು ಗ್ರಹಿಸುವ ದರ್ಶನಶಕ್ತಿಯುಳ್ಳವನೂ, ಕ್ರಾಂತದರ್ಶಿಯೂ ಆದ ಋಷಿಯೇ ಸೂರಿ ಯೆಂದೂ ಪ್ರಸಿದ್ಧನು.

"ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ"

(ಋ. ಸಂ. ೧.೨೨ ೨೦.)

ಇತ್ಯಾದಿ ಸನ್ನಿವೇಶಗಳಲ್ಲಿ ಸೂರಿಯು ದಿವ್ಯಶಕ್ತಿಯು ಪ್ರಶಂಸಿತವಾಗಿದೆ.

ಮನಸ್ಸಿನಿಂದರಿತು ಆನಂದವನ್ನನುಭವಿಸುತ್ತಾನೆ[1] ಇಂಥ ಕವಿಯು ಆದಿತ್ಯ ರೂಪನಾದ ಪರಬ್ರಹ್ಮನೊಂದಿಗೆ ತಾದಾತ್ಮ್ಯವನ್ನೇ ಹೊಂದುತ್ತಾನೆ. ವಾಮದೇವಾದಿ ಋಷಿಗಳೇ ಇದಕ್ಕೆ ಉದಾಹರಣೆ, "ಅಹಂ ಬ್ರಹ್ಮಾಸ್ಮಿ" ಎಂಬ ಪ್ರತ್ಯಯವು ಯಾರ್ಯಾರಿಗೆ ಬರುವುದೋ ಅವರೆಲ್ಲರೂ ಜಗತ್ತಿನ ಸಕಲ ತತ್ತ್ವಗಳೊಂದಿಗೂ ತಾದಾತ್ಮ್ಯವನ್ನು ಪಡೆಯುತ್ತಾರೆ. ಈ ತತ್ತ್ವಜ್ಞಾನ ವನ್ನು ಹೊಂದಿದುದರಿಂದಲೇ ಋಷಿಯಾದ ವಾಮದೇವನು "ನಾನೇ ಮನು, ನಾನೇ ಸೂರ್ಯ, ವೈಯಕ್ತಿಕರೂಪವುಳ್ಳ ಸಕಲವೂ ನಾನೇ" ಎಂದರಿ ತನು.[2] ಈ ಸಾಮರಸ್ಯಜ್ಞಾನವೇ ಉತ್ತಮವಾದ ಆನಂದಹೇತು. ಉಪಾಸನೆಗಳಿಂದ ಪರತತ್ತ್ವವನ್ನಾರಾಧಿಸುವವನು ಆದಿತ್ಯರೂಪವಾದ ವೃಕ್ಷದಲ್ಲಿರುವುದೂ ಅತ್ಯಂತ ಸ್ವಾದುವಾದುದೂ, ಉಳಿದ ಎಲ್ಲ ಫಲಗಳಿ ಗಿಂತಲೂ ಉತ್ತಮವಾದುದೂ ಆದ ಫಲವನ್ನು ಭೋಗಿಸುತ್ತಾನೆ.[3]

"ಈಶಾವಾಸ್ಯಮಿದಂ" ಎಂಬ ಅಧ್ಯಾತ್ಮಜ್ಞಾನವಿಲ್ಲದೆ ಕೇವಲ ಉಪಾಸನೆಯಿಂದಲೇ ದಿವ್ಯಜ್ಯೋತಿಯ ಸಾಕ್ಷಾತ್ಕಾರವನ್ನು ಹೊಂದುವೆ ನೆಂಬುದು ಅರ್ಥವಿಲ್ಲದ ಮಾತು. ಈಶ್ವರತತ್ತ್ವದ ಪೂರ್ಣಜ್ಞಾನವನ್ನು ಹೊಂದುವೆನೆಂಬ ಮಾತೂ ಅಷ್ಟೇ ಅರ್ಥವಿಲ್ಲದ್ದು. ಸೃಷ್ಟಿಮೂಲವನ್ನಾಗಲಿ ಸೃಷ್ಟಿಪ್ರಕಾರವನ್ನಾಗಲಿ ಇದಮಿತ್ಥಂ ಎಂದು ನಿಷ್ಕರ್ಷಿಸುವ ಜ್ಞಾನವು

---

1 ತಾಸಾಂ ನಿ ಚಿಕ್ಯುಃ ಕವಯೋ ನಿದಾನಂ ಪರೇಷು ಯಾ ಗುಹ್ಯೇಷು ವ್ರತೇಷು || (೧೦.೧೧೪ ೨)

ಪತಂಗಮಕ್ತಮಸುರಸ್ಯ ಮಾಯಯಾ ಹೃದಾ ಪಶ್ಯಂತಿ ಮನಸಾ ವಿಪಶ್ಚಿತಃ | (೧೦.೧೭೭.೧.)

2 ಅಹಂ ಬ್ರಹ್ಮಾಸ್ಮೀತಿ | ತಸ್ಮಾತ್ತತ್ಸರ್ವಮಭವತ್ ತದ್ಯೋ ಯೋ ದೇವಾನಾಂ ಪ್ರತ್ಯಬುಧ್ಯತ ಸ ಏವ ತದಭವತ್ತಥರ್ಷೀಣಾಂ ತಥಾ ಮನುಷ್ಯಾಣಾಂ ತದ್ಧೈತತ್ ಪಶ್ಯನ್ ಋಷಿರ್ವಾಮದೇವಃ ಪ್ರತಿ ಪೇದೇಽಹಂ ಮನುರಭವಂ ಸೂರ್ಯಶ್ಚೇತಿ ||

(ಬೃ. ಉ. ೧.೪.೧೦. ಋ. ಸಂ. ೪.೨೬.)

3 ಐ. ಉ. II. 4.

ಯಾರಿಗೆ ಗೊತ್ತೊ ಅದನ್ನೂ ಈಶ್ವರನೇ ಹೇಳಬೇಕು.[1] ಅದಕ್ಕೂ ಅವನ ಅನುಗ್ರಹವೇ ಅತ್ಯವಶ್ಯ. ಆದ್ದರಿಂದಲೇ ಜ್ಞಾನ, ಧ್ಯಾನ ಇವೆರಡರ ಜೊತೆಗೆ ಈಶ್ವರಾನುಗ್ರಹದ ಆವಶ್ಯಕತೆಯನ್ನೂ ತಿಳಿಸಿದೆ ಸರ್ವದಾ ಈಶ್ವರನ ಸ್ತುತಿ, ಋತಮಾರ್ಗದ ಅನುಸರಣೆ, ದಿವ್ಯಜ್ಯೋತಿಯ ಸಾಕ್ಷಾತ್ಕಾರದ ಆನಂದಾನುಭವ ಇವುಗಳಿಂದ ತುಂಬಿದ ಜೀವನವನ್ನನುಗ್ರಹಿಸಲು ಈಶ್ವರನನ್ನು ಅನೇಕ ವಿಧದಲ್ಲಿ ಪ್ರಾರ್ಥಿಸಿದೆ.

" ತವ ಪ್ರಿತೇ ಸುಭಗಾಸಃ ಸ್ಯಾಮ " (II. 28.2.)
" ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್ (I. 189.1)
" ಜೀವಾ ಜ್ಯೋತಿರಶೀಮಹಿ . " (VII 32.26.)
" ವಿಶ್ವದಾನೀಂ ಸುಮನಸಃ ಸ್ಯಾಮ " (VI 52.5.)
" ಚಕ್ಷುರ್ನೋ ಧೇಹಿ ಚಕ್ಷುಷೇ...." (X 158.4.)
" ಧಿಯೋ ಯೋ ನಃ ಪ್ರಚೋದಯಾತ್ " [III. 62.10.]

ಇತ್ಯಾದಿಯಾಗಿ ಈಶ್ವರಾನುಗ್ರಹವನ್ನು ಪ್ರಾರ್ಥಿಸುವ ಮಂತ್ರಗಳು ಅನೇಕ ವಾಗಿದ್ದರೂ ಸವಿತೃದೇವತಾಕವಾದ ಗಾಯತ್ರೀ ಮಂತ್ರಕ್ಕಿರುವ ಮಾಹಾತ್ಮ್ಯವು ಯಾವುದಕ್ಕೂ ಇಲ್ಲ.

ಜಗತ್ಪ್ರಸಿದ್ಧವಾದುದೂ ಮಾನವನ ಆಧ್ಯಾತ್ಮಿಕಧ್ಯೇಯವನ್ನು ತಿಳಿಸ ತಕ್ಕದ್ದೂ ಆದ 'ತತ್ಸವಿತುಃ' ಎಂಬ ಮಹಾಮಂತ್ರವೇ **ಗಾಯತ್ರೀ** ಎಂದು ಪ್ರಖ್ಯಾತವಾಗಿದೆ. ಈ ಮಂತ್ರದ ಸ್ಫೂರ್ತಿಯು ಪೃಥ್ವಿಯಲ್ಲೆಲ್ಲ ಹರಡಿ ಜಗತ್ತಿನ ಸಕಲ ತತ್ತ್ವಜಿಜ್ಞಾಸುಗಳ ಚಿತ್ತವನ್ನೂ ಆಕರ್ಷಿಸಿದೆ. ಇದನ್ನೇ

---

1 ಕತರಾ ಪೂರ್ವಾ ಕತರಾಪರಾಯೋಃ ಕಥಾ ಜಾತೇ ಕವಯಃ ಕೋ ವಿವೇದ | (೧.೧೮೫.೧)

ಇಯಂ ವಿಸೃಷ್ಟಿರ್ಯತ ಆಬಭೂವ ಯದಿ ವಾ ದಧೇ ಯದಿ ವಾ ನ | ಯೋ ಅಸ್ಯಾಧ್ಯಕ್ಷಃ ಪರಮೇ ವ್ಯೋಮನ್ತ್ಸೋ ಅಂಗ ವೇದ ಯದಿ ವಾ ನ ವೇದ | (೧೦.೧೨೯.೭.)

(ಸರ್ವಜ್ಞ ಈಶ್ವರ ಏವ ತಾಂ ಸೃಷ್ಟಿಂ ಜಾನೀಯಾತ್ ನಾನ್ಯ ಇತ್ಯರ್ಥಃ || ಸಾ. ಭಾ.)

ಮಾನವನ ಉದಾತ್ತಧ್ಯೇಯವನ್ನು ತಿಳಿಸುವ ಮಹಾಮಂತ್ರವೆಂದು ಸಕಲರೂ ಕೊಂಡಾಡಿದ್ದಾರೆ.[1]

ಯಾವ ಪುರುಷಾರ್ಥದ ಅನುಸಂಧಾನದಿಂದ ಜೀವನದ ಸಕಲ ಕರ್ಮಗಳೂ ಇದು ಸಣ್ಣದು, ಇದು ದೊಡ್ಡದು, ಇದು ಕೀಳು, ಇದು ಮೇಲು ಎಂಬ ಭೇದವಿಲ್ಲದೆ ಉತ್ತಮವಾದ ಪುರುಷಾರ್ಥಗಳಾಗುವುವೋ ಆ ಪುರುಷಾರ್ಥದ ಅನುಸಂಧಾನವೇ ಗಾಯತ್ರೀ ಮಂತ್ರದಿಂದ ಉಪದಿಷ್ಟವಾಗಿರುವ ವಿಷಯ. ಆತ್ಮ, ಪರಮಾತ್ಮ, ಬ್ರಹ್ಮ ಇತ್ಯಾದಿ ನಾನಾ ವಿಧವಾಗಿ ಕರೆದಿರುವ ಪರತತ್ತ್ವದ ಅನುಸಂಧಾನದಲ್ಲಿಯೇ ಬದುಕಿನ ಪರಮಪುರುಷಾರ್ಥವೂ ಅಡಗಿದೆ. ಈ ಸಮನ್ವಯ ದೃಷ್ಟಿಯ ದರ್ಶನಜ್ಯೋತಿಯಿಂದ ವ್ಯಕ್ತಿತ್ವವು

---

1 " Despite the woeful accumulations of superstition and degrading custom that had clung to her and borne her down she (India) had never wholly forgotten the inspiration that some of the wisest of her children, at the dawn of history, had given her in the upanishads Their keen minds, ever restless and ever striving and exploring, had not sought refuge in blind dogma or grown complacent in the routine observance of dead forms of ritual and creed. They had demanded not a personal relief from suffering in the present or a place in a paradise to come, but light and understanding.

In the most famous of the Prayers recited daily even today by millions, the Gayatri Mantra (गायत्री), the call is for knowledge, for enlightenment

Jawaharlal Nehru,
Autobiography, Chap. LIII.

" When I repeat the Gayatri Mantra, I remind myself that Earth, Air and Sky are a glory . If one in a hundred of those who repeat it would do the same, India would lead the world in science."

Professor—J. B. S. Haldane:—
Science and the Enquiring Mind.

ದೀಪ್ತವಾಗಿ ಪರಿಪೂರ್ಣತೆಯನ್ನು ಪಡೆಯಬೇಕಾದರೆ ಧ್ಯಾನದೇಕಾಂತದಲ್ಲಿ ಭಗವಂತನ ದಿವ್ಯಸಾನ್ನಿಧ್ಯವು ಲಭಿಸಬೇಕು. ಈ ಧ್ಯಾನದ ಸಮಯದಲ್ಲಿ ವ್ಯಕ್ತಿಯ ಶುದ್ಧವಾದ ಬುದ್ಧಿಯು ವಿಶ್ವಜ್ಯೋತಿಯನ್ನು ಅನುಸಂಧಾನಮಾಡಿ ಆ ದಿವ್ಯ ಚೈತನ್ಯದ ತೇಜಸ್ಸು ತನ್ನಲ್ಲೂ ತುಂಬಲಿ ಎಂದು ಪ್ರಾರ್ಥಿಸಬೇಕು.

" ತೇಜೋಽಸಿ ತೇಜೋ ಮಯಿ ಧೇಹಿ ; ಓಜೋಽಸಿ
ಓಜೋ ಮಯಿ ಧೇಹಿ ..."

ತೇಜೋ ಮಂಡಲಗಳಿಗೆಲ್ಲ ಮೂಲತೇಜಸ್ಸಾದ ನಿನ್ನ ತೇಜಸ್ಸು ನನ್ನಲ್ಲೂ ತುಂಬಲಿ ; ಸಕಲಶಕ್ತಿಗಳಿಗೂ ಮೂಲಶಕ್ತಿಯಾದ ನಿನ್ನ ಶಕ್ತಿಯು ನನ್ನಲ್ಲೂ ವ್ಯಾಪಿಸಲಿ ; ವಿಶ್ವಶಾಂತಿಗೆ ಮೂಲನಾದ ನಿನ್ನ ಶಾಂತಿಯು ನನ್ನ ಆತ್ಮನನ್ನು ವ್ಯಾಪಿಸಲಿ ಇತ್ಯಾದಿಯಾಗಿ ಬ್ರಹ್ಮತೇಜಸ್ಸಿಗಾಗಿಯೂ, ಬ್ರಹ್ಮಶಾಂತಿಗಾಗಿಯೂ ಉತ್ಕಟವಾದ ಆಕಾಂಕ್ಷೆಯನ್ನು ತೋರುತ್ತ ತದ್ದ್ವಾರಾ ವಿಶ್ವಶಾಂತಿಯನ್ನು ಅಪೇಕ್ಷಿಸುವ ವೈಯಕ್ತಿಕ ಚೇತನವು " ಭರ್ಗೋ ದೇವಸ್ಯ ಧೀಮಹಿ ; ಧಿಯೋ ಯೋ ನಃ ಪ್ರಚೋದಯಾತ್ " ಎಂಬ ಮಂತ್ರಾತ್ಮಕವಾದ ಧ್ಯಾನದಿಂದ ಪ್ರಾರ್ಥಿಸುತ್ತದೆ.

ವಿಶ್ವಸಾಮರಸ್ಯಕ್ಕೆ ಮೂಲವಾದ ವಿಶ್ವಜ್ಯೋತಿಯನ್ನು ಸ್ತುತಿಸಿ ಆ ತತ್ತ್ವಜ್ಞಾನಕ್ಕೆ ಸಾಧಕವಾಗಿರುವುದೇ ಗಾಯತ್ರಿಯ ಮಹತ್ವ.

ಯೋಽಸೌ ತಪನ್ನುದೇತಿ; ಸ ಸರ್ವೇಷಾಂ ಪ್ರಾಣಾನಾದಾಯೋದೇತಿ
[ತೈ. ಆ. ೧.೧೪.೧.]

ಅಸಾವಾದಿತ್ಯೋ ಬ್ರಹ್ಮ [ತೈ. ಆ. ೨.೨.೧]

ಇತ್ಯಾದಿಯಾಗಿ ಯಾವ ಆದಿತ್ಯಜ್ಯೋತಿಯು ಪ್ರಶಂಸಿತವಾಗಿದೆಯೋ ಅದೇ ಜ್ಯೋತಿಯು **ಗಾಯತ್ರೀ** ಮಂತ್ರದಲ್ಲಿ ಸ್ತುತವಾಗಿದೆ. ವಿಶ್ವಾತ್ಮನಾದ ಸವಿತೃವನ್ನು ಸ್ತುತಿಸಿ ಆ ಸವಿತೃವಿನ ಸಾಕ್ಷಾತ್ಕಾರಕ್ಕೆ ಧ್ಯಾನರೂಪದಲ್ಲಿ ಈ ಮಂತ್ರವು ಸಾಧಕವಾಗಿದೆ. ಈ ದಿವ್ಯಜ್ಯೋತಿಯನ್ನೇ ಪರಬ್ರಹ್ಮತತ್ತ್ವವೆಂದು ಉಪನಿಷತ್ತುಗಳು ಪ್ರಶಂಸಿಸಿವೆ. " ಯಾವ ಮಹಾತತ್ತ್ವವನ್ನರಿತರೆ ಉಳಿದ ಸಕಲತತ್ತ್ವಗಳ ಅರಿವೂ ಉಂಟಾಗುವುದೋ "[1] ಆ ಮಹಾತತ್ತ್ವವೇ ಈ ದಿವ್ಯಜ್ಯೋತಿ.

---

1 **ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತೀತಿ ||**
**(ಮು. ಉ. ೧.೧.೩.)**

ಆದರೆ, ಸವಿತೃವೇ ಪರಬ್ರಹ್ಮತತ್ತ್ವಪ್ರತಿಪಾದಕವಾದ ದೇವತೆಯೆಂಬುದು ಹೇಗೆ? ಸವಿತೃವಿನ ಭರ್ಗವೇ ಪರಮಪುರುಷನ ಪರಂಜ್ಯೋತೀಸ್ವರೂಪವೇ? ಈ ಪರಂಜ್ಯೋತಿಯನ್ನರಿಯಲು ಗಾಯತ್ರೀ ರೂಪವಾದ ಧ್ಯಾನವೇ ಮುಖ್ಯಸಾಧನವೆಂಬುದು ಹೇಗೆ? ಕೇವಲ ಛಂದೋರೂಪಿಯಾದ ಗಾಯತ್ರಿಯನ್ನೇ ಪರಬ್ರಹ್ಮಾಖ್ಯವಾದ ಪರತತ್ತ್ವವೆಂದು ಕರೆಯುವುದರಲ್ಲಿ ಔಚಿತ್ಯವಿದೆಯೇ ಎಂಬಿವೇ ಮುಂತಾದ ಪ್ರಶ್ನೆಗಳು ಸಹಜವಾಗಿರುವುದರಿಂದ ಈ ವಿಷಯಗಳನ್ನು ಮುಂದಿನ ಪ್ರಕರಣದಲ್ಲಿ ವಿಮರ್ಶಿಸಲಾಗುತ್ತೆ.



# ಪರಮಪುರುಷಾರ್ಥಸಾಧನ.

## (ಸಾವಿತ್ರೀ—ಗಾಯತ್ರೀ)

"**ತತ್ಸವಿತುರ್ವರೇಣ್ಯಂ**" ಎಂಬುದು ಜಗತ್ಪ್ರಸಿದ್ಧವಾದ ಗಾಯತ್ರೀ ಮಹಾಮಂತ್ರ. ಇದು **ಸವಿತೃ** ದೇವತಾಕ. ಆದ್ದರಿಂದಲೇ ಇದಕ್ಕೆ **ಸಾವಿತ್ರೀ** ಎಂಬ ಹೆಸರೂ ಪ್ರಸಿದ್ಧವಾಗಿದೆ. "**ಗಾಯತ್ರೀಮೇವ ಸಾವಿತ್ರೀಮನುಬ್ರೂಯಾತ್**" (ಬೃ. ಉ. ೫.೧೪.೫) ಎಂಬ ಉಪನಿಷನ್ಮಂತ್ರವು ಇದನ್ನು ಸ್ಪಷ್ಟಪಡಿಸುತ್ತದೆ.

"**ಸವಿತೃ**" ಶಬ್ದಕ್ಕೆ ಸರ್ವಾಂತರ್ಯಾಮಿಯೂ ಜಗತ್ಪ್ರೇರಕನೂ ಜಗತ್ಸ್ರಷ್ಟೃವೂ ಆದ ಪರಮೇಶ್ವರನೆಂದರ್ಥ. ಪರಬ್ರಹ್ಮವೇ ಈಮಂತ್ರಕ್ಕೆ ಉಪಾಸ್ಯದೇವತೆ. ಪರಬ್ರಹ್ಮಾತ್ಮಕವಾದ ತೇಜಸ್ಸೇ **ಭರ್ಗ** ಶಬ್ದಾರ್ಥ. ಅವಿದ್ಯೆ ಮತ್ತು ತತ್ಪರಿಣಾಮವಾದ ದುಷ್ಕೃತಿಗಳನ್ನು ನಾಶಮಾಡುವುದರಿಂದ ಈ ತೇಜಸ್ಸಿಗೆ ಭರ್ಗವೆಂಬ ಅನ್ವರ್ಥನಾಮವು ಪ್ರಸಿದ್ಧವಾಗಿದೆ. ಇದು ಸಕಲರಿಗೂ ಉಪಾಸ್ಯವೂ ಪೂಜ್ಯವೂ ಆಗಿರುವುದರಿಂದ "**ವರೇಣ್ಯಂ**" ಎಂಬ ವಿಶೇಷಣವು ಯುಕ್ತವಾಗಿದೆ. "**ಧೀ**" ಶಬ್ದಕ್ಕೆ **ಬುದ್ಧಿ**ಯೆಂದರ್ಥ. ಅಜ್ಞಾನ ನಾಶಕವೂ, ಪರಬ್ರಹ್ಮಾತ್ಮಕವೂ ಆದ ತೇಜಸ್ಸನ್ನು ಧ್ಯಾನ ಮಾಡೋಣ ಮತ್ತು ಆ ರೀತಿ ಧ್ಯಾನಮಾಡುವಂತೆ ಸವಿತೃವು ನಮ್ಮನ್ನು ಪ್ರೇರಿಸಲಿ ಎಂಬುದೇ ಮಂತ್ರದ ತಾತ್ಪರ್ಯ. ಇಲ್ಲಿ ಎರಡು ವಿಧವಾದ ಆಕ್ಷೇಪಕ್ಕೆ ಅವಕಾಶವಿದೆ.

ಮೊದಲನೆಯದಾಗಿ, ಪರಬ್ರಹ್ಮವು ಈ ಮಂತ್ರಕ್ಕೆ ಉಪಾಸ್ಯ ದೇವತೆಯಲ್ಲ ಎಂಬುದು. ಬ್ರಹ್ಮಸೂತ್ರಾದಿಗಳಲ್ಲಿ ಈ ಆಕ್ಷೇಪಕ್ಕೆ ಸಮಾಧಾನವನ್ನು ತಿಳಿಸಿದೆ.

ಯಾವ ಜ್ಯೋತಿಯನ್ನು ಉಪಾಸಿಸಬೇಕೋ ಅದು ಪರತತ್ತ್ವರೂಪವಾದ ಪರಂಜ್ಯೋತಿಯಲ್ಲ. "ಯದತಃ ಪರೋ ದಿವೋ ಜ್ಯೋತಿಃ" (ಛಾ. ಉ. ೩.೧೩.೭.) ಇತ್ಯಾದ್ಯುಪನಿಷದ್ವಾಕ್ಯಗಳು ಈ ಜ್ಯೋತಿಯ ಎಲ್ಲೆಕಟ್ಟನ್ನು ತೋರಿಸುತ್ತವೆ. ವಿಶ್ವವ್ಯಾಪಕವೂ, ಅನಂತವೂ ಆದ ದಿವ್ಯ ಜ್ಯೋತಿಯು ಇಲ್ಲಿ ಉಕ್ತವಾಗಿಲ್ಲ ಎಂಬ ಪೂರ್ವಪಕ್ಷಕ್ಕೆ "ತಾವಾನಸ್ಯ ಮಹಿಮಾ" (ಛಾ. ಉ. ೩.೧೨.೬.) ಇತ್ಯಾದಿ ವಾಕ್ಯಗಳನ್ನು ಉದಾ

ಹರಿಸಿ ಪೂರ್ವಪಕ್ಷವನ್ನು ಖಂಡಿಸಿ ಇಲ್ಲಿ ಹೇಳಿರುವುದು "ಪರಂಜ್ಯೋತಿಯಲ್ಲದೆ ಬೇರೆಯಲ್ಲ" ಎಂದು ಸಿದ್ಧಾಂತವನ್ನು ಸಮರ್ಥಿಸಿದೆ.

ಎರಡನೆಯದಾಗಿ, ಸವಿತೃವು ಋಕ್ಸಂಹಿತೆಯ ದೇವತಾಪಂಕ್ತಿಯಲ್ಲಿ ಬಹಳ ಈಚೀನದೇವತೆ. ಅಲ್ಲದೆ, ಆದಿತ್ಯ, ಅಗ್ನಿ, ಇಂದ್ರ ಇತ್ಯಾದಿ ದೇವತೆಗಳಿಗಿಂತಲೂ ಭಿನ್ನರೂಪವುಳ್ಳ ಪ್ರತ್ಯೇಕವಾದ ದೇವತೆ. ಋಕ್ಸಂಹಿತೆಯನ್ನು ರಚಿಸಿದ ಋಷಿಗಳಿಗೆ ಸವಿತೃದೇವತಾತ್ಮಕವಾದ ಭಾವನೆಯು ಬಂದುದು ಬಹಳ ಕಾಲದನಂತರ. ಸೃಷ್ಟಿವೈಚಿತ್ರ್ಯದ ಗಭೀರತೆಯನ್ನರಿತು ತದನಂತರ ಆ ತತ್ತ್ವವನ್ನು ಪ್ರತಿಬಿಂಬಿಸಲು ಸವಿತೃನಾಮಕವಾದ ದೇವತಾವಿಶೇಷದ ಭಾವನೆಯು ಅವರಲ್ಲಿ ಬೆಳೆಯಿತು ಎಂಬುದೇ ತಾತ್ಪರ್ಯ.[1] ಈ ಅಭಿಪ್ರಾಯವು ಸಾಧುವಾದುದಲ್ಲ.

"ದೇವಸ್ತ್ವಷ್ಟಾ ಸವಿತಾ ವಿಶ್ವರೂಪಃ"

(ಋ. ಸಂ. ३.೫೫.೧೯.)

"ಗರ್ಭೇ ನು ನೌ ಜನಿತಾ ದಂಪತೀ ಕರ್ದೇವಸ್ತ್ವಷ್ಟಾ ಸವಿತಾ ವಿಶ್ವರೂಪಃ" (೧೦.೧೦.೫), ಇತ್ಯಾದಿ ವಾಕ್ಯಗಳಿಂದ ಸೃಷ್ಟಿಕರ್ತನೂ ಜಗತ್ಪ್ರೇರಕನೂ ಆದ ಪ್ರಜಾಪತಿಯೇ ನಾಮಭೇದದಿಂದಲೂ ಕ್ರಿಯಾಭೇದದಿಂದಲೂ ವೈವಿಧ್ಯವನ್ನು ತೋರಿಸುತ್ತ ಮೂಲತಃ ಎಲ್ಲಕ್ಕೂ ಒಂದೇ ತತ್ತ್ವವೆಂದು ವರ್ಣಿತನಾಗಿದ್ದಾನೆ. ಆದಿತ್ಯ, ವರುಣ, ಸೂರ್ಯ, ಇಂದ್ರ ಇತ್ಯಾದಿ ದೇವತೆಗಳಿಗಿಂತಲೂ ಭಿನ್ನರೂಪವುಳ್ಳ ಪ್ರತ್ಯೇಕವಾದ ಸವಿತೃದೇವತಾಕವಾದ ದೇವತೆಯೊಂದು ಮೂರ್ತ್ತರೂಪವನ್ನು ಹೊಂದಿ ವರ್ಣಿತವಾಗಿದೆಯೆಂಬ ಅಭಿಪ್ರಾಯವು ತಪ್ಪಾಗುತ್ತದೆ. ಜಗತ್ಸೃಷ್ಟಿ, ಜಗದ್ವ್ಯವಹಾರಕ್ಕೆ ಪ್ರಚೋದನ, ವ್ಯವಹಾರದ ನಿಯತಿ ಇತ್ಯಾದಿ ಸಕಲ ವ್ಯಾಪಾರಗಳೂ ಸವಿತೃ ಸಂಬಂಧವಾದುದು. ಈ ಸವಿತೃವೇ ಆದಿತ್ಯನು. ಆದಿತ್ಯಾಂತರ್ಗತನಾದ ಪರಮಪುರುಷ.

ಸವಿತೃ ಶಬ್ದಕ್ಕೆ ಮೂಲವಾದ ಸೂ ಧಾತುವಿಗೆ (೧) ಷೂ ಪ್ರೇರಣೇ. (೨) ಷೂಙ್ ಪ್ರಾಣಿಗರ್ಭ ವಿಮೋಚನೇ ಎಂಬ ಅರ್ಥಭೇದಗಳಿವೆ. ಸೃಜಿಸು ಎಂಬರ್ಥದಲ್ಲೂ ಪ್ರೇರಿಸು ಎಂಬರ್ಥದಲ್ಲೂ ಮತ್ತು (ಹವಿರಾದಿಗಳನ್ನೂ) ಸುರಿಸು ಎಂಬರ್ಥದಲ್ಲೂ ಈ ಧಾತುವಿನಿಂದ ನಿಷ್ಪನ್ನವಾದ ಪದಗಳ ಪ್ರಯೋಗವಿರುತ್ತದೆ. ಸಾಯಣರು ಈ ಶಬ್ದಕ್ಕೆ ಈ ಎಲ್ಲ ಅರ್ಥ

---

1. Oldenberg.

ಗಳಲ್ಲೂ ಆಯಾ ಸಂದರ್ಭಕ್ಕೆ ಅನುಸಾರವಾಗಿ ವಿವರಣೆಯನ್ನು ಹೇಳಿದ್ದಾರೆ.

ಸವಿತೃವು ಸೃಷ್ಟಿ ಸ್ಥಿತಿನಿಯಮಗಳಿಗೆಲ್ಲ ಪ್ರಭುವೆಂದು ಋಕ್ಸಂಹಿತಾ ವಾಕ್ಯಗಳು ಸ್ಪಷ್ಟವಾಗಿ ತಿಳಿಸುತ್ತವೆ.

ತತ್ಸವಿತಾ ವೋಽಮೃತತ್ವಮಾಸುವದಗೋಹ್ಯಂ ಯಚ್ಛ್ರವ
ಯಂತ ಐತನ ।

ತ್ಯಂ ಚಿಚ್ಚಮಸಮಸುರಸ್ಯ ಭಕ್ಷಣಮೇಕಂ ಸಂತಮ
ಕೃಣುತಾ ಚತುರ್ವಯಂ ॥

(ಋ. ಸಂ. ೧.೧೧೦.೩.)

ಸವಿತೃವಿನ ಅನುಗ್ರಹದಿಂದ ಋಭುಗಳು ಪ್ರಥಮದಲ್ಲಿ ಒಂದೇ ಆದ ಚಮಸ ಪಾತ್ರೆಯನ್ನು ನಾಲ್ಕು ಆಗುವಂತೆ ಮಾಡಿದರು ಎಂಬ ಕಾರ್ಯವು ಜಗತ್ತಿನ ಆದಿಸೃಷ್ಟಿಗೆ ಸಂಬಂಧಿಸಿದುದೆಂದು ಹೇಳಬೇಕು.

ಮೇಲಿನ ಉದಾಹರಣೆಯಲ್ಲಿ ಆದಿತ್ಯನಿಗೂ ಜಗತ್ಸೃಷ್ಟಿಗೂ ಸಂಬಂಧ ವನ್ನು ತೋರಿಸಿ ಅದರಲ್ಲಿ ಋಭುಗಳ ಪಾತ್ರವೇನು ಎಂಬುದನ್ನುಸೂಚಿಸಿದೆ. "ಅಸುರಸ್ಯ ಭಕ್ಷಣಂ" "ಏಕಂ ಸಂತಂ ಪಾತ್ರಂ" ಎಂದು ವರ್ಣಿತ ವಾಗಿರುವುದು ಸೂರ್ಯಮಂಡಲವಲ್ಲದೆ ಬೇರೆಯಲ್ಲವೆಂದು ಹೇಳಲು ಅನೇಕ ಆಧಾರಗಳಿವೆ. ಸೃಷ್ಟಿರೂಪದಲ್ಲಿ ವಿಭಕ್ತವಾಗುವುದಕ್ಕೆ ಮೊದಲು ಸೂರ್ಯ, ಚಂದ್ರ, ದ್ಯೌಃ, ಪೃಥ್ವೀ ಎಂಬ ನಾಲ್ಕು ತತ್ತ್ವಗಳೂ ಸಂಹೃತವಾಗಿ ಒಂದೇ ಮೂಲತತ್ತ್ವವಾಗಿದ್ದವು. ಈ ಐಕ್ಯವು ಸೃಷ್ಟಿಗೆ ಪೂರ್ವ ಹೇಗೋ ಹಾಗೆಯೇ ಪ್ರಳಯಕಾಲದಲ್ಲೂ ಇರುತ್ತದೆ. ಈ ಸನ್ನಿವೇಶದಲ್ಲಿ ಸತ್ಯದ ಎರಡು ಸ್ವರೂಪಗಳ ವರ್ಣನೆಯನ್ನು ನೋಡಬೇಕು.

(೧) ಮೊದಲನೆಯದಾಗಿ, ಸವಿತೃ ಮತ್ತು ಅವನ ಅಗೋಹ್ಯವಾದ ಚಮಸ; ಅಥವಾ ಅಗೋಹ್ಯನಾದ ಸವಿತೃವಿನ ಚಮಸ. [ಚಮಸ... ಯಸ್ಮಿನ್ ಯಶೋ ನಿಹಿತಂ ವಿಶ್ವರೂಪಂ. ಅ. ವೇ. ೧೦.೮.೯.]

(೨) ಎರಡನೆಯದಾಗಿ, ಹಿರಣ್ಮಯಪಾತ್ರದಿಂದ ಮುಚ್ಚಲ್ಪಟ್ಟ ಸತ್ಯದ ಪ್ರವೇಶದ್ವಾರ. [ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ. ಈಶ. ೧೫].

ಚಮಸವೆಂದು ಪ್ರಸಿದ್ಧವಾದ ಆದಿತ್ಯನ ಹಿರಣ್ಮಯ ಪಾತ್ರವೇ ಯಜ್ಞಪಾತ್ರೆಯಾದ ಚಮಸಕ್ಕೂ ಮಾದರಿಯಾಗಿದೆ. ಇಲ್ಲಿ ಮೂಲರೂಪವಾದ ಏಕತತ್ತ್ವವಾವುದು, ನಾಲ್ಕು ಭಾಗಗಳ ಸ್ವರೂಪವೇನು ಎಂಬುದನ್ನು ತಿಳಿಯಬೇಕು.

ತ್ವಷ್ಟೃವಿನ ಏಕಾತ್ಮಕವಾದ ಚಮಸವೇ ಆದಿತ್ಯ. ಈ ಆದಿತ್ಯನ ಮೂಲಕವೇ ತ್ವಷ್ಟೃವು ಸಕಲಲೋಕಗಳನ್ನು ವೀಕ್ಷಿಸುತ್ತಲೂ ರಚಿಸುತ್ತಲೂ ಇರುತ್ತಾನೆ. ಒಂದೇ ಆಗಿರುವ ಆದಿತ್ಯತತ್ತ್ವವನ್ನು ಋಭುಗಳು ನಾಲ್ಕು ಭಾಗಗಳನ್ನಾಗಿ ವಿಂಗಡಿಸಿದರು ಎಂದರೆ ಅಹೋರಾತ್ರಗಳನ್ನು ವಿಭಾಗ ಮಾಡುತ್ತಾ ಪೂರ್ವದಿಂದ ಪಶ್ಚಿಮಕ್ಕೆ ಹೋಗುವಾಗ ಪೂರ್ವ ಮತ್ತು ಪಶ್ಚಿಮ ಇವೆರಡೂ ಆದಿತ್ಯನ ಎರಡು ಸ್ಥಾನಗಳು. ಸಂವತ್ಸರದ ಎರಡು ವಿಭಾಗಗಳಲ್ಲಿ ದಕ್ಷಿಣ ಮತ್ತು ಉತ್ತರ [ದಕ್ಷಿಣಾಯನ, ಉತ್ತರಾಯಣ] ಈ ಎರಡು ಸ್ಥಾನಗಳು. ಹೀಗೆ ಸೂರ್ಯನ ನಾಲ್ಕು ಸ್ಥಾನಗಳೆಂದರೆ ಪೂರ್ವ, ಪಶ್ಚಿಮ, ದಕ್ಷಿಣ ಮತ್ತು ಉತ್ತರ. ಇದನ್ನೇ ಪಂಚವಿಂಶಬ್ರಾಹ್ಮಣದಲ್ಲಿ ಚತಸ್ರೋದಿಶಃ ಎಂದು ವರ್ಣಿಸಿದೆ (15.3.25.) " ತ್ವಷ್ಟಾ ಯದ್ವಜ್ರಂ ಸುಕೃತೇ ಹಿರಣ್ಯಯಂ " [ಋ. ಸ. ೧.೮೫.೯] ಎಂಬ ವಾಕ್ಯದಲ್ಲಿ ಯಾವ ವಜ್ರಾಯುಧವನ್ನು ತ್ವಷ್ಟೃವು ಇಂದ್ರನಿಗೆ ಕೊಟ್ಟನು ಎಂದು ವರ್ಣಿತವಾಗಿದೆಯೋ ಆ ಆಯುಧವೇ ಈ ಪಾತ್ರವೆಂದು ಹೇಳಿದರೂ ಹೇಳಬಹುದು. ಹೇಗೆಂದರೆ,

ಇಂದ್ರೋ ಹ ಯತ್ರ ವೃತ್ರಾಯ ವಜ್ರಂ ಪ್ರ ಜಹಾರ ।
ಸ ಪ್ರಹತಶ್ಚತುರ್ಧಾ ಅಭವತ್ ॥

[ಶ. ಬ್ರಾ. ೧೨.೪.೧]

ತ್ವಷ್ಟೃವಿನಿಂದ ದತ್ತವಾದ ವಜ್ರವನ್ನು ಇಂದ್ರನು ವೃತ್ರನ ಮೇಲೆ ಪ್ರಯೋಗಿಸಿದಾಗ ಅದು ನಾಲ್ಕು ಭಾಗವುಳ್ಳದ್ದಾಯಿತು. ಇತ್ಯಾದಿ ವಾಕ್ಯಗಳು ಈ ತಾತ್ಪರ್ಯವನ್ನು ಸಮರ್ಥಿಸುತ್ತವೆ.

ನಿರುಕ್ತಕಾರರ ನಿರ್ವಚನವೂ ಮೇಲೆ ಹೇಳಿರುವ ತಾತ್ಪರ್ಯವನ್ನು ಸಮರ್ಥಿಸುತ್ತದೆ. ಹೇಗೆಂದರೆ,

ಉರು ಭಾಂತೀತಿ ವಾ ಋತೇನ ಭಾಂತೀತಿ ವಾ;
ಋತೇನ ಭವಂತೀತಿ ವಾ ।

ಅಧಿಕವಾಗಿ ಪ್ರಕಾಶಿಸುವವರು ಎಂದಾಗ ಸತ್ಯದಿಂದ ಪ್ರಕಾಶಿಸುವವರು ಎಂದಾಗಲಿ, ಸತ್ವ ಅಥವಾ ಸಾಮರ್ಥ್ಯ ಇದರಿಂದ ಪ್ರಕಾಶಿಸುವವರು ಎಂಬುದರಿಂದಾಗಲಿ ಋಭುಗಳು ಎಂಬ ಹೆಸರು ಪ್ರಸಿದ್ಧವಾಗಿದೆಯೆಂದು ನಿರುಕ್ತಕಾರರ ವಿವರಣೆಯಿದೆ. ಇದೇ ಅರ್ಥವನ್ನೇ ವಿಸ್ತರಿಸುತ್ತ "ಆದಿತ್ಯರಶ್ಮಯೋऽಪ್ಯೃಭವ ಉಚ್ಯಂತೇ" ಆದಿತ್ಯರಶ್ಮಿಗಳಿಗೂ ಋಭುಗಳೆಂದು ಹೆಸರು ಎಂದೂ ತೋರಿಸಿದ್ದಾರೆ.

ಆದ್ದರಿಂದ, ಒಂದು, ನಾಲ್ಕು ಎಂಬ ಪ್ರಭೇದಗಳಿಗೆ ಆದಿತ್ಯತತ್ತ್ವವೇ ಆಧಾರ. ಕಾರಣಾವಸ್ಥೆಯಲ್ಲಿರುವ ಆದಿತ್ಯಮಂಡಲವು ವಿಭಕ್ತವಾಗಿರದೇ ಏಕತತ್ತ್ವಪ್ರತಿಪಾದಕವಾಗಿರುತ್ತದೆ. ಕಾರ್ಯಾವಸ್ಥೆಯಲ್ಲಿ ರಶ್ಮ್ಯಾದಿಗಳ ದ್ವಾರಾ ಚಲಿಸುವಾಗ ಕಾಲ ದೇಶಾದಿಗಳ ಪ್ರಭೇದಗಳಿಗೆ ಕಾರಣವಾಗುತ್ತದೆ. ಈ ಪ್ರಭೇದಗಳಿಗೆ ಕಾರಣವಾದ ರಶ್ಮಿತತ್ತ್ವವೇ ಋಭ್ವಾತ್ಮಕಗಳು, ಎಂದು ಮೇಲೆ ಉದಾಹರಿಸಿರುವ ಶ್ರುತಿವಾಕ್ಯಗಳ ಆಧಾರದ ಮೇಲೆ ತಾತ್ಪರ್ಯವನ್ನು ಹೇಳಿದರೆ ತಪ್ಪಾಗಲಾರದು. ಈ ತಾತ್ಪರ್ಯವನ್ನು ಸಮರ್ಥಿಸುವ ಶ್ರುತಿವಾಕ್ಯಗಳು ಇನ್ನೂ ಹೇರಳವಾಗಿದೆ. ಅವುಗಳಲ್ಲಿ ಕೆಲವು ಋಭುಗಳಿಗೂ, ಆದಿತ್ಯರಶ್ಮಿಗಳಿಗೂ ಇರುವ ತಾದಾತ್ಮ್ಯವನ್ನು ಸ್ಪಷ್ಟವಾಗಿಯೇ ತಿಳಿಸುತ್ತವೆ. ಉದಾಹರಣೆಗೆ—

ಉದ್ವತ್ಸ್ವಸ್ಮಾ ಅಕೃಣೋತನಾ ತೃಣಂ ನಿವತ್ಸ್ವಪಃ
ಸ್ವಪಸ್ಯಯಾ ನರಃ ।
ಅಗೋಹ್ಯಸ್ಯ ಯದಸಸ್ತನಾ ಗೃಹೇ ತದದ್ಯೇದಮೃಭವೋ
ನಾನು ಗಚ್ಛಥ ॥

[ಋ. ಸಂ. ೧.೧೬೧.೧೧.]

ಸೂರ್ಯರಶ್ಮಿಗಳ ರೂಪದಲ್ಲಿರುವ ಋಭುಗಳು ವೃಷ್ಟ್ಯಾದಿಗಳಿಗೆಲ್ಲ ನೇತೃಗಳು, ಸಸ್ಯಾದಿಗಳ ಪೋಷಕರು. ಆದಿತ್ಯನ ವಾಸಸ್ಥಾನದಲ್ಲಿ ಆಶ್ರಯವನ್ನು ಪಡೆಯುವವರು ಇತ್ಯಾದಿಯಾದ ವರ್ಣನೆಗಳು ಆದಿತ್ಯರಶ್ಮಿಗಳನ್ನಲ್ಲದೇ ಬೇರೆ ವಸ್ತುವನ್ನು ತಿಳಿಸುವಂತಿಲ್ಲ. "ಸಂಮೀಲ್ಯ ಯದ್ಭುವನಾಪರ್ಯಸರ್ಪತ........" [೧.೧೬೧.೧೨.] ಇತ್ಯಾದ್ಯನೇಕ ವಾಕ್ಯಗಳು ಈ ತಾತ್ಪರ್ಯವನ್ನೇ ಸಮರ್ಥಿಸುತ್ತವೆ.

" ಸೌಧನ್ವನಾ ಋಭವಃ ಸೂರಚಕ್ಷಸಃ "(೧.೧೧೦.೪.]

" ತರಣಿತ್ವಾ ಯೇ ಪಿತುರಸ್ಯ ಸಶ್ಚಿರ ಋಭವಃ [೧.೧೧೦.೬]

ಇತ್ಯಾದಿ ವರ್ಣನೆಗಳು ಆದಿತ್ಯನಿಗೂ ಋಭುಗಳಿಗೂ ಇರುವ ಅಭೇದವನ್ನೂ ತಿಳಿಸುತ್ತವೆ. ಋಭುಗಳೇ ಸೂರ್ಯಚಕ್ಷುಸ್ಸು. ತಮ್ಮ ಪಿತೃವಾದ ಆದಿತ್ಯನಿಂದ ಅವನ ಸಂಚಾರವೇಗವನ್ನು ಪಡೆದರು ಇತ್ಯಾದಿಯಾಗಿ ಋಭುಗಳಿಗಿರುವ ಆದಿತ್ಯಸಂಬಂಧ, ಆದಿತ್ಯಸ್ವರೂಪ ಇವುಗಳನ್ನು ವರ್ಣಿಸಿದೆ.

ಸವಿತೃರೂಪನಾದ ಆದಿತ್ಯನ ಅನುಗ್ರಹವೇ ಋಭುಗಳ ನಿರ್ಮಾಣ ಕಾರ್ಯಕ್ಕೆ ಪ್ರೇರಕವೆಂಬುದು ಸ್ಪಷ್ಟವಾದ ವಿಷಯ. ಅಮರ್ತ್ಯವೂ ಅನಂತವೂ ಆದ ವಿಶ್ವತತ್ತ್ವವನ್ನು ಮರ್ತ್ಯರೂಪಕ್ಕೆ ತಂದು ಸಾಂತವಾದುದನ್ನಾಗಿ ಮಾಡುವುದು ಸೃಷ್ಟಿಕಾರ್ಯ. ಈ ರೀತಿ ಪರಿಚ್ಛಿನ್ನವಾದುದನ್ನಾಗಿಮಾಡುವ ಕಾರ್ಯವು ಧರ್ಮದ ನಿಯಾಮಕನಾದ ಸವಿತೃ ಅಥವಾ ಸೂರ್ಯದೇವತೆಗೆ ಸಂಬಂಧಿಸಿದುದಾಗಿದೆ.

ಯಃ ಪಾರ್ಥಿವಾನಿ ವಿಮಮೇ ಸ ಏತಶೋ ರಜಾಂಸಿ ದೇವಃ
ಸವಿತಾ ಮಹಿತ್ವನಾ ।
(ಋ. ಸ. ೫.೮೧.೩.)

ಮಾನೇನೇವ ತಸ್ಥಿವಾನ್ ಅಂತರಿಕ್ಷೇ ವಿ ಯೋ ಮಮೇ ಪೃಥಿವೀಂ
ಸೂರ್ಯೇಣ ।

ಎಂಬಲ್ಲೆಲ್ಲ ಪ್ರಯುಕ್ತವಾಗಿರುವ " ವಿ " ಉಪಸರ್ಗಪೂರ್ವಕವಾದ 'ಮಾ' ಧಾತುವಿನ ಪ್ರಯೋಗವು ಸೂರ್ಯರೂಪನಾದ ಸವಿತೃವಿನ ಅಥವಾ ಸವಿತೃರೂಪನಾದ ಸೂರ್ಯನ ಪರಿಚ್ಛೇದಕ (ನಿಯಾಮಕ) ಕಾರ್ಯವನ್ನು ಸೂಚಿಸುತ್ತದೆ. ಅಮೂರ್ತರೂಪದಲ್ಲಿದ್ದ ತ್ರಿಲೋಕಗಳನ್ನೂ ಮೂರ್ತ್ತರೂಪಕ್ಕೆ ತಂದುದು ಸವಿತೃವಿನ ಕಾರ್ಯ.

ಮೇಲೆ ಉದಾಹೃತವಾಗಿರುವ ೧.೧೧೦.೩ ನೇ ಋಕ್ಕಿನಲ್ಲಿರುವಂತೆ ಅಥರ್ವಸಂಹಿತೆಯಲ್ಲಿಯೂ ಸಹ,

ಚಮಸ ಯಸ್ಮಿನ್ ಯಶೋ ನಿಹಿತಂ ವಿಶ್ವರೂಪಂ,
(ಅ. ವೇ. ೧೦.೮.೯.)

ಎಂಬ ವರ್ಣನೆಯಿದೆ. ಈ ವರ್ಣನವು ಈಶಾವಾಸ್ಯೋಪನಿಷತ್ತಿನಲ್ಲಿ

ಉಕ್ತವಾಗಿರುವ

ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ ।

(ಈಶ. ೧೫.)

ಎಂಬ ವರ್ಣನವೇ ಆಗಿದೆ. ಈಶಾವಾಸ್ಯದ ಈ ಮಂತ್ರದಲ್ಲಿ ಸಂಬೋಧಿಸಲ್ಪಟ್ಟಿರುವ ಪೂಷಶಬ್ದಕ್ಕೆ ಸೂರ್ಯನೆಂದರ್ಥ. ಹಿರಣ್ಮಯವಾದ ಪಾತ್ರೆಯಿಂದ ಮರೆಯಾಗಿರುವ ಆದಿತ್ಯಮಂಡಲದ ಸತ್ಯಬ್ರಹ್ಮದ ಮುಖವನ್ನು ತೆರೆಯುವವನಾಗು ಎಂದು ಇಲ್ಲಿ ಪ್ರಾರ್ಥಿಸಿದೆ. ಮುಚ್ಚಲ್ಪಟ್ಟು ಅಗೋಹ್ಯವೂ ಅಗೋಚರವೂ ಆದುದೂ ಐಕಾತ್ಮ್ಯವನ್ನು ಹೊಂದಿ ಅಮೂರ್ತವಾಗಿರತಕ್ಕದ್ದೂ ಆದ ಸತ್ಯವನ್ನು ಮೂರ್ತರೂಪದ್ದನ್ನಾಗಿ ಮಾಡಿ ಜಗತ್ತಿನ ಗೋಚರಕ್ಕೆ ಅನುಕೂಲವಾಗುವಂತೆ ವೈವಿಧ್ಯವನ್ನುಂಟುಮಾಡಿದರು ಎಂದು ಋಕ್ಸಂಹಿತೆಯಲ್ಲಿ ವರ್ಣಿಸಿದೆ.[1] ಆದಿತ್ಯರೂಪನಾದ ಸವಿತೃವಿನ ಅಂತೇವಾಸಿಗಳಾದ ಋಭುಗಳೂ ಆದಿತ್ಯರಶ್ಮಿಗಳೇ[2]. ಎಲ್ಲವೂ ಆದಿತ್ಯನಲ್ಲೇ ಅಂತರ್ಗತವಾದವೆಂದು ತಾತ್ಪರ್ಯ. ವಿಶ್ವನಿಯಮನ, ವಿಶ್ವಪಾಲನ ಇತ್ಯಾದಿ ವ್ಯಾಪಾರಗಳೆಲ್ಲವೂ ಸವಿತೃರೂಪಿಯಾದ ಆದಿತ್ಯನ ಕಾರ್ಯ ಎಂಬುದು "ನ ಪ್ರಮಿಯೇ ಸವಿತುಃ"[3] ಇತ್ಯಾದಿ ಮಂತ್ರಗಳಲ್ಲಿ ಸ್ಪಷ್ಟವಾಗಿ ತಿಳಿಸಿದೆ.

ಋತಾಧ್ಯಕ್ಷನಾದ ವರುಣನೂ ಸವಿತೃವಿನ ವಿಭೂತಿ ವಿಶೇಷವಲ್ಲದೆ ಬೇರೆಯಲ್ಲ. "ಸವಿತೃವು ಸತ್ಯಧರ್ಮಾತ್ಮಕನು.[4] ಸ್ಥಾವರಜಂಗಮಾತ್ಮಕವಾದ ಸಕಲಲೋಕಕ್ಕೂ ಒಡೆಯನು.[5] ಸೂಕ್ಷ್ಮವಾದ ವಸ್ತುವಾಗಲಿ,

---

1 ಆದಿತ್ಯ ಎಂಬುದಕ್ಕೆ ಪರ್ಯಾಯವಾಗಿ ಅಗೋಹ್ಯ ಎಂಬ ಪದದ ಪ್ರಯೋಗವು ಅನೇಕ ಕಡೆಗಳಲ್ಲಿರುತ್ತದೆ. ಉದಾಹರಣೆಗೆ ಋ. ಸ. ೧.೧೬೧.೧೧

2 ಐ. ಬ್ರಾ. ೩.೩೦.

3 ಋ. ಸಂ. ೪.೫೪.೪

4 " ಸವಿತಾ ಸತ್ಯಧರ್ಮಾ " (೧೦.೩೪.೮)

5 ಬೃಹತ್ಸುಮ್ನಃ ಪ್ರಸವೀತಾ ನಿವೇಶನೋ ಜಗತಃ
ಸ್ಥಾತುರುಭಯಸ್ಯ ಯೋ ವಶೀ "
(೪.೫೩.೬)

ಸ್ಥೂಲನಾದುದಾಗಲಿ ಇವನ ನಿಯಮನದಿಂದಲೇ ಚಲಿಸುತ್ತವೆ"[1] ಇತ್ಯಾದಿ ವರ್ಣನೆಗಳೆಲ್ಲವೂ ಋತಾಧ್ಯಕ್ಷನಾದ ವರುಣನ ವರ್ಣನೆಯಂತಿದೆ. ಆದ್ದರಿಂದ, ಸವಿತೃವಿಗೂ ವರುಣನಿಗೂ ವ್ಯತ್ಯಾಸವಿದೆಯೆ, ಇಬ್ಬರೂ ಭಿನ್ನ ದೇವತೆಗಳೇ, ಅಥವಾ ಒಂದೇ ತತ್ತ್ವದ ಎರಡು ಸ್ವರೂಪಗಳೇ ಅಥವಾ ಒಂದೇ ವಸ್ತುವು ಬೇರೆ ಬೇರೆ ಗುಣಗಳಿಂದ ವರ್ಣಿತವಾಗಿದೆಯೋ ಎಂಬುದನ್ನು ಪರಿಶೀಲಿಸಬೇಕು.

ಇವರಿಬ್ಬರ ಐಕ್ಯತೆಯನ್ನು ತಿಳಿಸಲು '**ಅಮತಿ**' ಮತ್ತು '**ಮಾಯಾ**' ಎಂಬ ಎರಡು ವಿಶೇಷಣಪದಗಳು ಸಾಧಕವಾಗಿವೆ. ಇವೆರಡೂ ಸಹ ಶಕ್ತಿ ಸೌಂದರ್ಯಗಳನ್ನು ತಿಳಿಸುವ ವಿಶೇಷಣಗಳಾಗಿವೆ. ಆದಿತ್ಯಾಂತರ್ಗತವಾದ ಹಿರಣ್ಮಯ ಪುರುಷನ ತೇಜಸ್ಸು ಯಾವ ಶೈಲಿಯಿಂದ ವರ್ಣಿತವಾಗಿದೆಯೋ ಇದೇ ರೀತಿ ಸವಿತೃ ಮತ್ತು ವರುಣರ ಶಕ್ತಿಸೌಂದರ್ಯಗಳೂ ವರ್ಣಿತವಾಗಿವೆ.

ಉದು ಷ್ಯ ದೇವಃ ಸವಿತಾ ಯಯಾಮ ಹಿರಣ್ಯಯೀಮಮತಿಂ
ಯಾಮಶಿಶ್ರೇತ್ ।
ನೂನಂ ಭಗೋ ಹವ್ಯೋ ಮಾನುಷೇಭಿರ್ವಿ ಯೋ ರತ್ನಾ
ಪುರೂವಸುರ್ದಧಾತಿ ॥
(ಋ. ಸಂ. ೭.೩೮.೧.)

ಎಂಬಲ್ಲಿ ಹಿರಣ್ಯರೂಪನಾದ ಸವಿತೃವಿನ ವರ್ಣನವೂ,

ಋತಸ್ಯ ಬುಧ್ನ ಉಷಸಾಮಿಷಣ್ಯನ್ವೃಷಾ ಮಹೀ ರೋದಸೀ
ಆ ವಿವೇಶ ।
ಮಹೀ ಮಿತ್ರಸ್ಯ ವರುಣಸ್ಯ ಮಾಯಾ ಚಂದ್ರೇವ ಭಾನುಂ
ವಿ ದಧೇ ಪುರುತ್ರಾ ॥
(ಋ. ಸಂ. ೩.೬೧.೭.)

---

1 ವಿಶ್ವಸ್ಯ ಹಿ ಶ್ರುಷ್ಟಯೇ ದೇವ ಊರ್ಧ್ವಃ ಪ್ರ ಬಾಹವಾ
ಪೃಥುಪಾಣಿಃ ಸಿಸರ್ತಿ ।
ಆಪಶ್ಚಿದಸ್ಯ ವ್ರತ ಆ ನಿಮೃಗ್ರಾ ಅಯಂ ಚಿದ್ವಾತೋ
ರಮತೇ ಪರಿಜ್ಮನ್ ॥
(೨.೩೮.೨.)

ಎಂಬಲ್ಲಿ ವರುಣನ ತೇಜಃಶಕ್ತಿವರ್ಣನವೂ ಒಂದೇ ರೀತಿಯುಳ್ಳದ್ದಾಗಿದೆ. ಈ ಎರಡು ವರ್ಣನಗಳೂ ಸವಿತೃ ಮತ್ತು ವರುಣನಾಮಾಂಕಿತವಾದ ಒಂದೇ ದಿವ್ಯತತ್ತ್ವದ ಅಪ್ರಾಕೃತವೂ ಅಲೌಕಿಕವೂ ಆದ ಪ್ರಭೆಯನ್ನೂ ದಿವ್ಯಶಕ್ತಿಯನ್ನೂ ತಿಳಿಸುತ್ತವೆ. ಮೊದಲನೆಯ ಉದಾಹರಣೆಯಲ್ಲಿ **ಅಮತಿ** ಶಬ್ದಕ್ಕೆ ದಿವ್ಯಪ್ರಭೆಯೆಂದರ್ಥಮಾಡಿರುವಂತೆಯೇ, ಎರಡನೆಯದರಲ್ಲಿ **ಮಾಯಾ** ಶಬ್ದಕ್ಕೂ ದಿವ್ಯಪ್ರಭೆಯೆಂದೇ ಅರ್ಥಮಾಡಿದೆ. ಅಮತಿ ಶಬ್ದಕ್ಕೆ ಹಿರಣ್ಯಯೀಂ ಎಂಬ ವಿಶೇಷಣವಿರುವಂತೆ ಮಾಯಾ ಶಬ್ದಕ್ಕೆ ಚಂದ್ರೇವ ಎಂಬ ಉಪಮಾನವಿದೆ. ಎರಡು ಪ್ರಭೆಗಳ ಸ್ವರೂಪವೂ ಒಂದೇ ಆಗಿದೆ.

ಋತೇನ ವಿಶ್ವಂ ಭುವನಂ ವಿ ರಾಜಥಃ ಸೂರ್ಯಮಾಧತ್ಥೋ
ದಿವಿ ಚಿತ್ರ್ಯಂ ರಥಂ । (೫.೬೩.೭)

ಮತ್ತು

ವಿಶ್ವಾ ರೂಪಾಣಿ ಪ್ರತಿ ಮುಂಚತೇ ಕವಿಃ ಪ್ರಾಸಾವೀದ್ಭದ್ರಂ
ದ್ವಿಪದೇ ಚತುಷ್ಪದೇ । (೫.೮೧.೨.)

ಇತ್ಯಾದಿ .ಸ್ಥಳಗಳಲ್ಲಿ ವಿಶ್ವಕೆಲ್ಲ ತಮ್ಮ ದಿವ್ಯಪ್ರಭೆಯನ್ನು ಹರಡಿ ಸಕಲ ವಿಶ್ವವನ್ನೂ ಆಕರ್ಷಕವಾಗುವಂತೆ ಮಾಡುವ ಶಕ್ತಿಯು ವರ್ಣಿತವಾಗಿದೆ. ಈ ಸೌವರ್ಣ (ಹೊಂಬಣ್ಣದ) ಪ್ರಭೆಯನ್ನು ವಿವರಿಸುವ "ಹಿರಣ್ಯಪಕ್ಷಂ ವರುಣಸ್ಯ ದೂತಂ"[1] ಎಂಬ ವರುಣನ ವರ್ಣನವೂ, "ಹಿರಣ್ಯಯೇನ ಸವಿತಾ ರಥೇನಾ ದೇವೋ ಯಾತಿ........"[2] ಇತ್ಯಾದಿ ಸವಿತೃವಿನ ವರ್ಣನವೂ ಇವರಿಬ್ಬರ ಅಭೇದರೂಪವನ್ನು ತಿಳಿಸುತ್ತದೆ. ಅಲ್ಲದೇ, ಸವಿತೃವನ್ನು ಆದಿತ್ಯರೂಪನೆಂದು ವೈದಿಕವಾಕ್ಯಗಳ ಆಧಾರದ ಮೇಲೆ ನಿಷ್ಕರ್ಷಿಸುವಂತೆ ವರುಣನನ್ನೂ ಆದಿತ್ಯಸ್ವರೂಪನೆಂದು ಹೇಳಲು ಸ್ಪಷ್ಟವಾದ ಪ್ರಮಾಣಗಳಿವೆ. "ವಾರುಣೋ ವಾ ಅಶ್ವಃ"[3] ಇತ್ಯಾದಿ ವಾಕ್ಯಗಳು ಈ ವಿಷಯವನ್ನು ಸ್ಪಷ್ಟಪಡಿಸುತ್ತವೆ. ದ್ಯಾವಾಪೃಥಿವಿಗಳಿಗೆಲ್ಲ ಪ್ರಭುವಾದ ವರುಣನ

1 ೧೦.೧೨೩. ೬.

2 ೧.೩೫.೨.

3 ತೈ. ಬ್ರಾ. ೩.೮.೧೬.೧.

ಈ ಅಶ್ವವು ತನ್ನ ದೈನಂದಿನದ ಪರಿಭ್ರಮಣವನ್ನು ಹೊಂದುತ್ತಿರುವ ಆದಿತ್ಯ ನಲ್ಲದೆ ಬೇರೆಯಲ್ಲ.[1]

ನೀತಿಪಾಲನವೂ, ಸತ್ಯಪಾಲನವೂ, ವಿಶ್ವನಿಯಮನವೂ ಸವಿತೃವಿಗೂ ವರುಣನಿಗೂ ಸಮಾನವಾದ ಧರ್ಮವೆಂಬುದು ಅನೇಕಕಡೆ ವಿಶದವಾಗಿದೆ. ವಿಶ್ವನಿಯಮಕ್ಕೆ ಪಾಲಕನಾದುದರಿಂದಲೇ ಸವಿತೃವು ಮಿತ್ರನೆಂದೂ ನಿರ್ದಿಷ್ಟ ನಾಗಿದ್ದಾನೆ.[3]

ವರುಣನಿಗೆ ವಿಶೇಷಣವಾಗಿರುವ ಅತಿ ಪ್ರಸಿದ್ಧವಾದ ಅಸುರ ಎಂಬ ಪದವು ಸವಿತೃವಿಗೂ ವಿಶೇಷಣವಾಗಿರುವುದು ಗಮನಾರ್ಹವಾದ ಅಂಶ. 'ತದ್ದೇವಸ್ಯ ಸವಿತುರ್ವೀರ್ಯಂ ಮಹದ್ವೃಣೀಮಹೇ ಅಸುರಸ್ಯ ಪ್ರಚೇತಸಃ' (೪.೫೭.೫.) ಇತ್ಯಾದಿ ಸ್ಥಳಗಳಲ್ಲಿ ಈ ವಿಶೇಷಗುಣವನ್ನು ವರ್ಣಿಸುವ ಸಂದರ್ಭದಲ್ಲಿ ಸವಿತೃವಿನ ಶಕ್ತಿಯು ಸೂಚಿತವಾಗಿದೆ. ಅಲ್ಲದೇ, ಅನೇಕ ಸಂದರ್ಭಗಳಲ್ಲಿ ವರುಣನನ್ನು ಸ್ತುತಿಸುವ ರೀತಿಯಲ್ಲಿಯೇ ಸವಿತೃವನ್ನೂ ಸ್ತುತಿಸಿ ಪ್ರಾರ್ಥಿಸಿದೆ. ಉದಾಹರಣೆಗೆ,

---

1. ' Varuna's horse is none other than the fiery races who pursue his diurnal course across the all encompassing arch of heaven, the sphere of Varuna, the All Ruler. It is in the form of the horse that the sun is thus lauded in the hymn in praise of Aswamedha. "

Eggling.
Sacred Books of the East,
Vol. X LIV,
cf P. XIX to X X.

2 ಸವಿತೃ— ೩.೩೮.೩, ೩.೩೩.೬, ೪.೫೩.೪, ೧೦.೩೪.೮., ೧೦.೧೩೯.೩.

ವರುಣ—೬.೭೦.೧, ೭.೮೬.೧, ೮.೪೧.೧೦, ೮.೪೨.೧. ಇತ್ಯಾದಿ.

3 ಉತ ರಾತ್ರೀಮುಭಯತಃ ಪರೀಯಸ ಉತ ಮಿತ್ರೋ ಭವಸಿ ದೇವ ಧರ್ಮಭಿಃ ॥ (ಋ. ಸಂ. ೫.೮೧.೪.)

ಅಚಿತ್ತೀ ಯಚ್ಚಕೃಮಾ ದೈವ್ಯೇ ಜನೇ ದೀನೈರ್ದಕ್ಷೈಃ ಪ್ರಭೂತೀ
ಪೂರುಷತ್ವತಾ ।
ದೇವೇಷು ಚ ಸವಿತರ್ಮಾನುಷೇಷು ಚ ತ್ವಂ ನೋ ಅತ್ರ
ಸುವತಾದನಾಗಸಃ ॥
(೪.೫೪.೩.)

"ಎಲೈ ಸವಿತೃವೇ, ಅಜ್ಞಾನದಿಂದಾಗಲಿ, ದುರಭಿಮಾನದಿಂದಾಗಲಿ, ಅಶಕ್ತಿಯಿಂದಾಗಲಿ, ಮನುಷ್ಯಸಾಧಾರಣವಾದ ದೌರ್ಬಲ್ಯದಿಂದಾಗಲಿ ನಾವು ಪಾಪಮಾಡಿದ್ದರೆ ಅದನ್ನು ಕ್ಷಮಿಸು. ದೈವೀಪುರುಷನನ್ನಾಗಲಿ ದೇವತೆಗಳನ್ನಾಗಲಿ ನಾವು ನಿಂದಿಸಿದ್ದರೆ ಅದನ್ನು ಕ್ಷಮಿಸು. ನಮಗೆ ಕೇಡಕಾಗದಿರಲಿ" ಎಂದಿರುವ ಪ್ರಾರ್ಥನೆಯಂತೆಯೇ.

ಯತ್ಕಿಂಚೇದಂ ವರುಣ ದೈವ್ಯೇ ಜನೇಽಭಿದ್ರೋಹಂ ಮನುಷ್ಯಾ
ಶ್ಚರಾಮಸಿ ।
ಅಚಿತ್ತೀ ಯತ್ತವ ಧರ್ಮಾ ಯುಯೋಪಿಮ ಮಾ
ನಸ್ತಸ್ಮಾದೇನಸೋ ದೇವ ರೀರಿಷಃ ॥
(೭.೮೯.೫.)

ಇತ್ಯಾದಿ ವಾಕ್ಯಗಳಲ್ಲೂ ಪ್ರಾರ್ಥನೆಯ ಕ್ರಮವು ಏಕರೀತಿಯಾಗಿದ್ದು ಶೈಲಿಯಲ್ಲಿಯೂ ವ್ಯತ್ಯಾಸವಿಲ್ಲದಿರುವುದೂ ಗಮನಾರ್ಹವಾದ ಅಂಶ. ಇಂಥ ಸನ್ನಿವೇಶಗಳನ್ನು ಗಮನಿಸಿದರೆ ವರುಣ ಮತ್ತು ಸವಿತೃ ಎಂಬಿಬ್ಬರೂ ಒಂದೇ ತತ್ತ್ವವನ್ನು ಪ್ರತಿಬಿಂಬಿಸುವ ದೇವತಾವಿಶೇಷವೆಂದು ಹೇಳಬಹುದು.

ಸವಿತೃ ಮತ್ತು ವರುಣ ಇಬ್ಬರೂ ಆದಿತ್ಯನ ವಿಭೂತಿವಿಶೇಷಗಳಾದರೆ, ಇವರ ಹಿರಣ್ಮಯರೂಪದ ವರ್ಣನವೂ ಆದಿತ್ಯನ ಸ್ವರೂಪವನ್ನೇ ಹೇಳಿದಂತಾಯಿತು. ಋಕ್ಸಂಹಿತೆಯಲ್ಲಿ ಹಿರಣ್ಯಯೀಂ, ಅಮತಿಂ ಇತ್ಯಾದಿ ವಾಕ್ಯಗಳಿಂದ ವರ್ಣಿತವಾಗಿರುವ ಆದಿತ್ಯನ ಸ್ವರೂಪವೂ, ಉಪನಿಷದಾದಿಗಳಲ್ಲಿ ವರ್ಣಿತವಾಗಿರುವ ಆದಿತ್ಯಾಂತರ್ಗತನಾದ ಪರಮಪುರುಷನ ಸ್ವರೂಪವೂ ಒಂದೇ ಆಗಿರುತ್ತದೆ. ಪರಮಪುರುಷನ ಸ್ವರೂಪವು ಕೇಸರೀಬಣ್ಣದ ವಸ್ತ್ರದಂತೆಯೂ, ಶುಭ್ರವಾದ ರೇಷ್ಮೆಯಂತೆಯೂ, ಅರುಣವರ್ಣದ ಇಂದ್ರಗೋಪದ ಪ್ರಭೆಯಂತೆಯೂ, ಅಗ್ನಿಜ್ವಾಲೆಯಂತೆಯೂ, ಪುಂಡರೀಕ

ದಂತೆಯೂ ವಿದ್ಯುತ್ಪ್ರಭೆಯಂತೆಯೂ ಪ್ರಕಾಶಮಾನವಾಗಿದೆ[1] ಎಂದು ಬೃಹದಾರಣ್ಯಕೋಪನಿಷತ್ತಿನಲ್ಲಿಯೂ; ಆದಿತ್ಯಾಂತರ್ಗತನಾದ ಪರಮಪುರುಷನ ಶ್ಮಶ್ರುಗಳೆಲ್ಲವೂ ಹಿರಣ್ಮಯವಾಗಿಯೇ ಇದೆ. ಪಾದನಖದಿಂದ ಶೀರ್ಷದ ವರೆಗೂ ಈ ಪುರುಷನ ಆಕೃತಿಯು ಅತ್ಯಂತ ಪ್ರಭಾವಯುತವಾಗಿಯೂ ದಿವ್ಯಜ್ಯೋತಿಯಿಂದ ಆಕರ್ಷಕವಾದುದಾಗಿಯೂ ಇದೆಯೆಂದು ಛಾಂದೋಗ್ಯದಲ್ಲೂ[2] ಹೇಳಿರುವ ವರ್ಣನವು ಋಕ್ಸಂಹಿತೆಯಲ್ಲಿ ವರ್ಣಿತವಾದಂತೆಯೇ ಇದೆ. ಇದೇ ಆದಿತ್ಯನು ಉಪನಿಷತ್ತುಗಳಲ್ಲಿ ಎರಡು ವಿಧವಾಗಿ ಸ್ತುತನಾಗಿದ್ದಾನೆ. ಉದಯಾಸ್ತಮಯರೂಪವಾದ ಸಂಚಾರಗಳಿಂದ ಲೋಕನಿರ್ವಹಣವನ್ನು ಮಾಡುವುದು ಲೌಕಿಕಪ್ರತ್ಯಕ್ಷಕ್ಕೆ ಗೋಚರವಾಗತಕ್ಕ ಆದಿತ್ಯನ ಸ್ವರೂಪ. ಮತ್ತು 'ನ ವೈ ತತ್ರ ನ ನಿಮ್ಲೋಚ ನೋದಿಯಾಯ ಕದಾಚನ'[3] ಇತ್ಯಾದಿ ವಾಕ್ಯಗಳಲ್ಲಿ ವರ್ಣಿತನಾದ ಆದಿತ್ಯನಿಗೆ ಉದಯಾಸ್ತಮಯಗಳಿರುವುದಿಲ್ಲ ಅವನಿಗೆ ಯಾವಾಗಲೂ ಶಾಶ್ವತವಾದ ಹಗಲೇ ಇರುತ್ತದೆ.[4] ಈ ದಿವ್ಯಪ್ರಭೆಯು ಶಾಶ್ವತವೂ ಅಪ್ರಾಕೃತವೂ ಆಗಿದೆ. ಇದೇ ಆದಿತ್ಯಾಂತರ್ಗತನಾದ ಪರಮಪುರುಷನ ಪ್ರಶಂಸೆ. ಸಕಲ ಚರಾಚರಗಳನ್ನೂ ನಿಯಮಿತಸ್ಥಿತಿಯಲ್ಲಿಟ್ಟಿರುವ ಇದೇ ಆದಿತತ್ತ್ವದ ಲೌಕಿಕ ಪ್ರತ್ಯಕ್ಷಕ್ಕೆ ಗೋಚರವಾದ ಪ್ರಭಾಮಂಡಲವನ್ನೂ ಅಪ್ರಾಕೃತವಾದ ದಿವ್ಯ

---

1 "ತಸ್ಯ ಹೈತಸ್ಯ ಪುರುಷಸ್ಯ ರೂಪಮ್ । ಯಥಾ ಮಾಹಾರಜನಂ ವಾಸೋ ಯಥಾ ಪಾಂಡ್ವಾವಿಕಂ ಯಥೇಂದ್ರಗೋಪೋ ಯಥಾಗ್ನ್ಯರ್ಚಿರ್ಯಥಾ ಪುಂಡರೀಕಂ "

(ಬೃ. ಉ. ೨.೩.೬.)

2 ಅಥ ಯದೇವೈತದಾದಿತ್ಯಸ್ಯ ಶುಕ್ಲಂ ಭಾಃ......ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ ಹಿರಣ್ಮಯಶ್ಮಶ್ರುರ್ಹಿರಣ್ಯಕೇಶ ಆಪ್ರಣಖಾತ್ಸರ್ವ ಏವ ಸುವರ್ಣಃ ||

(ಛಾ. ಉ. ೧.೬.೬.)

3 ಛಾ. ಉ. ೩.೧೧. ೧–೩.

4 ಏತಂ ಸೇತುಂ ತೀರ್ತ್ವಾಪಿ ನಕ್ತಮಹರೇವಾಭಿನಿಷ್ಪದ್ಯತೇ ಸಕೃದ್ವಿಭಾತೋ ಹ್ಯೇವೈಷ ಬ್ರಹ್ಮಲೋಕಃ ||

(ಛಾ. ಉ. ೮.೪.೨.)

ತತ್ತ್ವವನ್ನೂ ಋಕ್ಸಂಹಿತೆಯಲ್ಲಿ ಪ್ರಶಂಸಿದೆ. ಪ್ರಭಾಯುತವಾದ ರಶ್ಮಿಯುಕ್ತನಾದ ಆದಿತ್ಯನು ಮಿತ್ರಾವರುಣರ ಚಕ್ಷುರ್ಭೂತನಾಗಿ ಉದಯಿಸಿ ದ್ಯಾವಾಪೃಥಿವಿಗಳನ್ನೆಲ್ಲ ವ್ಯಾಪಿಸಿದ್ದಾನೆ. ಈ ಸೂರ್ಯಮಂಡಲಾಂತರ್ವರ್ತಿಯಾದ ಪರಮಾತ್ಮನು ಸಕಲ ಜಗತ್ತಿಗೂ ಐಕ್ಯವನ್ನುಂಟುಮಾಡುವನು. " ಹಿರಣ್ಯಗರ್ಭಃ ಸಮವರ್ತತಾಗ್ರೇ " (೧೦.೧೨೧.೧.) ಇತ್ಯಾದಿ ವಾಕ್ಯಗಳಿಂದ ಸ್ತುತನಾಗಿರುವವನೂ ಸವಿತೃರೂಪನಾದ ಪರಮಾತ್ಮನೇ. " ತತ್ಸವಿತುರ್ವರೇಣ್ಯಂ " ಎಂಬ ಮಹಾಮಂತ್ರಕ್ಕೆ ತಾತ್ಪರ್ಯವನ್ನು ಹೇಳಿರುವ ಸಕಲ ಸಾಂಪ್ರದಾಯಿಕವಾದ ಅಭಿಪ್ರಾಯಗಳೂ ಇದನ್ನೇ ಸಮರ್ಥಿಸುತ್ತವೆ ಲೌಕಿಕ ವ್ಯವಹಾರಕ್ಕೆ ಬೇಕಾದ ಭೌತಿಕಪ್ರಕಾಶ. ಅಧ್ಯಾತ್ಮಜ್ಞಾನಕ್ಕೆ ಬೇಕಾದ ಅಂತಃಪ್ರಕಾಶ ಎಂದರೆ ದಿವ್ಯಜ್ಞಾನ. ಈ ಎರಡು ಪ್ರಯೋಜನವೂ ಸವಿತೃವಿನ ಭರ್ಗದಿಂದ ಸಾಧ್ಯವೆಂದು ಭಟ್ಟಭಾಸ್ಕರರು ವಿವರಿಸಿದ್ದಾರೆ. [1] ಸಕಲ ಭೂತಗಳಲ್ಲೂ ಅಂತರ್ಯಾಮಿಯಾಗಿ ಜಗತ್ಪ್ರೇರಕನಾಗಿಯೂ ಹಿರಣ್ಯಗರ್ಭ ಇತ್ಯಾದಿ ನಾಮಗಳಿಂದ ನಿರ್ದಿಷ್ಟನಾಗಿಯೂ ಆದಿತ್ಯಾಂತರ್ವರ್ತಿಯಾಗಿಯೂ ಇರುವ ಪರಬ್ರಹ್ಮನ ಪಾಪನಾಶಕವೂ ಸತ್ಯಜ್ಞಾನಾನನ್ದಾದಿ ರೂಪದಲ್ಲಿ ವೇದಾನ್ತಪ್ರತಿಪಾದ್ಯವೂ ಆದ ದಿವ್ಯತೇಜಸ್ಸನ್ನು ಧ್ಯಾನಿಸುವೆವು ಎಂಬುದೇ ಈ ಮಂತ್ರದ ಪ್ರಾರ್ಥನೆಯೆಂದು ಮಹೀಧರರು ಶುಕ್ಲಯಜುಸ್ಸಂಹಿತೆಯ ಭಾಷ್ಯದಲ್ಲಿ ತಿಳಿಸುತ್ತಾರೆ. ಯಾವ ಮಹಾತೇಜಸ್ಸನ್ನು

" ಉದ್ವಯಂ ತಮಸಸ್ಪರಿ ಜ್ಯೋತಿಷ್ಪಶ್ಯಂತ ಉತ್ತರಂ |
ದೇವಂ ದೇವತ್ರಾ ಸೂರ್ಯಮಗನ್ಮ ಜ್ಯೋತಿರುತ್ತಮಂ ||
(ಋ. ಸಂ. ೧.೫೦.೧೦.)

ಎಂದು ಋಕ್ಸಂಹಿತೆಯಲ್ಲಿಯೂ

" ಅಗನ್ಮ ಜ್ಯೋತಿರುತ್ತಮಮಿತ್ಯಾಹಾಸೌ ವಾ ಆದಿತ್ಯೋ
ಜ್ಯೋತಿರುತ್ತಮಮಾದಿತ್ಯಸ್ಯೈವ ಸಾಯುಜ್ಯಂ ಗಚ್ಛತಿ | "

---

1 " ಏವಂ ಬೋಧಪ್ರಕಾಶಾಭ್ಯಾಂ ಸಮಸ್ತಸ್ಯ ಪ್ರಪಂಚಸ್ಯ ಉಪಕುರ್ವಾಣಂ ಶ್ರೇಯೋಽರ್ಥಿಭಿರ್ಭಜನೀಯಂ ಸೂರ್ಯಾತ್ಮನಾ ಸ್ಥಿತಂ ಪಾರಮೇಶ್ವರಂ ತೇಜಃ.... "

(ತೈ. ಸಂ. ಭಾ. ೧.೬.೬.)

ಇತ್ಯಾದಿಯಾಗಿ ತೈತ್ತಿರೀಯ ಸಂಹಿತೆಯಲ್ಲಿಯೂ (ತೈ. ಸಂ. ೫.೧.೮.೬.) ವರ್ಣಿಸಿದೆಯೋ ಅದೇ ಆದಿತ್ಯನ ಪರಂಜ್ಯೋತಿ.

ಇದೇ ಭರ್ಗವನ್ನು ಉಪನಿಷತ್ತುಗಳಲ್ಲಿ ಸುತೇಜಾಃ, ಸುತತೇಜಾಃ ಇತ್ಯಾದಿಯಾಗಿ ವರ್ಣಿಸಿರುವುದು ಗಮನಾರ್ಹವಾದ ವಿಷಯ.[1] ಈ ಸನ್ನಿವೇಶಗಳಲ್ಲಿ ಆದಿತ್ಯನ ಸುತೇಜಸ್ಸಿಗೂ ಇಂಥ ಸುತೇಜಸ್ಸನ್ನು ಆರಾಧಿಸುವ ವಂಶದಲ್ಲಿ ಸರ್ವದಾ ಸೋಮವು ಯಜ್ಞಕ್ಕಾಗಿ ಸುತವಾಗಿರುವುದಕ್ಕೂ ನಿಯತವಾದ ಸಂಬಂಧವನ್ನು ತಿಳಿಸಿದೆ. ಈ ಅಂಶವನ್ನು ಗಾಯತ್ರಿಗೂ ಸೋಮಕ್ಕೂ ಇರುವ ಸಂಬಂಧವನ್ನು ವಿವರಿಸುವಾಗ ಪರಿಶೀಲಿಸಲಾಗುತ್ತೆ.

"ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿಃ" (೧.೧೧೩.೧.) ಇತ್ಯಾದಿಯಾಗಿ ಸ್ತುತವಾಗಿರುವ ಜ್ಯೋತಿಯೇ ಭರ್ಗಶಬ್ದದಿಂದ ವ್ಯವಹೃತವಾಗಿದೆ. ಈ ಭರ್ಗವೇ ಅಜ್ಞಾನನಾಶಕವಾದ ಪರಬ್ರಹ್ಮದ ಜ್ಯೋತಿ ಎಂಬುದೇ ಉಪನಿಷದಾದಿಗಳ ಮತ.

ಲೌಕಿಕ ಪ್ರತ್ಯಕ್ಷಕ್ಕೆ ಸಿಲುಕದ, ಕೇವಲ ವೇದಾಧ್ಯಯನದಿಂದ ಮಾತ್ರ ಲಭಿಸದ ಸವಿತೃವಿನ ಪರಂಜ್ಯೋತಿಯನ್ನು ಧ್ಯಾನರೂಪದಿಂದ ಸಾಕ್ಷಾತ್ಕರಿಸಲು ನಮ್ಮ ಬುದ್ಧಿಯನ್ನು ಪ್ರೇರಿಸು, ನಮ್ಮನ್ನು ಅನುಗ್ರಹಿಸು ಎಂಬ ಪ್ರಾರ್ಥನೆಯಿರುವಾಗ ಪರಂಜ್ಯೋತಿಯ ಸ್ವರೂಪಸಾಕ್ಷಾತ್ಕಾರವಾಗಬೇಕಾದರೆ ಗಾಯತ್ರೀ ಮಹಾಮಂತ್ರ ಪಠನರೂಪವಾದ ಧ್ಯಾನದಿಂದ ಮಾತ್ರ ಸಾಧ್ಯವೆಂದಾಯಿತು. ಇದೇ ವಿಷಯವನ್ನು ಶ್ರೀ ಶಂಕರಾಚಾರ್ಯರು ಛಾಂದೋಗ್ಯೋಪನಿಷತ್ತಿನಲ್ಲಿ ಗಾಯತ್ರೀ ಪ್ರಕರಣದ ಉಪೋದ್ಘಾತದಲ್ಲಿ ಸ್ಪಷ್ಟವಾಗಿ ತಿಳಿಸಿದ್ದಾರೆ. ಚಾಕ್ಷುಷಾದಿ ಪ್ರತ್ಯಕ್ಷಕ್ಕೆ ಬ್ರಹ್ಮನು ಅತೀತನು, ಎಂದರೆ ಅವನು ಕಣ್ಣಿಗೆ ಕಾಣತಕ್ಕ ವಿಷಯವಲ್ಲ, ಮಾನಸಿಕದೃಷ್ಟಿಗೂ ಗೋಚರನಾಗತಕ್ಕವನಲ್ಲ, ವ್ಯಾವಹಾರಿಕ ಪ್ರಪಂಚದಲ್ಲಿರುವ ವಸ್ತುವಾವುದೂ ಅಲ್ಲ, ಇತ್ಯಾದಿಯಾಗಿ ನಿಷೇಧರೂಪದಲ್ಲಿ ಮಾತ್ರ ಪರಮಾತ್ಮನ ವರ್ಣನೆಯು ಸಾಧ್ಯ. ಅಲೌಕಿಕವಾದ ಅವನ ಸ್ವರೂಪಸಾಕ್ಷಾತ್ಕಾರವು ಧ್ಯಾನದಿಂದ ಮಾತ್ರ ಸಾಧ್ಯ. ಗಾಯತ್ರೀ ಮಹಾಮಂತ್ರವೇ ಈ ಧ್ಯಾನಸಾಧನ.

ಇತರ ಅನೇಕ ಛಂದಸ್ಸುಗಳಿದ್ದರೂ ಪರಮಾತ್ಮನ ಸಾಕ್ಷಾತ್ಕಾರವು ಗಾಯತ್ರಿಯ ಸಾಹಾಯ್ಯದಿಂದ ಮಾತ್ರ ಆಗಬಲ್ಲದು. ಗಾಯತ್ರಿಗೆ ಮಾತ್ರ

---

2 ಛಾ. ಉ. ೫.೧೩.೧.

ಈ ಸಾಧನಶಕ್ತಿಯಿರುವ ಅಂಶವನ್ನು ಯಜ್ಞಕ್ರಿಯೆಯಲ್ಲಿ ಗಾಯತ್ರಿಗಿರುವ ಪ್ರಮುಖಸ್ಥಾನವೇ ತಿಳಿಸುತ್ತದೆ. ಯಾಗಾದಿ ಕರ್ಮಗಳು ದಿವ್ಯಜ್ಞಾನಕ್ಕೆ ಸಾಧಕವಾಗಿರುವುದರಿಂದಲೂ ಅಂಥ ಯಜ್ಞಾದಿಗಳ ನಿರ್ವಹಣಕ್ಕೆ ಗಾಯತ್ರಿಯು ಅತ್ಯವಶ್ಯವಾದ ಸಹಾಯಸಂಪತ್ತಾದುದರಿಂದಲೂ ಬ್ರಹ್ಮಜ್ಞಾನಕ್ಕೂ ಗಾಯತ್ರಿಯೇ ಅತಿಮುಖ್ಯವಾದ ಸಾಧನವೆಂದಂತಾಯಿತು. ಈ ಪ್ರಾಮುಖ್ಯವು ಮೂರು ಅಂಶಗಳಿಂದ ತಿಳಿಯುತ್ತದೆ.

(೧) ಮೊದಲನೆಯದಾಗಿ, ಗಾಯತ್ರಿಯು ಯಜ್ಞಪ್ರಧಾನವಾದ ಸೋಮವನ್ನು ದೇವತೆಗಳಿಗೆ ತಂದೊಪ್ಪಿಸಿದುದರಿಂದಲೂ,

(೨) ಎರಡನೆಯದಾಗಿ, ಇತರ ಛಂದಸ್ಸುಗಳ ಅಕ್ಷರಗಳನ್ನೆಲ್ಲ ತನ್ನಲ್ಲೇ ಐಕ್ಯಮಾಡಿಕೊಂಡು ಎಲ್ಲವನ್ನೂ ತಾನೇ ವ್ಯಾಪಿಸಿರುವುದರಿಂದಲೂ,

(೩) ಮೂರನೆಯದಾಗಿ ಸವನತ್ರಯಕಾಲದಲ್ಲೂ ತಾನು ವ್ಯಾಪಿಸಿರುವುದರಿಂದಲೂ ಸಹ ಗಾಯತ್ರಿಗೆ ಯಜ್ಞಕ್ರಿಯೆಯಲ್ಲಿ ಪ್ರಧಾನವಾದ ಸ್ಥಾನವಿದೆ.

ಅಲ್ಲದೆ, ಬ್ರಾಹ್ಮಣಾದಿಗಳಿಗೆ ಮಾತೃಸ್ವರೂಪವಾಗಿರುವುದರಿಂದಲೂ ಬ್ರಹ್ಮಸ್ವರೂಪಜ್ಞಾನವೂ ಗಾಯತ್ರಿಯನ್ನೇ ಆಶ್ರಯಿಸಿರುವುದರಿಂದಲೂ ಬ್ರಹ್ಮಜ್ಯೋತಿಯ ಸ್ವರೂಪಸಾಕ್ಷಾತ್ಕಾರಕ್ಕೆ ಗಾಯತ್ರಿಯೇ ಪ್ರಧಾನಸಾಧನವಾಗಿರುತ್ತದೆ. [1]

ಹೀಗೆ ಶಂಕರಾಚಾರ್ಯರು ಹೇಳಿರುವ ಮೂರು ಅಂಶಗಳಿಗೂ ಶ್ರುತಿಯ ಆಧಾರವೇನು, ಗಾಯತ್ರಿಗೆ ಈ ಪ್ರಾಧಾನ್ಯವು ಶ್ರುತಿವಾಕ್ಯಗಳಿಂದ ಯಾವ ರೀತಿ ಕೊಡಲ್ಪಟ್ಟಿದೆ ಎಂಬುದನ್ನು ಪ್ರಕೃತದಲ್ಲಿ ಪರಿಶೀಲಿಸಬೇಕಾಗಿದೆ.

### ೧. ಸೋಮಾಹರಣ:—ಶ್ಯೇನ-ಗಾಯತ್ರೀ.

ಯಜ್ಞಪ್ರಧಾನವಾದ ಸೋಮವನ್ನು ತಂದೊದಗಿಸಿದುದರಿಂದ ಗಾಯತ್ರಿಯ ಶಕ್ತಿವೈಶಿಷ್ಟ್ಯವು ತಿಳಿಯುತ್ತದೆ. ಇದೇ ಸೋಮಾಹರಣದ

---

1. ಸತ್ಸ್ವನೇಕೇಷು ಛಂದಸ್ಸು ಗಾಯತ್ರ್ಯಾ ಏವ ಬ್ರಹ್ಮಜ್ಞಾನದ್ವಾರತಯೋಪಾದಾನಂ ಪ್ರಾಧಾನ್ಯಾತ್ | ಸೋಮಾಹರಣಾದಿತರಚ್ಛಂದೋऽಕ್ಷರಾಹರಣೇನೇತರಚ್ಛಂದೋವ್ಯಾಪ್ತ್ಯಾ ಚ ಸರ್ವಸವನವ್ಯಾಪಕತ್ವಾಚ್ಚ ಯಜ್ಞೇ ಪ್ರಾಧಾನ್ಯಂ ಗಾಯತ್ರ್ಯಾಃ |
(ಛಾ. ಉ. ಶಾಂಕರಭಾಷ್ಯ. ೩.೧೨.೧.)

ಪ್ರಸಂಗವು ಸಂಹಿತೆಗಳಲ್ಲೂ ಬ್ರಾಹ್ಮಣಗಳಲ್ಲೂ ಅತಿ ಮುಖ್ಯವಾದೆಡೆಗಳಲ್ಲೆಲ್ಲ ವರ್ಣಿತವಾಗಿದೆ. ಎಲ್ಲಕ್ಕೂ ಮೂಲವಾದ ಋಕ್ಸಂಹಿತೆಯಲ್ಲೂ ಈ ಪ್ರಸಂಗವು ಕಥಾರೂಪದಲ್ಲಿ ಉಕ್ತವಾಗಿದೆ.

ದೇವತೆಗಳಿಂದ ಅಪೇಕ್ಷಿತವಾದ ಸೋಮವನ್ನು ಸುಪರ್ಣವು (ಶ್ಯೇನವು) ಮನುವಿಗೆ ತಂದೊದಗಿಸಿತು. ಈ ಶ್ಯೇನ ಪಕ್ಷಿಯು ಸೋಮಪಾಲಕರನ್ನು ಗದರಿಸಿ ಸೋಮವನ್ನು ಅಪಹರಿಸಿ ಅಂತರಿಕ್ಷದಲ್ಲಿ ಮನೋವೇಗದಿಂದ ಹಾರಿ ಬಂದು ಉಪಕಾರಮಾಡಿದುದರಿಂದ ಈ ಪಕ್ಷಿಯ ಸಮೂಹಕ್ಕೇ ಪೃಥ್ವಿಯಲ್ಲಿ ಗೌರವ ಲಭಿಸಿತು.

ಅಂತರಿಕ್ಷದಲ್ಲಿ ಮನೋವೇಗದಲ್ಲಿ ನೇರವಾಗಿ ಹಾರಿಬರತಕ್ಕ ಈ ಪಕ್ಷಿಯು ಸೋಮವನ್ನು ತಂದು ಅದರೊಂದಿಗೆ ಸಂಕಲ್ಪಶಕ್ತಿಯನ್ನೂ ಶ್ರದ್ಧೆಯನ್ನೂ ವೃದ್ಧಿಪಡಿಸಿತು ಸೋಮಾಹರಣದಿಂದ ಲೋಕಕ್ಕೆ ಉಪಕಾರ ಮಾಡಿತು.

ದ್ಯುಲೋಕದಿಂದ ಈ ಪಕ್ಷಿಯು ಸೋಮವನ್ನು ತಂದು ಸಹಸ್ರಾರು ಯಾಗಗಳ ನಿರ್ವಹಣಕ್ಕೆ ಸಹಾಯಮಾಡಿತು. ಇದೇ ಸೋಮಪಾನದಿಂದ ತೃಪ್ತನಾದ ಇಂದ್ರನ ಪರಾಕ್ರಮವು ವೃದ್ಧಿಯಾಗಿ ಅವನು ಸಕಲ ಶತ್ರುಗಳನ್ನೂ ನಾಶಮಾಡಿದನು.

ಆದರೆ, ಸೋಮಾಹರಣವನ್ನು ಮಾಡಿ ಶ್ಯೇನವು ಸಂತೋಷವನ್ನು ವ್ಯಕ್ತಪಡಿಸುತ್ತ ಅಂತರಿಕ್ಷದಿಂದ ಇಳಿದು ಬರುತ್ತಿದ್ದಾಗ ಸೋಮಪಾಲಕರಲ್ಲೊಬ್ಬನೂ ಧನ್ವಿಯೂ ಆದ ಕೃಶಾನುವು ಮನೋವೇಗದಿಂದ ಕೆಳಕ್ಕೆ ಇಳಿದು ಇದನ್ನು ಅಟ್ಟಿಸಿಕೊಂಡು ಬಂದು ಧನುಸ್ಸಿನಿಂದ ಇದರ ಕಡೆಗೆ ಬಾಣವನ್ನು ಬಿಟ್ಟನು. ಶ್ಯೇನವು ಇಂದ್ರನ ಪ್ರಭುತ್ವಕ್ಕೊಳಗಾದ ಅಂತರಿಕ್ಷದಿಂದ ಇಳಿದು ಬರುತ್ತಿದ್ದಾಗ ಕೃಶಾನುವಿನ ಬಾಣದಿಂದ ಹೊಡೆಯಲ್ಪಟ್ಟು ಹೋರಾಡಿ ಕೊನೆಗೆ ಒಂದು ರೆಕ್ಕೆಯನ್ನು ಕಳೆದುಕೊಂಡು ಗಾಯವನ್ನು ಹೊಂದಿತು.[1]

---

1 ಅವ ಯಚ್ಛ್ಯೇನೋ ಅಸ್ವನೀದಧ ದ್ಯೋರ್ವಿ ಯದ್ಯದಿ ವಾತ ಊಹುಃ ಪುರಂಧಿಂ ।
ಸೃಜದ್ಯದಸ್ಮಾ ಅವ ಹ ಕ್ಷಿಪಜ್ಜ್ಯಾಂ ಕೃಶಾನುರಸ್ತಾ ಮನಸಾ ಭುರಣ್ಯನ್ ॥
(ಋ. ಸಂ. ೪.೨೭.೩)

ಈ ರೀತಿಯಾಗಿ ಕಥೆಯಿರುವಾಗ ಇಲ್ಲಿ ತತ್ತ್ವವೇನೆಂದರಿಯಲು ಶ್ರಮಸಾಧ್ಯವೇ ಆಗುತ್ತದೆ. ಆದರೂ, ಈ ಸೂಕ್ತಕರ್ತೃವಾದ ವಾಮದೇವ ಋಷಿಯ ಪರಿಚಯವನ್ನು ಮಾಡಿಕೊಡುತ್ತ ಐತರೇಯಾರಣ್ಯಕದಲ್ಲಿ ಇದೇ ಸಂದರ್ಭವನ್ನು ತಾತ್ತ್ವಿಕದೃಷ್ಟಿಯಿಂದ ವಿವರಿಸಿದೆ. ಅಲ್ಲಿ ಋಕ್ಸಂಹಿತೆಯ

ಗರ್ಭೇ ನು ಸನ್ನನ್ವೇಷಾಮವೇದಮಹಂ ದೇವಾನಾಂ
ಜನಿಮಾನಿ ವಿಶ್ವಾ ।
ಶತಂ ಮಾ ಪುರ ಆಯಸೀರರಕ್ಷನ್ನಧ ಶ್ಯೇನೋ
ಜವಸಾ ನಿರದೀಯಂ ॥
(ಋ. ಸಂ. ೪.೨೭.೧)

ಎಂಬ ಋಕ್ಕನ್ನುದಾಹರಿಸಿ "ಗರ್ಭ ಏವ ಏತಚ್ಛಯಾನೋ ವಾಮದೇವ ಏವಮುವಾಚ" (ಐ. ಆ. ೨.೫.) ವಾಮದೇವನು ಗರ್ಭಸ್ಥನಾಗಿರುವಾಗಲೇ ಈ ತತ್ತ್ವಾರ್ಥವನ್ನು ತಿಳಿದು ಹೇಳಿದನು ಎಂದಿದೆ. ಮೇಲಿನ ಮಂತ್ರದ ಅರ್ಥವೇನೆಂದರೆ, ವಾಮದೇವನಿಗೆ ಗರ್ಭದಲ್ಲಿರುವಾಗಲೆ ಸಕಲ ದೇವತೆಗಳ ಉತ್ಪತ್ತಿ ಸ್ವರೂಪಗಳೂ ಬೋಧವಾದವೆಂದೂ, ನೂರಾರು ಅಯಶ್ಶಲಾಕೆ (ಉಕ್ಕಿನ ಸರಳು)ಗಳಿಂದ ನಿರ್ಮಿತವಾದ ಬಂಧವಿದ್ದರೂ ಸಹ ಶ್ಯೇನಪಕ್ಷಿಯಂತೆ ಅದನ್ನು ತಪ್ಪಿಸಿಕೊಂಡು ಪೃಥಿವಿಗಭಿಮುಖವಾಗಿ ಹಾರಿಬಂದನೆಂದೂ ತಿಳಿಯುತ್ತದೆ ಶಂಕರಾಚಾರ್ಯರೂ ಆನಂದತೀರ್ಥರೂ ಸಾಯಣರೂ ಈ ಸಂದರ್ಭವನ್ನು ವಿವರಿಸುವಾಗ ವಾಮದೇವನು ಬಂಧರೂಪವಾದ ನೂರಾರು ಶರೀರಗಳನ್ನು ಪ್ರವೇಶಿಸಿ ಕೊನೆಗೆ ಜ್ಞಾನಿಯಾಗಿ ಅವುಗಳಿಂದ ಮುಕ್ತನಾದನು ಎಂದು ತಾತ್ಪರ್ಯವೆಂಬುದಾಗಿ ಅಭಿಪ್ರಾಯಪಡುತ್ತಾರೆ. ಆದರೆ. ಐತರೇಯಾರಣ್ಯಕದ ಸಂದರ್ಭವನ್ನು ಪರಿಶೀಲಿಸಿದರೆ, ಗರ್ಭಸ್ಥನಾಗಿರುವಾಗಲೇ ಈ ತತ್ತ್ವವನ್ನು ತಿಳಿದ ವಾಮದೇವನು ಪಾರ್ಥಿವಶರೀರವನ್ನು ತ್ಯಾಗಮಾಡಿ ಮುಕ್ತಿಯನ್ನು ಪಡೆದನು ಎಂಬ ತಾತ್ಪರ್ಯವು ತೋರುತ್ತದೆ.[1] ಆದ್ದರಿಂದ 'ಗರ್ಭೇನು'

1 "ಏವಂ ವಿದ್ವಾನ್ ಅಸ್ಮಾಚ್ಛರೀರಭೇದಾದೂರ್ಧ್ವ ಉತ್ಕ್ರಮ್ಯಾಮುಷ್ಮಿನ್ ಸ್ವರ್ಗೇ ಲೋಕೇ ಸರ್ವಾನ್ಕಾಮಾನಾಪ್ತ್ವಾಮೃತಃ ಸಮಭವತ್ಸಮಭವತ್" (ಐ. ಆ. ೨.೫.)

ಎಂಬ ಮಂತ್ರದ ಅರ್ಥವು ವಾಮದೇವನಿಗೇ ಅನ್ವಯಿಸುವುದೆಂದಭಿಪ್ರಾಯವಾಗುತ್ತದೆ.

೧.೩೨.೧೪. ಮತ್ತು ೧೦.೯೯.೮ ಇತ್ಯಾದಿ ಮಂತ್ರಗಳಲ್ಲಿ ಇಂದ್ರನು ಶ್ಯೇನಪಕ್ಷಿಗೆ ಸದೃಶನೆಂದು ವರ್ಣಿತವಾಗಿರುವನು ಎಂಬ ವಾಕ್ಯದ ಆಧಾರದ ಮೇಲೆ ಕೆಲವು ಪಂಡಿತರು " ಗರ್ಭೇ ನು " (೪.೨೭.೧) ಎಂಬ ಮಂತ್ರವು ಇಂದ್ರನನ್ನೇ ನಿರ್ದೇಶಿಸುವುದೆಂದಭಿಪ್ರಾಯಪಡುತ್ತಾರೆ. ಅದು ತಪ್ಪಾಗುತ್ತದೆ.

ಇದೇ ಸಂದರ್ಭವನ್ನು ವರ್ಣಿಸುವಾಗ ಶ್ಯೇನವು ಸುಪರ್ಣಪದದಿಂದಲೂ ವ್ಯವಹೃತವಾಗಿದೆ. ಸಾಯಣರು ಕೆಲವೆಡೆಗಳಲ್ಲಿ ಶ್ಯೇನಶಬ್ದವನ್ನು ವಿವರಿಸುವಾಗ " **ಶ್ಯೇನಃ ಶಂಸನೀಯಗತಿಮಾನ್ ಪಕ್ಷೀ ಪಕ್ಷ್ಯಾಕಾರಾ ಗಾಯತ್ರೀ** " ಎಂದು ವಿವರಿಸಿದ್ದಾರೆ. ಹೀಗೆ ಶ್ಯೇನ, ಸುಪರ್ಣ, ಗಾಯತ್ರೀ ಎಂಬ ಬೇರೆ ಬೇರೆ ಪದಗಳನ್ನು ಈ ಸಂದರ್ಭಗಳಲ್ಲಿ ಉಪಯೋಗಿಸಿರುವುದರಿಂದ ಈ ಕಥಾವಿವರಣೆಯನ್ನು ತಿಳಿದ ಹೊರತು ಇಲ್ಲಿ ನಿಷ್ಕೃಷ್ಟವಾದ ಅರ್ಥವನ್ನು ಹೇಳಲಾಗುವುದಿಲ್ಲ. ಆದ್ದರಿಂದ ತೈತ್ತಿರೀಯ ಸಂಹಿತೆ, ಐತರೇಯ ಬ್ರಾಹ್ಮಣ ಮತ್ತು ಶತಪಥಬ್ರಾಹ್ಮಣಗಳಲ್ಲಿ ಉಕ್ತವಾಗಿರುವ ಕಥಾಭಾಗವನ್ನು ತಿಳಿದನಂತರ ಗಾಯತ್ರಿಯು ಸೋಮವನ್ನು ತಂದ ವಿಚಾರದಲ್ಲಿ ತತ್ತ್ವಾರ್ಥವೇನೆಂಬುದನ್ನು ಪರಿಶೀಲಿಸಬಹುದು. ತೈತ್ತಿರೀಯ ಸಂಹಿತೆಯಲ್ಲಿ ಕಥಾವಿವರಣವು ಈ ರೀತಿಯಿದೆ.

ಕದ್ರು ಮತ್ತು ಸುಪರ್ಣೀ ಎಂಬಿಬ್ಬರಿಗೂ ರೂಪದಲ್ಲಿ ಯಾರಧಿಕರೆಂಬ ಸ್ಪರ್ಧೆಯುಂಟಾಯಿತು. ಕದ್ರುವೇ ಜಯಿಸಿ ಸುಪರ್ಣಿಯನ್ನು ಸೋಲಿಸಿ ತನ್ನ ಅಧೀನದಲ್ಲಿರಿಸಿಕೊಂಡಳು. ಆಗ ಸೋತ ಸುಪರ್ಣಿಯನ್ನು ಕುರಿತು " ಮೂರನೇ ಸ್ವರ್ಗದಲ್ಲಿ ಸೋಮವಿದೆ. ಅದನ್ನು ತಂದುಕೊಟ್ಟು ನೀನು ಬಿಡುಗಡೆಯನ್ನು ಹೊಂದಬಹುದು " ಎಂದು ಭರವಸೆಕೊಟ್ಟಳು. ಕದ್ರುವೇ ಪೃಥ್ವೀ. ಸುಪರ್ಣಿಯೇ ಅಂತರಿಕ್ಷ. ಛಂದಸ್ಸುಗಳೇ ಸುಪರ್ಣಿಯ ಸಂತಾನಗಳು. ತಾಯಿಯ ಸೇವೆಗಾಗಿಯೇ ಪೋಷಿತರಾದ ಮಕ್ಕಳ ಸಹಾಯದಿಂದ ನೀನು ಸೋಮವನ್ನು ತರಿಸಿಕೊಟ್ಟು ನಿನ್ನ ಮುಕ್ತಿಯನ್ನು ಪಡೆಯಬಹುದೆಂದು ಕದ್ರುವು ಸುಪರ್ಣಿಗೆ ಹೇಳಿದಳು. ಆಗ ಅದೇ ರೀತಿ ಸುಪರ್ಣಿಯೂ ತನ್ನ ಮಕ್ಕಳಿಗೆ ಈ ಸಂದರ್ಭವನ್ನು ತಿಳಿಸಿದಳು. ಆಗ ಹದಿ

ನಾಲ್ಕು ಅಕ್ಷರಾತ್ಮಕವಾದ ಜಗತಿಯು ಅಂತರಿಕ್ಷಕ್ಕೆ ಹಾರಿತು. ಆದರೆ ಸೋಮವನ್ನು ಪಡೆಯಲಾಗದೆ ಹಿಂತಿರುಗಿತು. ಹದಿನಾಲ್ಕರಲ್ಲಿ ಎರಡಕ್ಷರ ಗಳನ್ನು ಕಳೆದುಕೊಂಡರೂ ಯಜ್ಞಪಶುಗಳನ್ನು ಸಂಪಾದಿಸಿಕೊಂಡು ಹಿಂತಿರುಗಿತು. ಆದ್ದರಿಂದಲೇ, ಜಗತೀಛಂದಸ್ಸು ಪಶುಸಂಪತ್ಸಮೃದ್ಧಿ ಯಿಂದ ಕೂಡಿದೆ. ಪಶುಸಂಪತ್ಸಮೃದ್ಧನಾದ ಪುರುಷನು ಅಭಿಷಿಕ್ತನಾಗ ಲರ್ಹನಾಗುತ್ತಾನೆ.

ನಂತರ ಹದಿಮೂರು ಅಕ್ಷರಗಳೊಡನೆ ಕೂಡಿದ ತ್ರಿಷ್ಟುಪ್ ಛಂದಸ್ಸು ಅಂತರಿಕ್ಷಕ್ಕೆ ಹಾರಿತು. ಅದಕ್ಕೂ ಕೂಡ ಎರಡಕ್ಷರಗಳು ಹೀನವಾಗಿ ಅದು ಸೋಮವಿಲ್ಲದೆ ಹಿಂತಿರುಗಿತು. ಆದರೆ ಹಿಂತಿರುಗಿ ಬರುವಾಗ ಯಜ್ಞಕ್ಕೆ ಉಪಯುಕ್ತವಾದ ದಕ್ಷಿಣೆಯೊಡನೆಯೂ ತಪಸ್ಸಾಮಗ್ರಿಗಳೊಡನೆಯೂ ಹಿಂತಿರುಗಿತು. ಆದ್ದರಿಂದ ಲೋಕವ್ಯವಹಾರದಲ್ಲಿ ಮಾಧ್ಯಂದಿನ ಸವನ ಕಾಲದಲ್ಲಿ ದಕ್ಷಿಣೆಯು ಅರ್ಪಿತವಾಗುತ್ತದೆ. ಯಾವನು ತನ್ನ ಸಂಪತ್ತನ್ನು ದಾನರೂಪದಲ್ಲರ್ಪಿಸುವನೋ ಅದೇ ತಪಃಕ್ರಿಯೆಯೆನ್ನಿಸಿಕೊಳ್ಳುತ್ತದೆ.

ಅನಂತರ ನಾಲ್ಕು ಅಕ್ಷರಾತ್ಮಕವಾದ ಗಾಯತ್ರಿಯು ಜ್ಯೋತೀರೂಪ ವಾದ ಒಂದು ಅಜದೊಡನೆ ಅಂತರಿಕ್ಷಾಭಿಮುಖವಾಗಿ ಹೊರಟಿತು. ಆ ಅಜದ ಸಹಾಯದಿಂದ ಸೋಮವನ್ನು ಹೊಂದಿತು. ಸೋಮವನ್ನು ತೆಗೆದು ಕೊಂಡು ಗಾಯತ್ರಿಯು ಹಿಂತಿರುಗಿ ಬರುವಾಗ ತ್ರಿಷ್ಟುಪ್ ಮತ್ತು ಜಗತಿಯು ಅಲ್ಲಿ ಬಿಟ್ಟು ಬಂದ ನಾಲ್ಕು ಅಕ್ಷರಗಳನ್ನೂ ಹಿಂದಕ್ಕೆ ತೆಗೆದುಕೊಂಡು ಬಂದುದರಿಂದ ಹಿಂದಿದ್ದ ನಾಲ್ಕು ಅಕ್ಷರಗಳೊಡನೆ ಈ ನಾಲ್ಕು ಅಕ್ಷರಗಳೂ ಸೇರಿ ಒಟ್ಟು ಎಂಟಕ್ಷರಗಳಾದುವು.

ಹೀಗೆ ಛಂದಸ್ಸುಗಳಲ್ಲೆಲ್ಲ ಅತಿ ಚಿಕ್ಕದಾದರೂ ಯಜ್ಞಕ್ಕೆ ಅತಿ ಮುಖ್ಯವಾದ ಸೋಮವನ್ನು ತಂದುದಕ್ಕಾಗಿ ಯಜ್ಞಕಾರ್ಯದಲ್ಲಿ ಅತಿಪ್ರಧಾನ ವಾದ ಸ್ಥಾನವನ್ನು ಹೊಂದಿದೆ ಎಂದು ಬ್ರಹ್ಮವಾದಿಗಳ ಮತ. ಆದ್ದರಿಂದಲೇ ಅದು ಛಂದಸ್ಸುಗಳಲ್ಲೆಲ್ಲ ಅತ್ಯಂತ ತೇಜಸ್ವಿ.

ಪಕ್ಷಿರೂಪವಾದ ಗಾಯತ್ರಿಯು ಎರಡು ಪಾದಗಳಿಂದಲೂ ಎರಡು ಸವನಗಳನ್ನೂ ಮುಖದಿಂದ ಒಂದು ಸವನವನ್ನೂ ತಂದಿತು. ಮುಖದಿಂದ ತಂದ ಸವನವನ್ನೂ ಪಾನಮಾಡಿತು. ಆದ್ದರಿಂದಲೇ ಪ್ರಾತಃಸವನವೂ, ಮಾಧ್ಯಂದಿನಸವನವೂ ಶುಭ್ರವಾದ ಸೋಮಯುಕ್ತವಾಗಿಯೂ ಮತ್ತು

ತೃತೀಯಸವನವು ಋಜೀಷ (ಹಿಂಡಿದ ರಸ) ಯುಕ್ತವಾಗಿಯೂ ಇದೆ. ಇದು ತೈತ್ತಿರೀಯ ಸಂಹಿತೆಯಲ್ಲಿ ಉಕ್ತವಾಗಿರುವ ಕ್ರಮ. ಐತರೇಯ ಬ್ರಾಹ್ಮಣದಲ್ಲಿ ಈ ವಿವರಣೆಯು ಕೊಂಚ ವ್ಯತ್ಯಸ್ತವಾಗಿದೆ. ಇದು ಎರಡು ಪ್ರಕಾರಗಳಲ್ಲಿ ಹೇಳಲ್ಪಟ್ಟಿದೆ.[1]

ಮೊದಲನೆಯದಾಗಿ;- ಸೋಮರಾಜನು ಗಂಧರ್ವರೊಂದಿಗೆ ವಾಸಿಸುತ್ತಿದ್ದಾಗ ದೇವತೆಗಳೂ ಋಷಿಗಳೂ ಅವನನ್ನು ಪಡೆಯಬೇಕೆಂದಿಚ್ಛಿಸಿ ತದ್ಧ್ಯಾನನಿರತರಾದರು. ಅದನ್ನು ಪಡೆಯುವ ಕ್ರಮವೇನೆಂಬುದನ್ನು ಚಿಂತಿಸುತ್ತಿದ್ದಾಗ ವಾಗ್ದೇವಿಯು ಅವರೆದುರಿಗೆ ಬಂದು "ಗಂಧರ್ವರು ಸ್ತ್ರೀಕಾಮರು, ನನ್ನನ್ನು ಕಳುಹಿಸಿ, ನಾನು ನಿಮಗೆ ಸೋಮವನ್ನು ತಂದೊಪ್ಪಿಸುತ್ತೇನೆ" ಎಂದಳು. ಅದಕ್ಕೆ ದೇವತೆಗಳು "ನಾವು ನಿನ್ನನ್ನು ಬಿಟ್ಟಿರಲಾರೆವು ಅದಾಗುವುದಿಲ್ಲ" ಎಂದರು. ಆಗ ವಾಗ್ದೇವಿಯು "ಸದ್ಯಕ್ಕೆ ನನ್ನನ್ನು ಕಳುಹಿ ಸೋಮವನ್ನು ಪಡೆಯಿರಿ. ಅನಂತರ ನೀವು ನನ್ನನ್ನು ಅಪೇಕ್ಷಿಸಿದೊಡನೆಯೇ ನಾನು ನಿಮ್ಮಲ್ಲಿಗೆ ಬರುತ್ತೇನೆ" ಎಂದು ಭರವಸೆಯನ್ನು ಕೊಟ್ಟನಂತರ ಅವಳ ಸಹಾಯದಿಂದ ಅವರು ಸೋಮವನ್ನು ಪಡೆದರು ಎಂದಿದೆ.[2]

ಇದಲ್ಲದೇ, ಇದೇ ಸಂದರ್ಭವನ್ನು ಬೇರೆ ಕಡೆ ಈ ರೀತಿ ತಿಳಿಸಿದೆ.

ಅಂತರಿಕ್ಷಸ್ಥವಾದ ಸೋಮವನ್ನು ಹೇಗೆ ಪಡೆಯಬಹುದೆಂದು ದೇವತೆಗಳು ಬಹಳ ಕಾಲ ಚಿಂತಿಸಿ ಅನಂತರ ಛಂದಸ್ಸುಗಳನ್ನು ಸಮೀಪಿಸಿ "ನೀವು ನಮಗಾಗಿ ಅಂತರಿಕ್ಷಸ್ಥವಾದ ಸೋಮವನ್ನು ತಂದುಕೊಡಿ" ಎಂದು ಯಾಚಿಸಿದರು. "ತಥಾಸ್ತು" ಎಂದು ಭರವಸೆಯನ್ನು ಕೊಟ್ಟು ಪಕ್ಷಿರೂಪವನ್ನು ಹೊಂದಿ ಅಂತರಿಕ್ಷಕ್ಕೆ ಹಾರಿದವು. ಅವು ಸುಪರ್ಣರೂಪದಲ್ಲಿ ಪರಿವರ್ತಿತವಾಗಿ ಸೋಮಾಹರಣಕ್ಕೆ ಹಾರಿದುದರಿಂದ ಈ ಸನ್ನಿವೇಶವು **ಸುವರ್ಣೋ**

---

1 "ಕದ್ರೂಶ್ಚ ವೈ ಸುಪರ್ಣೀ ಚಾತ್ಮರೂಪಯೋರಸ್ಪರ್ಧೇತಾಗ್ಂ...
ಗಾಯತ್ರೀ ಕನಿಷ್ಠಾ ಛಂದಸಾಗ್ಂ ಸತೀ ಯಜ್ಞಮುಖಂ ಪರೀಯಾಯ....ಧೀಶಮಿವ ಹಿ ಮನ್ಯಂತೇ"

(ತೈ. ಸಂ. ೬.೧.೬. ೧—೩)

2 "ಸೋಮೋ ವೈ ರಾಜಾ ಗಂಧರ್ವೇಷ್ವಾಸೀತ್....ಸೋಮಂ ರಾಜಾನಮಕ್ರೀಣನ್" (ಐ. ಬ್ರಾ. ೧.೨೭.)

**ಪಾಖ್ಯಾನ**ವೆಂದು ಪ್ರಸಿದ್ಧವಾಯಿತು. ಈ ರೀತಿ ಪಕ್ಷಿರೂಪವಾದ ಛಂದಸ್ಸುಗಳು ಸೋಮನಲ್ಲಿಗೆ ಹಾರಿದಾಗ ಪ್ರತಿಯೊಂದೂ ನಾಲ್ಕು ಅಕ್ಷರಗಳುಳ್ಳವಾಗಿ ಮಾತ್ರ ಆಗಿದ್ದವು. ನಾಲ್ಕು ಅಕ್ಷರಗಳುಳ್ಳ ಜಗತಿಯು ಪ್ರಥಮತಃ ಅಂತರಿಕ್ಷಕ್ಕೆ ಹಾರುತ್ತಿದ್ದಾಗ ಅರ್ಧದಾರಿಯಲ್ಲಿಯೇ ಬಳಲಿತು. ತನ್ನ ಮೂರು ಅಕ್ಷರಗಳನ್ನು ಅಲ್ಲೇ ಬಿಟ್ಟು ಉಳಿದ ಒಂದಕ್ಷರದೊಂದಿಗೆ ಮಾತ್ರ ಹಿಂತಿರುಗಿತು. ಆದರೆ ಹಿಂದಕ್ಕೆ ಬರುವಾಗ ಯಾಗದೀಕ್ಷೆಯನ್ನೂ ತಪಸ್ಸನ್ನೂ ಪಡೆದುಕೊಂಡು ಬಂದಿತು.

ಅನಂತರ ತ್ರಿಷ್ಟುಪ್ಪೂ ಅರ್ಧದಾರಿಯನ್ನು ಮೀರಿ ಕೊಂಚ ದೂರ ಹೋಗುವುದರಲ್ಲಿಯೇ ಬಳಲಿತು. ತನ್ನ ಒಂದಕ್ಷರವನ್ನು ಮಾತ್ರ ಅಲ್ಲಿ ಬಿಟ್ಟು ಉಳಿದ ಮೂರು ಅಕ್ಷರಗಳೊಡನೆ ಹಿಂತಿರುಗಿತು. ಬರುವಾಗ ಯಜ್ಞ ಸಾಮಗ್ರಿಯಾದ ದಕ್ಷಿಣೆಯನ್ನು ತಂದಿತು.

ಅನಂತರ ದೇವತೆಗಳು ಗಾಯತ್ರಿಯನ್ನು ಸಮೀಪಿಸಿ ನಮಗೆ ಸೋಮ ರಾಜನನ್ನು ತಂದುಕೊಡು ಎಂದು ಪ್ರಾರ್ಥಿಸಿದರು. ಹಾಗೇ ಆಗಲೆಂದು ಗಾಯತ್ರಿಯು ಒಪ್ಪಿ ದೇವತೆಗಳು ಸ್ವಸ್ತ್ಯಯನ ಮಂತ್ರವನ್ನು ಪಠಿಸುತ್ತಾ ತನ್ನನ್ನು ಹಿಂಬಾಲಿಸಬೇಕೆಂದಿತು. ದೇವತೆಗಳು ಸಂತೋಷದಿಂದ ಅದನ್ನು ಅಂಗೀಕರಿಸಿ "**ಪ್ರ**" ಮತ್ತು "ಆ" ಎಂಬ ಸ್ವಸ್ತ್ಯಯನ ಮಂತ್ರಗಳನ್ನು ಪಠಿಸುತ್ತ ಹೊರಟರು. ಈ ಮಂತ್ರದ ಪಠನದಿಂದ ಪ್ರಯಾಣವು ನಿರ್ವಿಘ್ನವಾಗಿ ನೆರವೇರಿ ಕಾರ್ಯವು ಸಿದ್ಧಿಸುವುದರಿಂದ ದೇವತೆಗಳು ಇದನ್ನು ಪಠಿಸಿದರು. ಗಾಯತ್ರಿಯು ನಿರ್ವಿಘ್ನವಾಗಿ ಸೋಮವಿರುವ ಪ್ರದೇಶವನ್ನು ಸೇರಿ ತನ್ನ ಪಾದಗಳಿಂದಲೂ, ಮುಖದಿಂದಲೂ ಸೋಮವನ್ನೆತ್ತಿಕೊಂಡು ತ್ರಿಷ್ಟುಪ್ ಮತ್ತು ಜಗತಿಯು ಅಲ್ಲಿ ಬಿಟ್ಟು ಬಂದಿದ್ದ ನಾಲ್ಕು ಅಕ್ಷರಗಳನ್ನೂ ತೆಗೆದುಕೊಂಡು ಹಿಂತಿರುಗಿತು.[1]

---

1 "**ಸೋಮೋ ವೈ ರಾಜಾಮುಷ್ಮಿಂಲ್ಲೋಕ ಆಸೀತ್ ತಂ ದೇವಾಶ್ಚ ಋಷಯಶ್ಚಾಭ್ಯಧ್ಯಾಯನ್... ಪದ್ಭ್ಯಾಂ ಚ ಮುಖೇನ ಚ ಸೋಮಂ ರಾಜಾನಂ ಸಮಗೃಭ್ಣಾತ್**"

**(ಐ. ಬ್ರಾ. ೧೩.೨೬.)**

## ೨, ೩, ಛಂದಸ್ಸುಗಳಲ್ಲಿ ಗಾಯತ್ರಿಯ ವೈಶಿಷ್ಟ್ಯ ಮತ್ತು ಅದರ ಸರ್ವಸವನವ್ಯಾಪಕತ್ವ.

ಗಾಯತ್ರಿಯು ತ್ರಿಷ್ಟುಪ್ಪಿನ ಮೂರು ಅಕ್ಷರಗಳನ್ನೂ ಜಗತಿಯ ಒಂದಕ್ಷರವನ್ನೂ ತೆಗೆದುಕೊಂಡು ಹಿಂತಿರುಗಿದನಂತರ ಅವೆರಡೂ ಇದನ್ನು ಸಮೀಪಿಸಿ "ನಮ್ಮ ಅಕ್ಷರರೂಪವಾದ ಐಶ್ವರ್ಯವು ನಿನ್ನೊಡನೆ ಸೇರಿಬಂದಿದೆ. ಅವನ್ನು ಹಿಂತಿರುಗಿಸು" ಎಂದು ಪ್ರಾರ್ಥಿಸಿದಾಗ, ಗಾಯತ್ರಿಯು "ಇಲ್ಲ. ಅವು ನಿಮ್ಮವಲ್ಲ ನಾನು ಅವನ್ನು ತಂದುದರಿಂದ ಅವು ನನ್ನದೇ ಆಯಿತು" ಎಂದಿತು. ಅನಂತರ ಅವೆರಡೂ ದೇವತೆಗಳನ್ನು ಸಮೀಪಿಸಿ ತಮ್ಮ ದೂರನ್ನು ಹೇಳಿಕೊಂಡವು. ದೇವತೆಗಳು ಗಾಯತ್ರಿಯ ಪಕ್ಷವನ್ನೇ ವಹಿಸಿ "ನೀನು ಅವನ್ನು ಹಿಂದಕ್ಕೆ ತಂದುದರಿಂದ ಆ ಅಕ್ಷರಗಳು ನಿನ್ನದೇ ಆದವು" ಎಂದರು. ಆಗ ಗಾಯತ್ರಿಯು ಅಷ್ಟಾಕ್ಷರಾತ್ಮಕವಾಗಿಯೂ, ತ್ರಿಷ್ಟುಪ್ಪು ಮೂರು ಅಕ್ಷರಗಳುಳ್ಳದ್ದಾಗಿಯೂ, ಜಗತಿಯು ಒಂದೇ ಅಕ್ಷರವುಳ್ಳದ್ದೂ ಆದವು. ಆಗ ಗಾಯತ್ರಿಯು ಎಂಟು ಅಕ್ಷರಗಳೊಡನೆ ಪ್ರಾತಃಸವನದಲ್ಲಿ ಭಾಗವಹಿಸಲು ಸಮರ್ಥವಾಯಿತು. ಆದರೆ ತ್ರಿಷ್ಟುಪ್ಪು ತನ್ನ ಮೂರು ಅಕ್ಷರಗಳೊಡನೆ ಮಾಧ್ಯಂದಿನಸವನದಲ್ಲಿ ಭಾಗವಹಿಸಲಾಗಲಿಲ್ಲ. ಆಗ ನಾನೂ ಮಾಧ್ಯಂದಿನಸವನದಲ್ಲಿ ಭಾಗವಹಿಸುತ್ತೇನೆ ಎಂದು ಗಾಯತ್ರಿಯು ಹೇಳಿತು. ಮತ್ತು ಆ ಯಜ್ಞದಲ್ಲೂ ಭಾಗವನ್ನಪೇಕ್ಷಿಸಿತು. ತ್ರಿಷ್ಟುಪ್ಪು ಒಪ್ಪಿಕೊಂಡಿತು. ಆಗ ಮಾಧ್ಯಂದಿನಸವನದಲ್ಲಿ ಭಾಗವಹಿಸಿದ ತ್ರಿಷ್ಟುಪ್ಪಿಗೆ ಹನ್ನೊಂದಕ್ಷರವಿದ್ದಂತೆ ಆಯಿತು.

ಜಗತಿಯು ಏಕಾಕ್ಷರಾತ್ಮಕವಾಗಿ ತೃತೀಯಸವನದ ನಿರ್ವಹಣಕ್ಕೆ ಅಸಮರ್ಥವಾಯಿತು. ಆ ಸಾಮರ್ಥ್ಯವನ್ನುಂಟುಮಾಡಲು ಗಾಯತ್ರಿಯು ತಾನೂ ಅದರೊಂದಿಗೆ ಸೇರುವುದಾಗಿಯೂ ತನಗೂ ತೃತೀಯಸವನದಲ್ಲಿ ಭಾಗವಿರಬೇಕೆಂದೂ ಕೇಳಿತು. ಜಗತಿಯು ಹಾಗೇ ಆಗಲೆಂದು ಒಪ್ಪಲಾಗಿ ತೃತೀಯಸವನದ ಕಾಲದಲ್ಲಿ ಅದರೊಂದಿಗೆ ಸೇರಿ ಹನ್ನೆರಡು ಅಕ್ಷರಗಳುಳ್ಳದ್ದಾಗಿ (೮+೩+೧) ತೃತೀಯಸವನಕ್ಕೆ ಸಹಾಯಮಾಡಿತು. ಆಗ ಗಾಯತ್ರಿಯು ಎಂಟಕ್ಷರಗಳುಳ್ಳದ್ದಾಗಿಯೂ ತ್ರಿಷ್ಟುಪ್ಪು ಹನ್ನೊಂದಕ್ಷರ

ಗಳುಳ್ಳದ್ದಾಗಿಯೂ ಮತ್ತು ಜಗತಿಯು ಹನ್ನೆರಡಕ್ಷರಗಳುಳ್ಳದ್ದಾಗಿಯೂ ಆದವು.[1]

ಹೀಗೆ, ಗಾಯತ್ರಿಯ ಸಾಹಾಯ್ಯದಿಂದಲೇ ಉಳಿದ ಛಂದಸ್ಸುಗಳು ಶಕ್ತಿಯನ್ನು ಹೊಂದಿದುದರಿಂದ ಎಲ್ಲಕ್ಕಿಂತಲೂ ಗಾಯತ್ರಿಯೇ ಅಧಿಕವಾಯಿತು. ಆದ್ದರಿಂದಲೇ ಇದನ್ನು ಸಕಲ ಶ್ರುತಿವಾಕ್ಯಗಳೂ ಪ್ರಶಂಸಿಸುತ್ತವೆ. ಉದಾಹರಣೆಗೆ—

ಗಾಯತ್ರೀ ಕನಿಷ್ಠಾ ಛಂದಸಾಗ್ಂ ಸತೀ ಯಜ್ಞಮುಖಂ
ಪರೀಯಾಯ ।
(ತೈ. ಸಂ. ೬.೧.೬.೩.)

ಅಥಾತಃ ಶಿರಃ । ತದ್ಗಾಯತ್ರೀಷು ಭವತ್ಯಗ್ರಂ ವೈ ಛಂದಸಾಂ
ಗಾಯತ್ರ್ಯಗ್ರಮಂಗಾನಾಂ ಶಿರಃ ॥
(ಐ. ಆ. ೧.೪.೧.)

ಶರೀರದ ಅಂಗಗಳಿಗೆಲ್ಲ ಶಿರಸ್ಸೇ ಪ್ರಧಾನವಾಗಿರುವಂತೆ ಸಕಲ ಛಂದಸ್ಸುಗಳಿಗೂ ಗಾಯತ್ರಿಯೇ ಪ್ರಧಾನವಾಗಿ, ಅದರ ಆಧಾರದ ಮೇಲೆ ಉಳಿದ ಛಂದಸ್ಸುಗಳ ವೃದ್ಧಿಯುಂಟಾಯಿತು ಎಂದು ಪ್ರಶಂಸಿಸಿದೆ. ಆದ್ದರಿಂದಲೇ ಗಾಯತ್ರಿಯೇ ಸಕಲ ಛಂದಸ್ಸುಗಳಿಗೂ ಮಾತೆಯೆಂದೂ ಸ್ತುತಿಸಿದೆ.[2] ಐತರೇಯಾರಣ್ಯಕದ ವಾಕ್ಯಕ್ಕೆ ಸಾಯಣರು "ಇತರೇಷಾಂ ಛಂದಸಾಮಸ್ಯೈವ ಚತುಶ್ಚತುರಕ್ಷರಾಧಿಕ್ಯೇನ ತತ್ತಚ್ಛಂದೋಭಿಃ ಪ್ರತಿಮಿಮೀತೇ" ಎಂದು ವಿವರಣೆಯನ್ನು ಹೇಳಿದ್ದಾರೆ. ಎಂದರೆ, ಇತರ ಛಂದಸ್ಸುಗಳ ನಿರ್ಮಾಣವು ಈ ಛಂದಸ್ಸಿನ ಆಧಾರದಮೇಲೆ ಎಂದು ತಾತ್ಪರ್ಯ. ಅದು ಹೇಗೆಂದರೆ,

| | | |
|---|---|---|
| ಗಾಯತ್ರೀ | (೮ × ೩) = | ೨೪ ಅಕ್ಷರಗಳು. |
| ಉಷ್ಣಿಕ್ | ೨೪ + ೪ = | ೨೮ ,, |
| ಅನುಷ್ಟುಪ್ | ೨೪ + ೪ + ೪ = | ೩೨ ,, |

1 ಈ ಶತ್ತ್ವವನ್ನರಿತವನು, ಸಮಾನವಾದ ಶಕ್ತಿಯನ್ನೂ ವೈಭವವನ್ನೂ ಪಡೆದಿರುವ ಈ ಛಂದಸ್ಸುಗಳ ಅನುಗ್ರಹದಿಂದ, ಸಕಲ ಸಂಪತ್ತನ್ನೂ ಪಡೆಯುತ್ತಾನೆಂದು ಪ್ರಶಂಸಿಸಿದೆ.

2 ಗಾಯತ್ರೀಚ್ಛಂದಸಾಂ ಮಾತಾ । (ತೈ. ಉ. ೪.೨೬.)

| | | | |
|---|---|---|---|
| ಬೃಹತೀ | ೨೪+೪+೪+೪= | ೩೬ | ,, |
| ಪಂಙ್ಕ್ತಿಃ | ೨೪+೪+೪+೪+೪= | ೪೦ | ,, |
| ತ್ರಿಷ್ಟುಪ್ | ೨೪+೪+೪+೪+೪+೪= | ೪೪ | ,, |
| ಜಗತೀ | ೨೪+೪+೪+೪+೪+೪+೪= | ೪೮ | ,, |

ಈ ರೀತಿಯಾಗಿ ಗಾಯತ್ರಿಯ ಆಧಾರದ ಮೇಲೆ ನಾಲ್ಕು ಅಕ್ಷರಗಳು ಅಧಿಕವಾಗಿ ಉಷ್ಣಿಗಾದಿಗಳು ರಚಿತವಾಗಿವೆಯೆಂದು ತಾತ್ಪರ್ಯ. ಅಲ್ಲದೇ, ಸಕಲ ಯಜ್ಞಗಳಿಗೂ ಅಗ್ನಿಯೇ ಪ್ರಧಾನವಾದುದರಿಂದಲೂ, ಗಾಯತ್ರಿಯೇ ಅಗ್ನಿ ಪರ್ಯಾಯವಾದುದರಿಂದಲೂ ಇದು ಎಲ್ಲಕ್ಕೂ ಶಿರೋರೂಪವಾಗಿರುತ್ತದೆ.[1]

ಗಾಯತ್ರಿಯ ಸರ್ವಸವನವ್ಯಾಪಕತ್ವವೇ ಯಜ್ಞದಲ್ಲಿ ಗಾಯತ್ರಿಯ ಪ್ರಾಧಾನ್ಯವನ್ನು ತೋರಿಸುತ್ತದೆ ಎಂದು ಶ್ರೀ ಶಂಕರಾಚಾರ್ಯರು ಗಾಯತ್ರಿಯ ಪ್ರಧಾನಪಾತ್ರಕ್ಕೆ ಮೂರನೆಯ ಕಾರಣವನ್ನು ತೋರಿಸಿದ್ದಾರೆ. ಇದೇ ಅಂಶವನ್ನು ಐತರೇಯ ಬ್ರಾಹ್ಮಣದಲ್ಲಿ ಈ ರೀತಿ ತಿಳಿಸಿದೆ.

ಗಾಯತ್ರಿಯು ತನ್ನ ಬಲಭಾಗದ ಪಾದದಿಂದ ಹಿಡಿದುಕೊಂಡ ಸೋಮದ ಭಾಗವು ಪ್ರಾತಃಸವನವಾಯಿತು. ಪ್ರಾತಃಸವನವೇ ಗಾಯತ್ರಿಯ ನಿವಾಸಸ್ಥಾನ. ಆದ್ದರಿಂದಲೇ, ಪ್ರಾತಃಸವನವನ್ನು ಸವನಗಳಲ್ಲೆಲ್ಲ ಸಮೃದ್ಧತಮವೆಂದು ತಿಳಿದಿದ್ದಾರೆ. ಈ ತತ್ತ್ವವನ್ನು ತಿಳಿದವನು ಯಜ್ಞಕರ್ತರಲ್ಲಿ ಅಗ್ರಗಣ್ಯನೂ ಅತಿಮುಖ್ಯನೂ ಆಗುತ್ತಾನೆ. ಎಡಭಾಗದ ಪಾದದಿಂದ ಗಾಯತ್ರಿಯು ಹಿಡಿದುಕೊಂಡ ಸೋಮದ ಭಾಗವು ಮಾಧ್ಯಂದಿನ ಸವನವಾಯಿತು. ಅದು ಜಾರಿಹೋದುದರಿಂದ ಪ್ರಾತಃಸವನದ ಶ್ರೇಷ್ಠತೆಯು ಅದಕ್ಕೆ ಲಭಿಸಲಿಲ್ಲ. ದೇವತೆಗಳು ಈ ನ್ಯೂನತೆಯನ್ನು ಪರಿಪಡಿಸಲು ಪ್ರಯತ್ನಿಸಿ ಅದರಲ್ಲಿ ತ್ರಿಷ್ಟುಪ್ಪನ್ನೂ ಇಂದ್ರನನ್ನೂ ಸ್ಥಾಪಿಸಿದರು. ಅನಂತರ ಅದೂ ಪ್ರಾತಃಸವನದ ವೀರ್ಯವನ್ನೇ ಪಡೆಯಿತು.

ಮುಖದಿಂದ ಹಿಡಿದುಕೊಂಡ ಸೋಮದ ಭಾಗವು ತೃತೀಯಸವನವಾಯಿತು. ಹಾರುತ್ತಿರುವಾಗಲೆ ಶ್ಯೇನರೂಪವಾದ ಗಾಯತ್ರಿಯು ಅದನ್ನು

---

1 ಗಾಯತ್ರಂ ಪುರಸ್ತಾದ್ಗಾಯತಿ । ಅಗ್ನಿರ್ವೈ ಗಾಯತ್ರಮಗ್ನಿರ್ವೋ ವಾಸ್ಯ ತಚ್ಛಿರಃ ಕರೋತ್ಯಥೋ ಶಿರಃ ।

(ಶ. ಬ್ರಾ. ೯.೧.೨.೪೫.)

ಪಾನಮಾಡಿತು. ಆದ್ದರಿಂದ ಅದು ಮೊದಲಿನ ಎರಡು ಸವನಗಳ ಶಕ್ತಿಯನ್ನು ಪಡೆಯಲಾಗಲಿಲ್ಲ. ದೇವತೆಗಳು ಅದನ್ನು ಪಶುಗಳಲ್ಲಿ ವೀಕ್ಷಿಸಿ ಜಗತಿಯಿಂದಲೂ ಆಶಿರದಿಂದಲೂ ಆಜ್ಯಾರ್ಪಣೆಯಿಂದಲೂ ಆರಾಧಿಸಿದರು. ಆಮೇಲೆ ಅದೂ ಮೊದಲಿನ ಎರಡು ಸವನಗಳ ಶಕ್ತಿಯನ್ನು ಪಡೆಯಿತು. ಹೀಗೆ ಮೂರು ಸವನಗಳಲ್ಲೂ ಗಾಯತ್ರಿಯ ಪ್ರಭಾವವಿರುತ್ತದೆ.[1]

ಇತರ ಯಾವ ಛಂದಸ್ಸುಗಳ ಸಹಾಯವೂ ಇಲ್ಲದೆ ಗಾಯತ್ರಿಯು ಪ್ರಾತಃಸವನವನ್ನು ನಿರ್ವಹಿಸಬಲ್ಲುದು. ಉಳಿದ ಛಂದಸ್ಸುಗಳು ಗಾಯತ್ರಿಯ ಸಹಾಯವನ್ನೇ ಏಕೆ ನಂಬಬೇಕು ಎಂಬುದನ್ನು ಮೇಲೆ ತಿಳಿಸಿದೆ. ಗಾಯತ್ರಿಯು ಇತರ ಛಂದಸ್ಸುಗಳ ನ್ಯೂನತೆಯನ್ನು ಹೊಂದದೆ ಮತ್ತು ಅಪೂರ್ಣವಾಗಿರದೆ ಇದ್ದುದರಿಂದಲೇ ಇದಕ್ಕೆ ಸರ್ವಸವನವ್ಯಾಪಕತ್ವ. ಈ ಕಾರಣದಿಂದಲೇ ಇದರ ಜಯಸೂಚಕವಾದ ಮಂತ್ರವನ್ನು ಪೂರ್ಣವಾಗಿ ಪಠಿಸಬೇಕೆಂಬ ವಿಧಿಯಿದೆ. ಅವುಗಳಲ್ಲೆಲ್ಲ ಗಾಯತ್ರೀಚ್ಛಂದಸ್ಸಿನ ಪ್ರಾಶಸ್ತ್ಯವೂ, ಗಂಧರ್ವನೆಂದು ನಿರ್ದಿಷ್ಟನಾದ ಸವಿತೃವಿನ ಪ್ರಾರ್ಥನೆಯೂ ಅಡಕವಾಗಿವೆ. ಉದಾಹರಣೆಗೆ—

" ಅಸೌ ವಾ ಆದಿತ್ಯೋ ದೇವಃ ಸವಿತಾ ದಿವ್ಯೋ
ಗಂಧರ್ವಃ...ತಾನ್ಯೇತಾನ್ಯಷ್ಟೌ ಸಾವಿತ್ರಾಣಿ "

(ಶ. ಬ್ರಾ. ೬.೩.೧೯.)

" ಸವಿತೃದೇವನೇ, ನಮ್ಮ ಯಜ್ಞವು ಶೀಘ್ರವಾಗಿಯೂ ನಿರ್ವಿಘ್ನವಾಗಿಯೂ ನೆರವೇರುವಂತೆ ತ್ವರೆಪಡಿಸಿ ಪ್ರೇರಿಸು '' ಎಂಬ ವಾಜಸನೇಯ ಸಂಹಿತಾವಾಕ್ಯವನ್ನು ಪಠಿಸಬೇಕು. (೧೧.೭.) ಸವಿತೃವೇ ಆದಿತ್ಯನು. ಯಜ್ಞಭಾಗವೆಲ್ಲ ಅವನಿಗೆ ಸೇರಿದುದು. " ಚಿತ್ತಶುದ್ಧಿಕಾರಕನೂ ಅಂತರಿಕ್ಷದ ಗಂಧರ್ವನೂ ಆದ ಸವಿತೃವೇ ಆದಿತ್ಯನು. ಅವನು ಯಜ್ಞವನ್ನು ಸಾಂಗವಾಗಿ ನೆರವೇರುವಂತೆ ಮಾಡಲಿ " ಎಂಬುದೇ ಪ್ರಾರ್ಥನೆ. ರಥಂತರಸಾಮವನ್ನು ಗಾಯತ್ರೀಚ್ಛಂದಸ್ಸಿನೊಡನೆಯೂ, ಬೃಹತ್‌ಸಾಮವನ್ನು ಗಾಯತ್ರೀ

1 " ಸಾ ಯದ್ದಕ್ಷಿಣೇನ ಪದಾ....ಸವನಾನಾಮಗ್ರಿಯೋ ಮುಖ್ಯೋ ಭವತಿ " (ಐ. ಬ್ರಾ. ೧೩.೨೭.)

ಪ್ರಮಾಣದೊಡನೆಯೂ ಯೋಜಿಸಿ ಸಿದ್ಧಿಕಾರಕವಾದ ಮಂತ್ರವನ್ನು ನಿರ್ಮಿಸಿ ಪಠಿಸಿದರೆ ಅದು ಸಂಪತ್ಸಿದ್ಧಿಯನ್ನೂ ಸ್ವರ್ಗಸಿದ್ಧಿಯನ್ನೂ ಸರ್ವದಾ ಒದಗಿಸಿಕೊಡುತ್ತದೆ. ಸವಿತೃವನ್ನು ಪ್ರಾರ್ಥಿಸಿ ಪಠಿಸುವ ಮಂತ್ರಗಳು ಅಷ್ಟ ಸಂಖ್ಯಾಕವಾಗಿವೆ. ಗಾಯತ್ರಿಯು ಅಷ್ಟಾಕ್ಷರಾತ್ಮಕವಾದುದರಿಂದಲೇ ಈ ಮಂತ್ರಗಳ ಸಂಖ್ಯೆಯೂ ಎಂಟಾಗಿದೆ. ಯಜ್ಞಕ್ಕೆಲ್ಲ ಪ್ರಧಾನವಾದ ಅಗ್ನಿಯೇ ಗಾಯತ್ರವಾದುದರಿಂದ ಅಗ್ನಿಯ ವೈಭವವೇ ಗಾಯತ್ರಿಯ ವೈಭವ ಎಂದು ಯಜ್ಞಕಾಲದಲ್ಲಿ ಗಾಯತ್ರಿಯ ಪ್ರಾಧಾನ್ಯವು ತಿಳಿಸಲ್ಪಟ್ಟಿದೆ.

## ಅಗ್ನಿ, ಗಾಯತ್ರೀ ಮತ್ತು ಶ್ಯೇನ.

ಛಂದಸ್ಸುಗಳಲ್ಲೆಲ್ಲ ಅತಿಕನಿಷ್ಠವಾಗಿದ್ದರೂ ಗಾಯತ್ರಿಯು ತನ್ನ ಮಹಿಮೆಯಿಂದ ಅಂತರಿಕ್ಷದಿಂದ ಸೋಮವನ್ನು ಅಪಹರಿಸಿಕೊಂಡು ಬಂದಿತು. ಇದು ಅದರ ಆತ್ಮಶಕ್ತಿಯಿಂದ ಮಾತ್ರ ಸಾಧ್ಯವಾಯಿತು. ಆದ್ದರಿಂದಲೇ ದೇವತೆಗಳೂ ಇದಕ್ಕೆ ಅಗ್ರಮರ್ಯಾದೆಯನ್ನು ತೋರಿಸಿ ಗೌರವಿಸಿದರು.[1] ಯಾವ ಗಾಯತ್ರಿಯು ತನ್ನ ಆತ್ಮಶಕ್ತಿಯಿಂದ ಶ್ಯೇನ ರೂಪವಾಗಿ ಪರಿವರ್ತಿತವಾಗಿ ಸೋಮವನ್ನು ತಂದಿತೋ ಅದು ಅಗ್ನಿಯೇ ಆಲ್ಲದೆ ಬೇರೆಯಲ್ಲ. "ಅಗ್ನಿರ್ವೈ ಗಾಯತ್ರೀ.........ಯದ್ಗಾಯತ್ರೀ ಶ್ಯೇನೋ ಭೂತ್ವಾ"[2] ಇತ್ಯಾದಿ ಬ್ರಾಹ್ಮಣ ವಾಕ್ಯಗಳು ಅಗ್ನಿ, ಗಾಯತ್ರೀ ಮತ್ತು ಶ್ಯೇನ ಇವುಗಳ ತಾದಾತ್ಮ್ಯವನ್ನು ತೋರಿಸುತ್ತವೆ. ಇದೇ ವಿಷಯವನ್ನು ಋಕ್ಸಂಹಿತಾವಾಕ್ಯಗಳೂ ಅನೇಕಕಡೆಗಳಲ್ಲಿ ಸಮರ್ಥಿಸುತ್ತವೆ.[3]

ಅಗ್ನಿಗೂ ಪ್ರಾತಃಸವನಕ್ಕೂ ಇರುವ ಸಂಬಂಧವು ಪ್ರಸಿದ್ಧವಾದುದು. "ಜಾತವೇದೋರೂಪನಾದ ಎಲೈ ಅಗ್ನಿಯೇ, ಪ್ರಾತಃಸವನಕಾಲದಲ್ಲಿ ನಮ್ಮ

---

1 "ತದ್ವೀರ್ಯೇಣೈವ ಯಚ್ಛ್ಯೇನೋ ಭೂತ್ವಾ ... ಗಾಯತ್ರೀ ಪ್ರಥಮಾ ಛಂದಸಾಂ ಯುಜ್ಯತೇ" (ಶ. ಬ್ರಾ. ೧.೮.೧೦.)

2 ಶ. ಬ್ರಾ. III 9.4.10.
ಅಗ್ನಿರ್ವೈ ಗಾಯತ್ರೀ, ಗಾಯತ್ರಮಗ್ನೇಶ್ಛಂದಃ
T. S. 2.2.55.

3 ಋ. ಸಂ. ೧೦.೧೪೦.೪. T. B. 1.1.5 .

ಹವಿಸ್ಸನ್ನು ಸೇವಿಸು" ಇತ್ಯಾದಿ ಋಕ್ಸಂಹಿತಾವಾಕ್ಯರೂಪವಾದ ಪ್ರಾರ್ಥನೆಗಳು (೪.೨೮.೧.) ಈ ಸಂಬಂಧವನ್ನು ತಿಳಿಸುತ್ತವೆ.

ಗಾಯತ್ರೀ, ಶ್ಯೇನ ಇವು ಬೇರೆ ಬೇರೆ ತತ್ತ್ವವನ್ನು ತಿಳಿಸುವುದಿಲ್ಲ. ಅವು ಒಂದೇ ವಸ್ತುವಿನ ನಾಮಾಂತರಗಳು ಎಂದು ಮೇಲೆ ತಿಳಿಸಿದೆ. ಯಾವ ಗಾಯತ್ರಿಯು ಶ್ಯೇನರೂಪದಲ್ಲಿ ಹೋಗಿ ಸೋಮಾಹರಣವನ್ನು ಮಾಡಿತೋ ಅದೇ ಗಾಯತ್ರಿಯೂ ಅಗ್ನಿಯಲ್ಲದೆ ಬೇರೆಯಲ್ಲ ಎಂಬುದನ್ನೂ ತಿಳಿಸಿದೆ. ಆದ್ದರಿಂದ ಅಗ್ನಿ, ಶ್ಯೇನ ಇವೂ ಬೇರೆ ಬೇರೆ ತತ್ತ್ವಗಳಲ್ಲ. ಇದಕ್ಕೆ ಋಕ್ಸಂಹಿತಾವಾಕ್ಯವೇ ಆಧಾರ.

ನವಂ ನು ಸ್ತೋಮಮಗ್ನಯೇ ದಿವಃಶ್ಯೇನಾಯ ಜೀಜನಂ ।
(ಋ. ಸಂ. ೭.೧೫.೪.)

ಇತ್ಯಾದಿ ವಾಕ್ಯಗಳಲ್ಲಿ ಅಗ್ನಿಯನ್ನು ದ್ಯುಲೋಕದ ಶ್ಯೇನವೆಂದು ತಿಳಿಸಿದೆ. ಇದೇ ವಾಕ್ಯವನ್ನು ತೈತ್ತಿರೀಯ ಬ್ರಾಹ್ಮಣದಲ್ಲೂ ಉದಾಹರಿಸಿದೆ. (ತೈ. ಬ್ರಾ. ೨.೪.೮.೧.). ಇದಲ್ಲದೇ, **ದಿವಃ ಶ್ಯೇನಃ** ಎಂಬ ವರ್ಣನವು ಋಕ್ಸಂಹಿತೆಯ ಇತರೆಡೆಗಳಲ್ಲಿಯೂ ಇವೆ. ಇವು ಮರುದ್ದೇವತಾಕವಾದ ವಾಕ್ಯಗಳು. ಇವು ವೈದ್ಯುತಾಗ್ನಿಯ ವರ್ಣನೆಯನ್ನುಮಾಡುವುದರಿಂದಲೂ ಇಂಥ ಸ್ಥಳಗಳಲ್ಲೂ ಅಗ್ನಿಗೂ ಶ್ಯೇನಕ್ಕೂ ತಾದಾತ್ಮ್ಯವಿದೆಯೆಂದು ಹೇಳಬಹುದು.[1] ವೈಶ್ವಾನರನು ವಿದ್ಯುದ್ರೂಪನು ಎಂಬ ವರ್ಣನವು ಅನೇಕಕಡೆಗಳಲ್ಲಿ ಅಗ್ನ್ಯುತ್ಪನ್ನವಾದ ಅಥವಾ ಅಗ್ನಿರೂಪವನ್ನು ಹೊಂದಿರುವ ಗಾಯತ್ರಿಯೂ ವಿದಿದ್ಯುತತೀ ಎಂಬ ವಿಶೇಷಣದಿಂದಲೇ ವರ್ಣಿತವಾಗಿದೆ.[2] ಇದೇ ಬ್ರಾಹ್ಮಣ ವಾಕ್ಯವನ್ನು ಭಾಷ್ಯಕಾರರು ವಿವರಿಸುತ್ತ "ಗಾಯತ್ರಿಯೂ ಅಗ್ನಿಯ ಜೊತೆಯಲ್ಲಿ ಉತ್ಪನ್ನವಾದುದರಿಂದ ವಿದಿದ್ಯುತನಕ್ರಿಯೆಯು ಅಗ್ನಿಗೆ ಅನ್ವಿತವಾಗು

---

1 ಅಭಿ ಸ್ವಪೂಭಿರ್ಮಿಥೋ ವಪಂತ ವಾತಸ್ವನಸಃ ಶ್ಯೇನಾ ಅಸ್ಪೃಧ್ರನ್ ।
(೭.೫೬.೪.)

ಆಪ್ರಿಣಾ ರುದ್ರಾ ಮರುತೋ ವಿಶ್ವಕೃಷ್ಟಯೋ ದಿವಃ ಶ್ಯೇನಾಸೋ
ಅಸುರಸ್ಯ ನೀಳಯಃ ।
ತೇಭಿಶ್ಚಷ್ಟೇ ವರುಣೋ ಮಿತ್ರೋ ಅರ್ಯಮೇಂದ್ರ...॥ (೧೦.೯೨.೬.)

2 ಶ. ಬ್ರಾ. ೧೨ ೧.೨.

ವಂತೆಯೇ ಗಾಯತ್ರಿಗೂ ಅನ್ವಿತವಾಗುತ್ತದೆಂದು ತಿಳಿಸಿದ್ದಾರೆ.[1] '**ತೇಜೋ ಗಾಯತ್ರೀ**' ಇತ್ಯಾದಿ ವಾಕ್ಯಗಳಲ್ಲಿ ವರ್ಣಿತವಾಗಿರುವಂತೆ ಗಾಯತ್ರಿಯೂ ಅಗ್ನಿಯಂತೆಯೇ ತೇಜೋರೂಪವುಳ್ಳದ್ದಾಗಿರುತ್ತದೆ. **ದಿವಃ ಶ್ಯೇನದ** ತೇಜಸ್ಸೂ ಇದೇ ರೀತಿ ವರ್ಣಿತವಾಗಿದೆ. ತೈತ್ತಿರೀಯ ಬ್ರಾಹ್ಮಣದಲ್ಲಿ "ದಿವಃಶ್ಯೇನ ಇಷ್ಟಿ" ಪ್ರಕರಣದಲ್ಲಿ 'ತುಭ್ಯಂ ತಾ ಅಂಗಿರಸ್ತಮ'[2] ಎಂಬ ಮಂತ್ರವು ಅಗ್ನಿಯನ್ನೇ ನಿರ್ದೇಶಿಸಿದೆಯೆಂದು ಸ್ಪಷ್ಟವಾಗಿದೆ. ಅಲ್ಲದೇ ಅದೇ ಪ್ರಕರಣದಲ್ಲಿ "ಅಶ್ಯಾಮ ತಂ ಕಾಮಮಗ್ನೇ" ಎಂಬ ಮಂತ್ರವೂ ಅಗ್ನಿಯನ್ನೇ ಉದ್ದೇಶಿಸಿದೆ ಆದ್ದರಿಂದ ದಿವಃಶ್ಯೇನ ಎಂಬ ವಿಶೇಷಣದಿಂದ ಅಗ್ನಿಯ ವರ್ಣನವೇ ಆಗಿದೆಯೆಂಬುದರಲ್ಲಿ ಸಂದೇಹವಿಲ್ಲ.

ಇದಲ್ಲದೇ, ಸುಪರ್ಣ ಪದವೂ ಶ್ಯೇನವನ್ನು ನಿರ್ದೇಶಿಸುವಂತೆಯೇ, ಅಗ್ನಿಯನ್ನೂ ನಿರ್ದೇಶಿಸುತ್ತದೆ. ಪಕ್ಷಿಪರ್ಯಾಯವಾದ ಸುಪರ್ಣಪದಕ್ಕೆ ಅನೇಕ ಕಡೆಗಳಲ್ಲಿ ಗೂಢಾರ್ಥವಿದೆ.

ಸುಪರ್ಣಂ ವಿಪ್ರಾಃ ಕವಯೋ ವಚೋಭಿರೇಕಂ ಸಂತಂ
ಬಹುಧಾ ಕಲ್ಪಯಂತಿ |
[ಋ. ಸಂ. ೧೦.೧೧೪.೫]

ಎಂಬಲ್ಲಿ ಪರಮಾತ್ಮನ ವಿಶೇಷಗುಣವನ್ನು ವರ್ಣಿಸುತ್ತದೆಂದು ಸಾಯಣರ ಮತ. ತತ್ತ್ವಾರ್ಥವನ್ನು ಬೇರೆಡೆ ವಿವರಿಸಿದೆ. ಇನ್ನು ಕೆಲವೆಡೆಗಳಲ್ಲಿ ಇದೇ ಸುಪರ್ಣಪದವು ಆದಿತ್ಯ ಅಥವಾ ಅಗ್ನಿಪರವಾಗಿ ಉಪಯುಕ್ತವಾಗಿರುವ ಸಂದರ್ಭದಲ್ಲಿ ರಶ್ಮಿ ಎಂಬ ಅರ್ಥವನ್ನು ಕೊಡುತ್ತದೆ.[3] ಅಲ್ಲದೆ ಇದೇ ಪದವು ಅಗ್ನಿ ಅಥವಾ ಆದಿತ್ಯನಿಗೆ ಪರ್ಯಾಯವಾಗಿಯೂ ಉಪಯುಕ್ತವಾಗಿದೆ.

---

1 ತೈ. ಬ್ರಾ. ೩.೮.೪.

2 ತೈ. ಬ್ರಾ. ೩.೧೨. ೧–೨.
"ತುಭ್ಯಂ ತಾ ಅಂಗಿರಸ್ತಮ" ಋ. ಸಂ. ೮.೪೩.೧೮.
"ಅಶ್ಯಾಮ ತಂ ಕಾಮಮಗ್ನೇ" ಋ. ಸಂ. ೬.೫.೭.

3 ಸುಪರ್ಣಾಃ—ಶೋಭನಗಮನಾ ರಶ್ಮಯಃ
ಸಾ. ಭಾ. ೧.೧೬೪.೨೧.

ದಿವ್ಯಂ ಸುಪರ್ಣಂ ವಾಯಸಂ ಬೃಹಂತಮಪಾಂ ಗರ್ಭಂ
ದರ್ಶತಮೋಷಧೀನಾಂ ।
[೧.೧೬೪.೫೨.]

ಎಂಬ ವರ್ಣನವು ಅಂತರಿಕ್ಷಸ್ಥನಾದ ಅಗ್ನಿಯನ್ನು ನಿರ್ದೇಶಿಸುತ್ತದೆ. **ದಿವಃಶ್ಯೇನಃ, ದಿವ್ಯಂ ಸುಪರ್ಣಂ** ಎಂಬಲ್ಲಿ ಅಗ್ನಿಗೂ ಆದಿತ್ಯನಿಗೂ ತಾದಾತ್ಮ್ಯವನ್ನೇ ಹೇಳಿದೆ. ಹೀಗೆ ಶ್ಯೇನ, ಸುಪರ್ಣ, ಅಗ್ನಿ, ಗಾಯತ್ರೀ ಇವೆಲ್ಲವೂ ಒಂದೇ ತತ್ತ್ವದ ಪರ್ಯಾಯಪದಗಳೆಂದು ಸ್ಪಷ್ಟವಾಗಿದೆ.

## ಸೋಮವೇ ಆದಿತ್ಯನ ತೇಜಸ್ಸು :
## ಗಾಯತ್ರಿಯೇ ಇದನ್ನರಿಯಲು ಮುಖ್ಯಸಾಧನ.

ಪ್ರಕೃತದಲ್ಲಿ ಶ್ಯೇನಪದಕ್ಕೆ ಅಂತರಿಕ್ಷಸ್ಥನಾದ ಅಗ್ನಿಯೆಂದಾಗಲಿ ಅಥವಾ ಆದಿತ್ಯನೆಂದಾಗಲಿ ಅರ್ಥಮಾಡಿದರೆ, ಸೋಮಶಬ್ದಕ್ಕೆ ಆದಿತ್ಯನ ರೇತಸ್ಸೆಂದರ್ಥ. ಎಂದರೆ, ಆದಿತ್ಯರೂಪದಲ್ಲಿರುವ ಪರಬ್ರಹ್ಮನಿಗೂ ಸೋಮವೇ ರೇತೋರೂಪದಲ್ಲಿರುತ್ತದೆ. ಈ ಸೋಮವೇ ಸಕಲ ಭೂತಗಳ ಸೃಷ್ಟಿಗೂ ಬೀಜ.

ಅದ್ವಿತೀಯನಾದ ಪರಬ್ರಹ್ಮನು ತನ್ನ ರೇತಸ್ಸಿನಿಂದ ವಿಶ್ವದಲ್ಲಿ ಆರ್ದ್ರವಾಗಿರುವ ಸಕಲ ವಸ್ತುಗಳನ್ನೂ ಉತ್ಪನ್ನಮಾಡಿದನು. ಆ ರೇತಸ್ಸೇ ಸೋಮ. ಈ ಸೋಮವು ಅಗ್ನಿಯಲ್ಲಿ ಅರ್ಪಿತವಾಗಿ ಎರಡೂ ಪರಸ್ಪರ ಭಕ್ಷ್ಯಭಕ್ಷಕಗಳಾಗುತ್ತವೆ, ಎಂದು ಬೃಹದಾರಣ್ಯಕದಲ್ಲೂ[1] ಸೋಮನು ಆದಿತ್ಯಮಂಡಲದ ಮಧ್ಯವರ್ತಿಯಾಗಿಯೂ, ಅಗ್ನಿಯು ಸೋಮದ ಮಧ್ಯವರ್ತಿಯಾಗಿಯೂ ಇರುವ ವಿಷಯವನ್ನು ಮೈತ್ರ್ಯುಪನಿಷತ್ತಿನಲ್ಲಿಯೂ[2]

---

1 **ಅಥ ಯತ್ಕಿಂಚೇದಮಾರ್ದ್ರಂ ತದ್ರೇತಸೋಽಸೃಜತ ತದು ಸೋಮ ಏತಾವದ್ವಾ ಇದಗ್ಂ ಸರ್ವಮನ್ನಂ ಚೈವಾನ್ನಾದಶ್ಚ ಸೋಮ ಏವಾನ್ನಮಗ್ನಿರನ್ನಾದಃ ಸೈಷಾ ಬ್ರಹ್ಮಣೋಽತಿಸೃಷ್ಟಿಃ**

**(ಬೃ. ಉ. ೧.೪.೬.)**

2 **" ರವಿಮಧ್ಯೇ ಸ್ಥಿತಃ ಸೋಮಃ ಸೋಮಮಧ್ಯೇ ಹುತಾಶನಃ ॥ "**

**(ಮೈ. ಉ. ೬.೩೮.)**

ತಿಳಿಸಿದೆ. ಆದಿತ್ಯನಿಗೂ ಸೋಮನಿಗೂ ಇರುವ ಸಂಬಂಧವನ್ನು ಋಕ್ಸಂಹಿತೆಯಲ್ಲಿ ಸಾಧಾರಣವಾಗಿ ಅನೇಕಕಡೆ ವಿವರಿಸಿದೆ. ಉದಾಹರಣೆಗೆ,

"ಆದಿತ್ಯಸ್ಥವಾದ ಉದಕಗಳ ಗರ್ಭಭೂತವಾದ ಸೋಮವು ದೇವತೆಗಳಿಗೂ ತೃಪ್ತಿಯನ್ನುಂಟುಮಾಡಿತು. ವೀರ್ಯರೂಪದಲ್ಲಿದ್ದು ಆದಿತ್ಯನಲ್ಲಿ ವಿಶ್ವಜ್ಯೋತಿಯನ್ನು ಉತ್ಪನ್ನಮಾಡಿತು"[1]

"ಸೋಮನೇ ಅಂತರಿಕ್ಷಸ್ಥವಾದ ಸಮುದ್ರ. ಸಕಲ ಜ್ಯೋತಿಗೂ ಆಧಾರ. ಆದಿತ್ಯನು ಸೋಮದ ಪ್ರಭಾವದಿಂದಲೇ ಬೆಳಗುತ್ತಿದ್ದಾನೆ"[2] ಎಂದು ತಿಳಿಸಿದೆ. ಎಂದರೆ, ಸೋಮವೇ ಆದಿತ್ಯನ ತೇಜಃಸತ್ವವೆಂದೂ, ಇಂಥ ತೇಜಸ್ಸಿನ ಸ್ವರೂಪಸಾಕ್ಷಾತ್ಕಾರವು ಗಾಯತ್ರಿಯ ಸಾಹಾಯ್ಯದಿಂದ ಮಾತ್ರ ಲಭ್ಯವೆಂದೂ ತಾತ್ಪರ್ಯ.[3]

ಎರಡನೆಯದಾಗಿ, "ಸೋಮೋ ವೈ ರಾಜಾ ಗಂಧರ್ವೇಷ್ವಾಸೀತ್.... ತಯಾ ಮಹಾನಗ್ನ್ಯಾಭೂತಯಾ ಸೋಮಂ ರಾಜಾನಮಕ್ರೀಣನ್"

---

1 ಮಹತ್ತತ್ಸೋಮೋ ಮಹಿಷಶ್ಚಕಾರಾಪಾಂ ಯದ್ಗರ್ಭೋಽವೃಣೀತ ದೇವಾನ್ |
ಅದಧಾದಿಂದ್ರೇ ಪವಮಾನ ಓಜೋಽಜನಯತ್ಸೂರ್ಯೇ ಜ್ಯೋತಿರಿಂದುಃ ||
(೯.೯೭.೪೧.)

2 ತ್ವಂ ಸಮುದ್ರೋ ಅಸಿ ವಿಶ್ವವಿತ್ಕವೇ ತವೇಮಾಃ ಪಂಚ ಪ್ರದಿಶೋ ವಿಧರ್ಮಣಿ |
ತ್ವಂ ದ್ಯಾಂ ಚ ಪೃಥಿವೀಂ ಚಾತಿ ಜಭ್ರಿಷೇ ತವ ಜ್ಯೋತೀಂಷಿ ಪವಮಾನ ಸೂರ್ಯಃ ||
(೯.೮೬.೨೯.)

3 "The poet of IX. 86. 29, while saying 'Thou art the heavenly ocean (ಸಮುದ್ರ), thine are the lights (ಜ್ಯೋತೀಂಷಿ) O pavamana, thine the Sun', seems to conceive soma, as the bright ether, the azure 'sea of light', generally".

(Eggling, Sacred Books of the East.
Vol. XXVI. P. XV.)

ಎಂದು ಐತರೇಯ ಬ್ರಾಹ್ಮಣದಿಂದ ಉದಾಹೃತವಾದ ಕಥೆಯಲ್ಲಿ (೧.೨೭) ಗಾಯತ್ರಿಯ ಸ್ಥಾನವೇನು ಎಂಬ ಪ್ರಶ್ನೆಗೂ ಸೋಮಾಹರಣವು ವಾಗ್ರೂಪಿಯಾದ ಸ್ತ್ರೀಯಿಂದ ನಡೆಯಿತೇ ಹೊರತು ಗಾಯತ್ರಿಗೂ ಸೋಮಕ್ಕೂ ಸಂಬಂಧವಿಲ್ಲ ಎಂಬ ಆಶಂಕೆಗೂ ಕಾರಣವಿಲ್ಲ. ಇಲ್ಲಿ ಗಂಧರ್ವಶಬ್ದಕ್ಕೆ ಆದಿತ್ಯನೆಂದೂ, ಸೋಮಶಬ್ದಕ್ಕೆ ಆದಿತ್ಯನ ತೇಜಸ್ಸೆಂದೂ ವಾಕ್‌ಶಬ್ದಕ್ಕೆ ವಾಗ್ರೂಪವಾದ ಗಾಯತ್ರಿಯೆಂದೂ ಅರ್ಥಮಾಡಬೇಕು. ಇದಕ್ಕೆ ಶ್ರುತಿ ವಾಕ್ಯಗಳೇ ಆಧಾರ

ಗಂಧರ್ವ ಇತ್ಥಾ ಪದಮುಸ್ಯ ರಕ್ಷತಿ ಪಾತಿ ದೇವಾನಾಂ
ಜನಿಮಾನ್ಯದ್ಭುತಃ ॥

[೯.೮೩.೪]

ಉದಕಧಾರಕನಾದ ಆದಿತ್ಯನು ಸೋಮದ ನಿವಾಸಸ್ಥಾನವನ್ನು ರಕ್ಷಿಸುತ್ತಾನೆ. ಈ ಸೋಮವು ದೇವತೆಗಳನ್ನು ರಕ್ಷಿಸುತ್ತದೆಯೆಂಬ ಆದಿತ್ಯಸ್ತುತಿಯಿದೆ, ಇದೇ ಗಂಧರ್ವನು ಹಿರಣಗರ್ಭನೆಂದೂ ವ್ಯವಹಾರವಿದೆ. ಬ್ರಹ್ಮಾಂಡಾಂತರ್ಗನಾದ ಹಿರಣ್ಯಗರ್ಭರೂಪನಾದ ಗಂಧರ್ವನು ಪ್ರಥಮತಃ ತನ್ನಲ್ಲಿ ನಿಹಿತವಾದ ವಾಕ್ಕನ್ನುಚ್ಚರಿಸಿದನು. ಅನಂತರ ಕ್ರಾಂತದರ್ಶಿಗಳಾದ ದೇವತೆಗಳು ಆ ವಾಕ್ಕನ್ನು ಸತ್ಯಸ್ಥಾನದಲ್ಲಿರಿಸಿದರು ; ಎಂದು ಆದಿತ್ಯರೂಪನಾದ ಪರಮಾತ್ಮನಿಗೂ ವಾಕ್ಕಿಗೂ ಇರುವ ಸಂಬಂಧವನ್ನು ವರ್ಣಿಸಿದೆ. ಶತಪಥಬ್ರಾಹ್ಮಣದಲ್ಲಿ ಉಕ್ತವಾಗಿರುವ ಸೋಮಾಹರಣದ ಕಥೆಯು ಆದಿತ್ಯಾಂತರ್ಗತವಾಗಿರುವ ಪರಮಪುರುಷನಿಗೂ ವಾಕ್ತತ್ತ್ವಕ್ಕೂ ಇರುವ ಸಂಬಂಧವನ್ನೂ ಅನಂತರ ಆದಿತ್ಯತೇಜೋರೂಪಿಯಾದ ಸೋಮವು ದೇವಪಾಲಕವಾದುದನ್ನೂ ತಿಳಿಸುತ್ತದೆ.

'ಸೋಮೋ ವೈ ಭ್ರಾಟ್' (ಶ. ಬ್ರಾ. ೩.೨.೪.೪.) ಇತ್ಯಾದಿ ವಾಕ್ಯಗಳಿಂದ ಸೋಮನೇ ತೇಜಸ್ಸೆಂದು ವರ್ಣಿತವಾಗಿದೆ. ಆದಿತ್ಯರೂಪಿಯಾದ ಗಂಧರ್ವನ ಅನುಗ್ರಹದಿಂದ ಸೋಮಾತ್ಮಕವಾದ ತೇಜಸ್ಸು ವಾಗಾತ್ಮಕವಾದ ಗಾಯತ್ರಿಯ ಮೂಲಕ, ಗಾಯತ್ರಿಯದ್ವಾರಾ ಉಪಾಸನೆ ಮಾಡತಕ್ಕ ಪುರುಷನಿಗೆ ಲಭ್ಯವಾಗುವುದೆಂದರ್ಥ.

ಹೀಗೆ, ಶ್ರುತಿವಾಕ್ಯಪ್ರಮಾಣಗಳೊಡನೆ **ಸುಪರ್ಣ, ಸೋಮ ಗಂಧರ್ವ, ವಾಕ್** ಇತ್ಯಾದಿ ಪದಗಳಿಗೆ ಹೇಳಿರುವ ತಾತ್ಪರ್ಯವು ಅಸಾಧು ವಲ್ಲವೆಂಬುದಕ್ಕೆ ಋಕ್ಸಂಹಿತಾ ವಾಕ್ಯಗಳೂ ಸಮರ್ಥನೆಯನ್ನು ಕೊಡುತ್ತವೆ. ಉದಾಹರಣೆಗೆ ಒಂದೆರಡು ಮಂತ್ರಗಳನ್ನು ಪರಿಶೀಲಿಸಬಹುದು.

ಚತುಷ್ಕಪರ್ದಾ ಯುವತಿಃ ಸುಪೇಶಾ ಘೃತಪ್ರತೀಕಾ ವಯುನಾನಿ वಸ್ತೇ ।
ತಸ್ಯಾಂ ಸುಪರ್ಣಾ ವೃಷಣಾ ನಿಷೇದತುರ್ಯತ್ರ ದೇವಾ ದಧಿರೇ, ಭಾಗಧೇಯಂ ॥

(ಋ. ಸ. ೧೦.೧೧೪.೩).

ನಾಮ, ಆಖ್ಯಾತ, ಉಪಸರ್ಗ ಮತ್ತುನಿಪಾತ ಎಂಬ ನಾಲ್ಕು ಕಪರ್ದಾತ್ಮಕ ವಾದವಳೂ (ವಸ್ತ್ರ) ನಿತ್ಯ ತರುಣೀರೂಪಳೂ, ದೇದೀಪ್ಯಮಾನವಾದ ಉಪನಿಷದಾದಿಸ್ವರೂಪಳೂ ಆದ ಸ್ತ್ರೀಯು ಜ್ಞಾನರೂಪವಾದ ವಸ್ತ್ರಗಳಿಂದ ಅಲಂಕರಿಸಿಕೊಳ್ಳುತ್ತಾಳೆ. ಅಂಥ ಸುಂದರಸ್ತ್ರೀಯಲ್ಲಿ ಜೀವಾತ್ಮಾ ಮತ್ತು ಪರಮಾತ್ಮರು ಸ್ಥಾಪಿತರಾಗುತ್ತಾರೆ. ಸುಪರ್ಣಾತ್ಮಕವೆಂದೂ, ಗಂಧರ್ವಾತ್ಮಕರೆಂದೂ ವರ್ಣಿತವಾಗಿರುವ ಜ್ಯೋತಿಸ್ತತ್ತ್ವವನ್ನು ಸಾಕ್ಷಾತ್ಕರಿಸಲು ವಾಗ್ರೂಪಿಯಾದ ಸ್ತ್ರೀಯಿಂದ ಮಾತ್ರ ಸಾಧ್ಯವೆಂದರ್ಥ. ಅದನ್ನೇ "ಯೋಷಿತ್ಕಾಮಾ ವೈ ಗಂಧರ್ವಾಃ" ಇತ್ಯಾದಿಯಾಗಿ ವರ್ಣಿಸಿದೆಯೆಂದು ಸಾಯಣರು ಅಭಿಪ್ರಾಯಪಡುತ್ತಾರೆ.

ಛಂದಾಂಸಿ ಚ ದಧತೋ ಅಧ್ವರೇಷು ಗ್ರಹಾನ್ತ್ಸೋಮಸ್ಯ ಮಿಮತೇ ದ್ವಾದಶ ॥

(ಋ. ಸಂ. ೧೦.೧೧೪.೫)

ಇತ್ಯಾದಿ ಋಕ್ಕುಗಳಲ್ಲಿಯೂ ಮೇಲಿನ ಅಭಿಪ್ರಾಯವೇ ವಿವರಿಸಲ್ಪಟ್ಟಿದೆ. ಸುಪರ್ಣರೂಪದ ಪರಮಾತ್ಮ, ಗಾಯತ್ರ್ಯಾದಿಛಂದಸ್ಸುಗಳು ಮತ್ತು ಪೂಜಾಸಾಧಕವಾದ ಸೋಮ ಇವುಗಳ ಸಂಬಂಧವನ್ನುತಿಳಿಸಿ ಗಾಯತ್ರ್ಯಾದಿ ಛಂದಸ್ಸುಗಳ ಸಹಾಯದಿಂಲೂ ಸೋಮರೂಪವಾದ ಸಾಧನದಿಂದಲೂ ಪರಮಾತ್ಮನಸ್ವರೂಪವನ್ನು ಅರಿಯಬಹುದೆಂದು ಸ್ಪಷ್ಟಪಡಿಸಿದೆ. ಇಂಥ ಸನ್ನಿವೇಶಗಳಲ್ಲೆಲ್ಲ ಜ್ಞಾನಕ್ಕೆ ಸಾಕ್ಷಾತ್ಸಾಧಕವಾಗಿಯೂ ಅಥವಾ ಜ್ಞಾನ

ಸಾಧಕವಾದ ಕರ್ಮಕ್ಕೆ ಪೋಷಕವಾಗಿಯೂ ವಿಶಿಷ್ಟಶಕ್ತಿಯನ್ನು ಪಡೆದಿರುವು ದಾಗಿಯೂ ಇರುವ ಗಾಯತ್ರಿಯ ಪ್ರಶಂಸೆಯಿದೆ. ಈ ಕಾರಣದಿಂದಲೇ, ಪರಬ್ರಹ್ಮ ಸಾಕ್ಷಾತ್ಕಾರಕ್ಕೆ ಗಾಯತ್ರಿಯು ಅತಿ ಪ್ರಧಾನವಾದ ಸಾಧನ ವೆಂದೂ ಗಾಯತ್ರಿಯ ಮಾಹಾತ್ಮ್ಯವು ಮೂರು ಅಂಶಗಳಿಂದ ತಿಳಿಯುವು ದೆಂದೂ ಶಂಕರಾಚಾರ್ಯರು ಹೇಳಿರುತ್ತಾರೆ.

## ಕರ್ಮಕ್ಕೆ ಪ್ರಧಾನವಾದ ಗಾಯತ್ರಿಯು ಬ್ರಹ್ಮಜ್ಞಾನಕ್ಕೆ ಸಾಧಕವಾಗುವುದು ಹೇಗೆ ?

ಲೌಕಿಕ ಪ್ರತ್ಯಕ್ಷಕ್ಕೆ ಅತೀತವಾದ ಪರಬ್ರಹ್ಮವಸ್ತುವನ್ನರಿಯಲು ಗಾಯತ್ರಿಯೇ ಮುಖ್ಯಸಾಧನವೆಂದು ಹೇಳುವಾಗ, ಇಲ್ಲಿ ಇನ್ನೊಂದು ಶಂಕೆ. ಯಜ್ಞಾಂಗವಾದ ಸಕಲ ಛಂದಸ್ಸುಗಳಿಗೂ ಗಾಯತ್ರಿಯೇ ಆಧಾರವೆಂದೂ ಇದನ್ನು ಆಶ್ರಯಿಸಿಯೇ ಇತರ ಸಕಲ ಛಂದಸ್ಸುಗಳೂ ವೃದ್ಧಿಯನ್ನು ಪಡೆದವು ಎಂಬ ವಿಷಯವೂ ಸತ್ಯವಾಗಿರ ಬಹುದು. ಆದರೆ ಕೇವಲ ಕರ್ಮಪ್ರಧಾನವಾದ ಯಜ್ಞದಲ್ಲಿ ಪ್ರಮುಖ ಪಾತ್ರವಿದೆಯೆಂದ ಮಾತ್ರಕ್ಕೆ ಗಾಯತ್ರಿಯು ಬ್ರಹ್ಮಜ್ಞಾನಕ್ಕೂ ಹೇಗೆ ಸಾಧಕವಾಗಬಲ್ಲದು ಎಂಬ ಆ ಶಂಕೆಯು ಸಹಜವಾದುದು. ಆದರೆ ಈ ಶಂಕೆಗೆ ಅವಕಾಶವಿಲ್ಲ.

ಗಾಯತ್ರಿಯೇ ಬ್ರಹ್ಮಸ್ವರೂಪವೆಂದೂ ಬ್ರಹ್ಮಜ್ಞಾನಕ್ಕೆ ಬ್ರಹ್ಮ ವಲ್ಲದ ಬೇರೊಂದು ಸಾಧನದಿಂದ ಸಾಧ್ಯವಿಲ್ಲವೆಂದೂ ಶ್ರುತಿವಾಕ್ಯಗಳು ತಿಳಿಸುತ್ತವೆ. ಒಂದು ವೇಳೆ ಯಜ್ಞವೂ ಬ್ರಹ್ಮತತ್ತ್ವವನ್ನೇ ಪ್ರತಿಬಿಂಬಿಸು ವುದೆಂದು ಹೇಳಿದರೂ, ಅದರ ನಿರ್ವಹಣೆಗೆ ಸಕಲ ಛಂದಸ್ಸುಗಳ ಆವಶ್ಯ ಕತೆಯೂ ಇರುವಾಗ ಗಾಯತ್ರಿಗೆ ಮಾತ್ರ ಈ ಮಹಿಮೆಯೇನು ಎಂಬ ಪ್ರಶ್ನೆಗೂ ಅವಕಾಶವಿಲ್ಲ. ಇತರ ಛಂದಸ್ಸುಗಳು ಕೇವಲ ಅಸ್ಥಿರವಾದ ಸಂಪತ್ತಿಗೆ ಕಾರಣವಾದವು. ಗಾಯತ್ರಿಯು ಮಾತ್ರ ಶಾಶ್ವತವಾದುದೂ ಬ್ರಹ್ಮರೂಪವಾದುದೂ ಆದ ಸಂಪತ್ತನ್ನು ಒದಗಿಸಬಲ್ಲದು. ಇದೇ ಗಾಯತ್ರಿಯ ಮಹಿಮೆ. ಇದಕ್ಕೂ ಉಳಿದ ಛಂದಸ್ಸುಗಳಿಗೂ ಇರುವ ತಾರತಮ್ಯವೇನು ಎಂದು ತಿಳಿಸುವ ಪ್ರಕರಣಗಳು ಅನೇಕವಾಗಿವೆ.

ಉದಾಹರಣೆಗೆ ಐತರೇಯಾರಣ್ಯಕದಲ್ಲಿ ಪ್ರಉಗಶಸ್ತ್ರ ಪ್ರಕರಣ. **ಪ್ರಉಗ ಶಸ್ತ್ರ** ಪಠನಕಾಲದಲ್ಲಿ ಯಾವ ಛಂದಸ್ಸನ್ನು ಆಶ್ರಯಿಸಬೇಕು ಎಂಬ ವಿಚಿಕಿತ್ಸೆಯುಂಟಾದಾಗ ಗಾಯತ್ರಿಯ ವೈಶಿಷ್ಟ್ಯವನ್ನು ಈ ರೀತಿ ತಿಳಿಸಿದೆ.

ತೇಜೋಯುತವಾದುದೂ ಬ್ರಹ್ಮವರ್ಚಸ್ಸಿನಿಂದ ಕೂಡಿದುದೂ ಆದ ಗಾಯತ್ರೀಚ್ಛಂದಸ್ಸಿನಲ್ಲಿಯೇ ಪ್ರಉಗಶಸ್ತ್ರವನ್ನು ಪಠಿಸಿ ಯಜ್ಞಮಾಡುವ ಪುರುಷನೂ ಸಹ ತೇಜಸ್ವಿಯೂ, ಬ್ರಹ್ಮವರ್ಚಸ್ವಿಯೂ ಆಗುವನೆಂದು ಕೆಲವರ ಮತ. ಉಳಿದ ಛಂದಸ್ಸುಗಳೂ ಅಪ್ರಯೋಜಕವಲ್ಲ. ಅವುಗಳ ಪಠನದಿಂದಲೂ ಪ್ರಯೋಜನವಿದ್ದೇ ಇದೆ. ಜೀವಾತುವಾದ ಉಷ್ಣಿಕ್ಕಿನಿಂದ ನಿರ್ಮಿತವಾದ ಪ್ರಉಗಶಸ್ತ್ರವನ್ನು ಪಠಿಸಿದರೆ ಯಜಮಾನನು ದೀರ್ಘಾಯುಸ್ಸನ್ನು ಪಡೆಯುತ್ತಾನೆ. ಇದೇ ಶಸ್ತ್ರವು ವೀರ್ಯವತ್ತಾದ ಅನುಷ್ಟುಪ್ಪಿನಿಂದ ನಿರ್ಮಿತವಾದರೆ ಆಗ ಯಜಮಾನನು ವೀರ್ಯಯುತನಾಗುವನು. ಸಂಪದ್ರೂಪವಾದ ಬೃಹತಿಯಿಂದ ನಿರ್ಮಿತವಾದರೆ ಯಜಮಾನನು ಸಂಪದ್ಯುಕ್ತನಾಗುತ್ತಾನೆ. ಅನ್ನಾತ್ಮಕವಾದ ಪಂಕ್ತಿಯಿಂದ ನಿರ್ಮಿತವಾದರೆ ಅನ್ನಯುಕ್ತನಾಗುತ್ತಾನೆ. ತ್ರಿಷ್ಟುಪ್ಪು ಶಕ್ತಿಸಂಪಾದನೆಗೂ, ಜಗತಿಯು ಪಶುಸಂಪತ್ತಿಗೂ ಸಾಧಕವಾಗುವುವು.

ಹೀಗೆ ಎಲ್ಲ ಛಂದಸ್ಸುಗಳೂ ಫಲದಾಯಕವಾಗಿದ್ದರೂ, ಅನ್ನಾದಿ ಸಂಪತ್ತುಗಳೆಲ್ಲವೂ ಅಶಾಶ್ವತವಾದ ಐಶ್ವರ್ಯಗಳು. ಶಾಶ್ವತವೂ ಬ್ರಹ್ಮಜ್ಞಾನರೂಪವೂ ಆದ ಸಂಪತ್ತು ಲಭಿಸಬೇಕಾದರೆ ಬ್ರಹ್ಮಾತ್ಮಕವಾದ ಗಾಯತ್ರಿಯಿಂದ ನಿರ್ಮಿತವಾದ ಶಸ್ತ್ರವನ್ನು ಪಠಿಸಿದರೆ ಮಾತ್ರ ಸಾಧ್ಯ. ಆದ್ದರಿಂದ ಬ್ರಹ್ಮಜ್ಞಾನಕ್ಕೆ ಗಾಯತ್ರಿಯೇ ಸಾಕ್ಷಾತ್ಸಾಧನವಾಗುವುದೇ ವಿನಾ ಇನ್ನಾವ ಛಂದಸ್ಸೂ ಆಗಲಾರದು, ಎಂಬುದೇ ಸಿದ್ಧಾಂತ.[1]

ಆದರೂ ಇಲ್ಲಿ ಇನ್ನೊಂದು ಆಕ್ಷೇಪಕ್ಕೂ ಅವಕಾಶವಿದೆ. ಕೇವಲ ಜ್ಞಾನವೇ ಪ್ರಧಾನವಾಗಿದ್ದು ಧ್ಯಾನ, ಸಮಾಧಿ ಮತ್ತು ತಪಸ್ಸು ಇವುಗಳ

---

1 ಗಾಯತ್ರಂ ಪ್ರಉಗಂ ಕುರ್ಯಾದಿತ್ಯಾಹುಸ್ತೇಜೋವೈ ಬ್ರಹ್ಮವರ್ಚಸಂ ಗಾಯತ್ರೀ ತೇಜಸ್ವೀ ಬ್ರಹ್ಮವರ್ಚಸೀ ಭವತೀತಿ...ಬ್ರಹ್ಮ ವೈ ಗಾಯತ್ರೀ...ಬ್ರಹ್ಮಣ್ಯೈವ ತದ್ಬ್ರಹ್ಮ ಪ್ರತಿಪದ್ಯತೇ ||
(ಐತರೇಯಾರಣ್ಯಕ. ೧.೧.೩.)

ಮೂಲಕ ಬ್ರಹ್ಮಜ್ಞಾನದಲ್ಲಿ ಲಕ್ಷ್ಯವಿದ್ದರೆ ಆಗ ಗಾಯತ್ರಿಯು ಬ್ರಹ್ಮಜ್ಞಾನಕ್ಕೆ ಮುಖ್ಯಸಾಧಕವೆಂದು ಹೇಳಬಹುದು. ಆದರೆ, ಗಾಯತ್ರಿಯ ಪ್ರಾಧಾನ್ಯವು ಯಜ್ಞದಲ್ಲಿ ಮಾತ್ರ. ಯಜ್ಞವು ಕರ್ಮಪ್ರಧಾನವಾದುದು. ಕರ್ಮಪ್ರಧಾನವಾದ ಯಜ್ಞದಲ್ಲಿ ಪ್ರಾಧಾನ್ಯವನ್ನು ಹೊಂದಿರುವ ಗಾಯತ್ರಿಯು ಜ್ಞಾನಕ್ಕೆ ಹೇಗೆ ಸಾಧಕ ಎಂಬುದೇ ಈ ಆಕ್ಷೇಪ. ಪ್ರಜಾಪತಿ ರೂಪನಾದ ಪರಬ್ರಹ್ಮನ ವಿಶ್ವವ್ಯವಹಾರಗಳೆಲ್ಲವೂ ಯಜ್ಞತತ್ತ್ವದಲ್ಲಿಯೇ ಅಡಗಿದೆಯೆಂಬ ವಿಷಯಜ್ಞಾನವಿದ್ದರೆ ಈ ಆಕ್ಷೇಪಕ್ಕೆ ಅವಕಾಶವಿಲ್ಲ.

ಯಾವ ಸವಿತೃದೇವನ ಭರ್ಗವನ್ನರಿಯಬೇಕೆಂಬ ಆಕಾಂಕ್ಷೆಯಿದೆಯೋ, ಯಾವ ದಿವ್ಯಜ್ಯೋತಿಯ ಸ್ವರೂಪಸಾಕ್ಷಾತ್ಕಾರಕ್ಕೆ ನಮಗೆ ಧ್ಯಾನಾತ್ಮಕವಾದ ಬುದ್ಧಿಯನ್ನು ಕೊಡು ಎಂದು ಪ್ರಾರ್ಥಿಸಿದೆಯೋ ಅಂಥ ಸವಿತೃದೇವತೆಯನ್ನುದ್ದೇಶಿಸಿದ ಸೂಕ್ತದಲ್ಲಿ ಧ್ಯಾನದ ಆವಶ್ಯಕತೆಯನ್ನೂ ತಿಳಿಸಿದೆ[1] ಯಜ್ಞಕರ್ಮದಲ್ಲಿ ನಿರತರಾದ ವಿಪ್ರರು ತಮ್ಮ ಮನಸ್ಸನ್ನು ಕೇಂದ್ರೀಕರಿಸಿ ಯೋಗರೂಪವಾದ ಧ್ಯಾನದಿಂದ ಸವಿತೃವನ್ನು ಆರಾಧಿಸಬೇಕೆಂದಿದೆ.[1] ಈ ಧ್ಯಾನದಿಂದ ಸವಿತೃವಿನ ದಿವ್ಯಸ್ವರೂಪವನ್ನರಿಯುವುದೇ ಯಜ್ಞದ ಪರಮಪ್ರಯೋಜನ.

ಯಾವ ರೀತಿ ಯಜ್ಞತತ್ತ್ವವು ವಿಶ್ವತಂತುವೆಂದು ವರ್ಣಿತವಾಗಿದೆಯೋ[2] ಅದೇ ರೀತಿ ಯಜ್ಞನಿರ್ವಹಣಕಾರ್ಯದಲ್ಲಿ ಪ್ರಾಧಾನ್ಯವನ್ನು ಹೊಂದಿರುವ ಗಾಯತ್ರಿಯೂ ಸ್ಥಾವರಜಂಗಮಾತ್ಮಕವಾದ ಸಕಲ ಭೂತಗಳಲ್ಲಿಯೂ ತನ್ನ ವಿಶ್ವವ್ಯಾಪಕತ್ವವನ್ನು ಹೊಂದಿದೆ. ಸಕಲ ಜಗತ್ತನ್ನೂ

---

1 ಯುಂಜತೇ ಮನ ಉತ ಯುಂಜತೇ ಧಿಯೋ ವಿಪ್ರಾ ವಿಪ್ರಸ್ಯ
ಬೃಹತೋ ವಿಪಶ್ಚಿತಃ |
ವಿ ಹೋತ್ರಾ ದಧೇ ವಯುನಾವಿದೇಕ ಇನ್ಮಹೀ ದೇವಸ್ಯ
ಸವಿತುಃ ಪರಿಷ್ಟುತಿಃ ||
(೫.೮೧.೧.)

2 ಋ. ಸಂ. ೬.೯.

ತನ್ನಲ್ಲೇ ಐಕ್ಯಮಾಡಿಕೊಂಡಿದೆ ಎಂಬ ಪ್ರಶಂಸೆಯೂ ವೈದಿಕವಾಕ್ಯಗಳಲ್ಲಿವೆ. ಗಾಯತ್ರಿಯೇ ಪರಬ್ರಹ್ಮರೂಪವೆಂದೂ ಸ್ತುತಿಸಿದೆ.

## ಗಾಯತ್ರಿಯು ಬ್ರಹ್ಮಜ್ಞಾನಕ್ಕೆ ಸಾಧನವೇ ಅಥವಾ ಅದೇ ಜ್ಞಾನರೂಪವಾದ ಸಾಧ್ಯವೇ ?

**ಅಥಾತಃ ಶಿರಃ** । (ಐ. ಆ. ೧.೪.೧.) ಇತ್ಯಾದಿಯಾಗಿ ಛಂದೋರೂಪಿಯಾದ ಗಾಯತ್ರಿಯ ವೈಶಿಷ್ಟ್ಯವು ವರ್ಣಿತವಾಗಿದೆ. ಯಾಗಾದಿ ಕಾರ್ಯನಿರ್ವಹಣಕ್ಕೂ ಛಂದೋರೂಪಿಯಾದ ಗಾಯತ್ರಿಯೇ ಅತ್ಯಂತ ಪ್ರಯೋಜನಕಾರಿಯಾದ ಸ್ಥಾನವನ್ನು ಹೊಂದಿರುತ್ತದೆ. ಯಜ್ಞವು ಬ್ರಹ್ಮ ತತ್ತ್ವವನ್ನು ಪ್ರತಿಬಿಂಬಿಸಿ, ಯಜ್ಞಾಚರಣೆಯು ಬ್ರಹ್ಮಜ್ಞಾನಕ್ಕೂ ಸಾಧಕ ವಾಗಬಲ್ಲದು ಎಂದರೂ, ಆಗ ಯಜ್ಞನಿರ್ವಹಣಕ್ಕೆ ಪ್ರಧಾನವೂ ಛಂದೋ ರೂಪಿಯೂ ಆದ ಗಾಯತ್ರಿಯು ಕೇವಲ ಜ್ಞಾನಸಾಧನವಾಗಬಲ್ಲದೇ ವಿನಾ ಅದು ಜ್ಞಾನರೂಪವಾದ ಸಾಧ್ಯವಾಗಲಾರದು, ಎಂಬುದೊಂದು ಆಕ್ಷೇಪ. ಈ ಆಕ್ಷೇಪಕ್ಕೂ ವೈದಿಕವಾಕ್ಯಗಳನ್ನೇ ಪ್ರಮಾಣವನ್ನಾಗಿ ಉದಾಹರಿಸಿ ಶಂಕರಾಚಾರ್ಯರು ಸಮಾಧಾನವನ್ನು ಹೇಳಿದ್ದಾರೆ.

" ವಿಶ್ವದಲ್ಲಿರುವ ಸ್ಥಾವರಜಂಗಮಾತ್ಮಕಗಳಾದ ಸಕಲ ಭೂತಗಳೂ ಗಾಯತ್ರಿಯೇ ಎಂದು ಗಾಯತ್ರಿಯ ಸ್ವರೂಪವನ್ನು ವಿವರಿಸುವಾಗ ಅದು ಛಂದೋರೂಪಿಯಾದ ಗಾಯತ್ರಿಯೇ ವಿನಾ ಪರಬ್ರಹ್ಮವನ್ನು ನಿರ್ದೇಶಿಸುವ ತತ್ತ್ವವಲ್ಲ " ಎಂಬ ಪೂರ್ವಪಕ್ಷವು ಸರಿಯಲ್ಲ ಎಂದು ಸಮರ್ಥಿಸಲು ಪುನಃ ಅದೇ ಛಾಂದೋಗ್ಯೋಪನಿಷತ್ತಿನ " ಏತಾವಾನಸ್ಯ ಮಹಿಮಾ " ಎಂಬ ವಾಕ್ಯವನ್ನುದಾಹರಿಸಿ ಖಂಡಿಸಿದ್ದಾರೆ. ಆದರೆ ಇದೇ " ಏತಾ ವಾನಸ್ಯ ಮಹಿಮಾ " ಎಂಬ ಶ್ರುತಿವಾಕ್ಯಕ್ಕೂ ಪೂರ್ವಪಕ್ಷಿಯು ಬೇರೊಂದರ್ಥವನ್ನು ಹೇಳುತ್ತಾನೆ. ಆದರೆ ಅದು ಸಮಂಜಸವಾಗುವುದಿಲ್ಲ. ಪ್ರಕೃತದಲ್ಲಿ ಪರವಸ್ತುವಿನಲ್ಲಿ ಚಿತ್ತವನ್ನು ಅರ್ಪಿಸಿ ಧ್ಯಾನಮಾಡಬೇಕು ಎಂದು ಹೇಳಿರುವುದರಿಂದ ಗಾಯತ್ರ್ಯಾಖ್ಯವಾದ ಛಂದಸ್ಸಿನ ದ್ವಾರಾ ಅದರಲ್ಲಿ ಅನುಗತವಾಗಿರುವ ಬ್ರಹ್ಮದಲ್ಲಿ ಚಿತ್ತವನ್ನು ಅರ್ಪಣಮಾಡ

ಬೇಕೆಂದು " **ಗಾಯತ್ರೀ ವಾ ಇದಂ ಸರ್ವಂ**" ಎಂಬ ಮಂತ್ರವಾಕ್ಯವು ತಿಳಿಸುತ್ತದೆ. ಕೇವಲ ಅಕ್ಷರಗಳ ಸಮೂಹರೂಪದಲ್ಲಿರುವುದೂ ಛಂದೋರೂಪಿಯಾದುದೂ ಆದ ಗಾಯತ್ರಿಯು ಸರ್ವಾತ್ಮಕವಾಗಿದೆ ಎಂದು ಹೇಳುವುದು ಅಸಮಂಜಸ. ಆದ್ದರಿಂದ ಕಾರ್ಯರೂಪದಲ್ಲಿರತಕ್ಕದ್ದೂ, ಜಗತ್ತಿಗೆಲ್ಲ ಕಾರಣರೂಪವಾಗಿರತಕ್ಕದ್ದೂ ಆದ ಪರಬ್ರಹ್ಮನೇ ನಿರ್ದಿಷ್ಟವಾದ ವಿಷಯವೆಂದು ನಿಷ್ಕೃಷ್ಟವಾಗಿ ಹೇಳಬಹುದು.[1] ಕಾರ್ಯಕ್ಕಿಂತಲೂ ಕಾರಣ ಬೇರೆಯಲ್ಲ ಎಂಬುದೂ ಸಮರ್ಥಿತವಾಗಿದೆ.[2]

ಚಕ್ಷುಸ್ಸು, ಶ್ರೋತ್ರ, ಛಂದಸ್ಸು ಇತ್ಯಾದಿಯಾಗಿ ಕಾರ್ಯರೂಪದಲ್ಲಿ ನಾನಾವಿಧವಾಗಿ ಪರಿವರ್ತಿತವಾಗಿರುವ ಕಾರಣವಸ್ತುವೇ ಪರಬ್ರಹ್ಮನು. ಜಗನ್ಮೂಲವಾದ ಪರಬ್ರಹ್ಮವನ್ನು ಛಂದಸ್ಸೇ ಮೊದಲಾದ ರೂಪಗಳ ಮೂಲಕ ಉಪಾಸಿಸಬೇಕು, ಎಂದು ಅರಣ್ಯಕಾದಿಗಳು ತಿಳಿಸುತ್ತವೆ.[3]

ಆದ್ದರಿಂದ, ಕೆಲವೆಡೆಗಳಲ್ಲಿ ಮಾತ್ರ ಗಾಯತ್ರೀ ಪದಕ್ಕೆ ಕೇವಲ ಛಂದಸ್ಸೆಂದು ಅರ್ಥವಾದರೂ, "ಗಾಯತ್ರೀ ವಾ ಇದಗ್ಂ ಸರ್ವಂ" ಎಂಬ ಉಪನಿಷದ್ವಾಕ್ಯವು ಪರಬ್ರಹ್ಮವಸ್ತುವನ್ನೇ ನಿರ್ದೇಶಿಸುವುದೆನ್ನುವುದರಲ್ಲಿ ಸಂಶಯವಿಲ್ಲ. "ಸೈಷಾ ಚತುಷ್ಪದಾ ಗಾಯತ್ರೀ" (ಛಾ. ೩.೧೨.೫) ಎಂಬಲ್ಲಿ

---

1 " ತಥಾ ಚೇತೋಽರ್ಪಣನಿಗದಾತ್ " ತಥಾ ಗಾಯತ್ರ್ಯಾಖ್ಯಚ್ಛಂದೋದ್ವಾರೇಣ ತದನುಗತೇ ಬ್ರಹ್ಮಣಿ ಚೇತಸಃ ಅರ್ಪಣಂ ಚಿತ್ತಸಮಾಧಾನಂ ಅನೇನ ಬ್ರಾಹ್ಮಣವಾಕ್ಯೇನ ನಿಗದ್ಯತೇ " ಗಾಯತ್ರೀ ವಾ ಇದಂ ಸರ್ವಮಿತಿ "

(ಬ್ರ. ಸೂ. ೧.೧.೫.)

2 ತದನನ್ಯತ್ವಮಾರಮ್ಭಣ ಶಬ್ದಾದಿಭ್ಯಃ

(ಬ್ರ. ಸೂ. ೨.೧.೧೪.)

3 ಸರ್ವೇಷು ಭೂತೇಷ್ವೇತಮೇವ ಬ್ರಹ್ಮೇತ್ಯಾಚಕ್ಷತೇ । ಸ ಏಷ ಸಂವತ್ಸರಸಮಾನಶ್ಚಕ್ಷುರ್ಮಯಃ ಶ್ರೋತ್ರಮಯಶ್ಛಂದೋಮಯೋ ಮನೋಮಯೋ ವಾಙ್ಮಯ ಆತ್ಮಾ ಸ ಯ ಏವಮೇತಂ . ಶಂಸತಿ.

(ಐ. ಆ. ೩.೨.೩.)

ಯಾವ ನಾಲ್ಕು ಪಾದಗಳು ಉಕ್ತವಾಗಿವೆಯೋ ಅವುಗಳಲ್ಲಿ ಮೂರು ಪಾದಗಳು ಕಾರ್ಯರೂಪವಾದ ಪ್ರಪಂಚವನ್ನೂ ನಾಲ್ಕನೆಯದು ಕಾರಣ ರೂಪವಾದ ಬ್ರಹ್ಮವನ್ನೂ ಪ್ರತಿಬಿಂಬಿಸುವುವು. ಗಾಯತ್ರೀಪದಕ್ಕೆ ಛಂದಸ್ಸೆಂದರ್ಥಮಾಡಿದರೂ ಈ ಎರಡು ಸ್ವರೂಪಗಳನ್ನೂ ಪಡೆದಿರತಕ್ಕ ಛಂದಸ್ಸೆಂದು ತಾತ್ಪರ್ಯವನ್ನು ಹೇಳಬೇಕು. ಮೊದಲನೆಯ ಮೂರು ಪಾದಗಳೂ ಲೌಕಿಕವಾದ ಬುದ್ಧಿಗೆ ಗ್ರಾಹ್ಯವಾಗತಕ್ಕವು. ತುರೀಯ (ನಾಲ್ಕನೆಯ) ಪಾದವು ಯೋಗದಿಂದಲೂ ಧ್ಯಾನದಿಂದಲೂ ಸಾಕ್ಷಾತ್ಕರಿಸಲ್ಪಡತಕ್ಕದ್ದು. ಇದಕ್ಕೆ ಆಧಾರವೇನು ಎಂಬ ಪ್ರಶ್ನೆಯೂ ಸಹಜ.

> ದೇವಾ ವೈ ಮೃತ್ಯೋರ್ಬಿಭ್ಯತಸ್ತ್ರಯೀಂ ವಿದ್ಯಾಂ ಪ್ರಾವಿಶಂಸ್ತೇ ಛಂದೋಭಿರಾಚ್ಛಾದಯನ್ಯದೇಭಿರಾಚ್ಛಾದಯಂಸ್ತಚ್ಛಂದಸಾಂ ಛಂದಸ್ತ್ವಂ ।
>
> (ಛಾ. ಉ. ೧.೪.೨.)

ಎಂಬ ಈ ವಾಕ್ಯವು ಛಂದಸ್ಸಿನ ಸಾಮಾನ್ಯ ಲಕ್ಷಣವನ್ನು ತಿಳಿಸುತ್ತವೆ. ದೇವತೆಗಳು ಮೃತ್ಯುವಿಗೆ ಹೆದರಿ ತ್ರಯೀಯನ್ನು ಪ್ರವೇಶಿಸಿದಾಗ ತ್ರಯೀ ವಿದ್ಯೆಯು ಇವರನ್ನು ಛಂದಸ್ಸುಗಳಿಂದ ಮರೆಸಿತು. ಛಂದಶ್ಶಬ್ದವು ಆಚ್ಛಾದಿಸು, ಮರೆಸು ಎಂಬರ್ಥವುಳ್ಳ ಛದ್ ಧಾತುವಿನಿಂದ ನಿಷ್ಪನ್ನವಾಗಿದೆ. ಮೃತ್ಯುವಿನಿಂದ ಮರೆಮಾಡಿ ಛಾದನಮಾಡಿದುದರಿಂದ ಇವುಗಳಿಗೆ ಛಂದಸ್ಸೆಂದು ಹೆಸರು ಎಂದು ಇದರ ಲಕ್ಷಣವನ್ನು ತಿಳಿಸಿದೆ.

ಮೃತ್ಯುಮುಖದಿಂದ ದೇವತೆಗಳನ್ನು ಛಂದಸ್ಸುಗಳು ಮರೆಸಿದರೂ; ದೇವತೆಗಳು ತ್ರಯಿಯಲ್ಲಿ ಅಡಗಿರುವುದನ್ನು ಮೃತ್ಯುವು ಕಂಡುಕೊಂಡಿತು. ಇದು ಛಂದಸ್ಸುಗಳ ನ್ಯೂನತೆಯನ್ನೂ ತೋರಿಸುತ್ತದೆ. ಇಂಥ ಸಂದರ್ಭದಲ್ಲಿ ಲೌಕಿಕವೂ ಕಾರ್ಯರೂಪದ್ದೂ ಆದ ಛಂದಸ್ಸೆಂದು ತಾತ್ಪರ್ಯ. ಛಂದಸ್ಸಿನ ಈ ಸ್ವರೂಪವು ಸಂತೋಷಕಾರಕವಾದರೂ ಆ ಸಂತೋಷವು ಪರಿಮಿತಿಯುಳ್ಳದ್ದು. ಅನಂತವಾದ ಸಂತೋಷಲಾಭಕ್ಕೆ ಈ ಎಲ್ಲೆಯನ್ನು ಮೀರಿ ಹೋಗಿ ಛಂದಸ್ಸಿನ ನಿಜವಾದ ಸ್ವರೂಪವನ್ನರಿಯಬೇಕು.

ಗಾಯತ್ರೀಛಂದಸ್ಸಿನ ವಿಷಯವನ್ನು ಹೇಳುವಾಗಲೂ ಈ ವಿಧವಾದ ಎರಡು ರೂಪಗಳನ್ನೂ ವರ್ಣಿಸಿ ಗಾಯತ್ರಿಯನ್ನು ಸ್ತುತಿಸಿದೆ. ಗಾಯತ್ರಿಯ

ಮೊದಲು ಪಾದಗಳು ಕಾರ್ಯರೂಪವಾದ ಅಪರತತ್ತ್ವವನ್ನೂ ತುರೀಯ ಪಾದವು ಪರತತ್ತ್ವವನ್ನೂ ಪ್ರತಿಬಿಂಬಿಸುತ್ತವೆ ಎಂದು ಉಪನಿಷತ್ತುಗಳು ಗಾಯತ್ರಿಯನ್ನು ಪ್ರಶಂಸಿಸುತ್ತವೆ.

"ಭೂಮಿರಂತರಿಕ್ಷಂ ದ್ಯೌಃ" ಎಂಬ ಈ ಅಷ್ಟಾಕ್ಷರಗಳು ಗಾಯತ್ರಿಯ ಪ್ರಥಮಪಾದ. ಆದ್ದರಿಂದ ಮೂರು ಲೋಕಗಳೂ ಸೇರಿ ಒಂದು ಪಾದವಾಗುತ್ತದೆ. ಈ ತತ್ತ್ವವನ್ನರಿತವನು ಮೂರು ಲೋಕಗಳ ಸಂಪತ್ತನ್ನೂ ಪಡೆಯುತ್ತಾನೆ.

"ಋಚೋ ಯಜೂಗ್ಂಷಿ ಸಾಮಾನಿ" ಎಂಬ ಅಷ್ಟಾಕ್ಷರಗಳು ಗಾಯತ್ರಿಯ ಎರಡನೇ ಪಾದ. ಈ ತತ್ತ್ವವನ್ನರಿತವನು ಜ್ಞಾನನಿಧಿಯಾದ ತ್ರಯಿಯಿಂದ ಲಭಿಸತಕ್ಕ ಜ್ಞಾನಸಂಪತ್ತನ್ನು ಪಡೆಯುತ್ತಾನೆ.

"ಪ್ರಾಣ, ಅಪಾನ, ವ್ಯಾನ" ಎಂಬ ಮೂರು ತತ್ತ್ವಗಳೂ ಸೇರಿ ಗಾಯತ್ರಿಯ ಅಷ್ಟಾಕ್ಷರಾತ್ಮಕವಾದ ಮೂರನೇ ಪಾದ. ಈ ತತ್ತ್ವವನ್ನರಿತವನು ಪ್ರಾಣಿಜಾತದ ಸಕಲ ಶಕ್ತಿಸಂಪತ್ತನ್ನೂ ಪಡೆಯುತ್ತಾನೆ. [1]

ಸ್ವಪ್ರಭೆಯಿಂದ ಪ್ರಕಾಶಿಸುತ್ತ ಸಕಲ ಲೋಕಕ್ಕೂ ಪ್ರತ್ಯಕ್ಷ ಗೋಚರನಾಗಿರುವ ಆದಿತ್ಯನೇ ಗಾಯತ್ರಿಯ ನಾಲ್ಕನೇ ಪಾದ. [2] ಲೌಕಿಕ ಪ್ರತ್ಯಕ್ಷಕ್ಕೆ ಅತೀತವಾದ ಸ್ವರೂಪವನ್ನು ಹೊಂದಿದ್ದರೂ ಆದಿತ್ಯನು ಪ್ರತ್ಯಕ್ಷಗೋಚರವಾದ ರೂಪವನ್ನು ಹೊಂದಿ ಎಲ್ಲರಿಗೂ ಕಾಣಿಸಿಕೊಳ್ಳುವುದರಿಂದ ಇಲ್ಲಿ "**ದರ್ಶತಂ**" ಎಂಬ ವಿಶೇಷಣವಿದೆ. ಅಂಧಕಾರಮಯವಾದ ಲೋಕಗಳನ್ನೆಲ್ಲ ಮೀರಿ ಉತ್ತಮವಾದ ದ್ಯುಲೋಕದಲ್ಲಿ ಪ್ರಕಾಶಿಸುವುದರಿಂದ "**ಪರೋರಜಾಃ**" ಎಂಬ ವಿಶೇಷಣವಿದೆ. ಈ ತುರೀಯಪಾದ ಸ್ವರೂಪವನ್ನರಿತವನು ತೇಜಸ್ವಿಯೂ ಬ್ರಹ್ಮವರ್ಚಸ್ಸಿನಿಂದ ಕೂಡಿದವನೂ ಆಗುತ್ತಾನೆ.

---

1 "ಭೂಮಿರಂತರಿಕ್ಷಂ ದ್ಯೌಃ..." (ಬೃ. ಉ. ೫.೧೪.೧,)

2 ಸೈಷಾ ಗಾಯತ್ರ್ಯೇತಸ್ಮಿಂಸ್ತುರೀಯೇ ದರ್ಶತೇ ಪದೇ ಪರೋರಜಸಿ ಪ್ರತಿಷ್ಠಿತಾ ತದ್ವೈ ತತ್ಸತ್ಯೇ ಪ್ರತಿಷ್ಠಿತಂ... (ಬೃ. ಉ. ೫.೧೪.೪.)

ಪರೋರಜಸ್ಸೆಂದು ವರ್ಣಿತವೂ, ದರ್ಶತವೂ ಆದ ತುರೀಯಪಾದದ ಮೇಲೆ ಗಾಯತ್ರಿಯು ಪ್ರತಿಷ್ಠಾಪಿತವಾಗಿದೆ. ಅದೇ ಸತ್ಯಲೋಕ. ಆದ್ದರಿಂದ ಗಾಯತ್ರಿಯು ಸತ್ಯದ ಮೇಲೆ ಪ್ರತಿಷ್ಠಾಪಿತವಾಗಿದೆ. ಚಕ್ಷುಸ್ಸೇ ಸತ್ಯ. ಹೇಗೆಂದರೆ, ನಾನು ನೋಡಿದೆ ಎಂದು ಒಬ್ಬನೂ ನಾನು ಕೇಳಿದೆ ಎಂದು ಇನ್ನೊಬ್ಬನೂ ವಿವಾದಮಾಡುತ್ತಿರುವಾಗ ನೋಡಿದವನ ಮಾತಿಗೇ ಅಧಿಕವಾದ ಪ್ರಾಮಾಣ್ಯವಿದೆ. ಆ ಪ್ರಾಮಾಣ್ಯವು ಶಕ್ತಿಯನ್ನವಲಂಬಿಸಿದೆ. ಪ್ರಾಣವೇ ಶಕ್ತಿ. ಆದ್ದರಿಂದ ಸತ್ಯಕ್ಕಿಂತಲೂ ಶಕ್ತಿಯೇ ಅಧಿಕವಾದ ಸತ್ತ್ವವುಳ್ಳದ್ದೆಂದು ತಿಳಿದವರು ಹೇಳುತ್ತಾರೆ. ದೇಹದ ಇಂದ್ರಿಯಗಳೇ ಗಯಗಳು. ಈ ಗಯಗಳನ್ನು ಪ್ರಾಣರೂಪವಾದ ಶಕ್ತಿಯು ರಕ್ಷಿಸುವುದರಿಂದ ಇದಕ್ಕೆ **ಗಾಯತ್ರೀ** ಎಂಬ ಹೆಸರು. ಗಾಯತ್ರಿಯೇ ದೇಹದಲ್ಲಿ ಮುಖ್ಯಪ್ರಾಣರೂಪದಲ್ಲಿರುತ್ತದೆ. ಇದನ್ನೇ ಗುರುವು ಶಿಷ್ಯನಿಗೆ ಉಪದೇಶರೂಪದಲ್ಲಿ ಹೇಳಿಕೊಡುವ **ಸಾವಿತ್ರೀ** ಎಂದೂ ಕರೆಯುತ್ತಾರೆ. ಯಾವನು ಈ ಉಪದೇಶವನ್ನು ಗ್ರಹಿಸುವನೋ ಅವನ ಪ್ರಾಣಗಳನ್ನು ಇದು ಸಂರಕ್ಷಿಸುತ್ತದೆ.

ವಾಕ್ಕೇ ಅನುಷ್ಟುಬ್ರೂಪದಲ್ಲಿರುವುದರಿಂದ ಕೆಲವು ಗುರುಗಳು ಅನುಷ್ಟುಬ್ರೂಪದ ಸಾವಿತ್ರಿಯನ್ನುಪದೇಶಿಸುತ್ತಾರೆ. ಅದು ಸರಿಯಲ್ಲ. ಗಾಯತ್ರೀರೂಪದ ಸಾವಿತ್ರಿಯನ್ನೇ ಉಪದೇಶಿಸಬೇಕು. ಈ ತತ್ತ್ವವನ್ನರಿತ ಪುರುಷನು ಅತಿಪ್ರಭೂತವಾದ ದಾನವನ್ನು ಪರಿಗ್ರಹಿಸಿದರೂ ಅದು ಗಾಯತ್ರಿಯ ಒಂದು ಪಾದಕ್ಕೂ ತುಲನವಾಗುವುದಿಲ್ಲ.

ಸಂಪತ್ತಿನಿಂದ ಕೂಡಿದ ಮೂರು ಲೋಕಗಳನ್ನು ಮಾತ್ರ ಪರಿಗ್ರಹಿಸುವವನು ಗಾಯತ್ರಿಯ ಪ್ರಥಮಪಾದವನ್ನು ಮಾತ್ರ ಗ್ರಹಿಸುತ್ತಾನೆ. ಜ್ಞಾನಸಿಧಿಯಾದ ವೇದತ್ರಯವನ್ನು ಮಾತ್ರ ಪರಿಗ್ರಹಿಸುವವನು ಗಾಯತ್ರಿಯ ಎರಡನೆ ಪಾದವನ್ನೂ, ಕೇವಲ ಪ್ರಾಣಿಜಾತವನ್ನು ಮಾತ್ರ ಪರಿಗ್ರಹಿಸುವವನು ಗಾಯತ್ರಿಯ ಮೂರನೆ ಪಾದವನ್ನೂ ಪ್ರತಿಫಲವನ್ನಾಗಿ ಪಡೆಯುತ್ತಾನೆ. ಆದರೆ, ದರ್ಶತವೂ, ಪರೋರಜಸಾತ್ಮಕವೂ ಆದ ತುರೀಯಪಾದದ ಸಾಕ್ಷಾತ್ಕಾರವನ್ನು ಪಡೆದ ಪುರುಷನಿಗೆ ಲಭಿಸತಕ್ಕ ಪ್ರತಿಫಲಕ್ಕೆ ಸಮಾನವಾದ ಸಂಪತ್ತು ಲೋಕದಲ್ಲಿ ಇನ್ನಾವುದೂ ಇರಲಾರದು. ಇದರ ಪೂರ್ಣರೂಪದ ಸಾಕ್ಷಾತ್ಕಾರವು ಧ್ಯಾನದಿಂದ ಮಾತ್ರ ಸಾಧ್ಯ.

ಗಾಯತ್ರೀತತ್ತ್ವವನ್ನು ಪೂರ್ಣವಾಗಿ ಅರಿತವನು ಆಕಸ್ಮಾತ್ತಾಗಿ, ತನಗೆ ಗೋಚರವಿಲ್ಲದೆಯೇ ಯಾವುದಾದರೂ ಪಾಪಕೃತ್ಯಗಳನ್ನು ಮಾಡಿದರೂ ಅವುಗಳೆಲ್ಲವನ್ನೂ ದಹಿಸಿ ತಾನು ಶುದ್ಧನೂ, ಅಜರನೂ, ಅಮರ್ತ್ಯನೂ ಆಗುತ್ತಾನೆ. ಅಗ್ನಿಯೇ ಗಾಯತ್ರಿಯ ಮುಖವಾದ್ದರಿಂದ ಗಾಯತ್ರೀ ತತ್ತ್ವವನ್ನು ಪೂರ್ಣವಾಗಿ ಅರಿತವನು ಪಾಪಗಳನ್ನು ದಹಿಸುವ ಅಗ್ನಿಯ ಶಕ್ತಿಯನ್ನು ಪಡೆಯುತ್ತಾನೆಂದು ತಾತ್ಪರ್ಯ.

ಹೀಗೆ ವ್ಯಾಕೃತವೂ, ಅವ್ಯಾಕೃತವೂ ಆದ ಗಾಯತ್ರಿಯ ಪೂರ್ಣ ಸ್ವರೂಪವನ್ನು ಬೃಹದಾರಣ್ಯಕದಲ್ಲಿ ವರ್ಣಿಸಿರುವಂತೆ ಛಾಂದೋಗ್ಯದಲ್ಲಿಯೂ ಇದರ ವಿಶ್ವವ್ಯಾಪಕತ್ವವನ್ನು ಪ್ರಶಂಸಿಸಿದೆ.

ವಾಗ್ವೈ ಗಾಯತ್ರೀ, ವಾಗ್ವಾ ಇದಂ ಸರ್ವಂ ಭೂತಂ ಗಾಯತಿ ಚ
ತ್ರಾಯತೇ ಚ ||

(ಛಾ. ಉ. ೩.೧೨.೧.)

ಸಕಲ ಭೂತಗಳ ಅಸ್ತಿತ್ವವನ್ನೂ ಗಾನಮಾಡುತ್ತಲೂ ರಕ್ಷಿಸುತ್ತಲೂ ಇರುವುದರಿಂದ ವಾಗ್ದೇವಿಯೇ ಗಾಯತ್ರಿಯೆಂದು ಪ್ರಸಿದ್ಧಳು. ಸರ್ವವ್ಯಾಪಕತ್ವ ಪಡೆದ ಈ ಗಾಯತ್ರಿಯನ್ನು ಉಪಾಸಿಸುವ ಕ್ರಮಗಳೆರಡು.

(೧) ಬಾಹ್ಯಪ್ರಪಂಚದೊಡನಿರುವ ತಾದಾತ್ಮ್ಯಜ್ಞಾನ.

(೨) ಆಧ್ಯಾತ್ಮಿಕವಾದ ಅಂತಸ್ತತ್ತ್ವದೊಡನಿರುವ ತಾದಾತ್ಮ್ಯಜ್ಞಾನ.

ಮೊದಲನೆಯದಾಗಿ, ಪೃಥಿವ್ಯಂತರಿಕ್ಷಾದಿ ಸಕಲ ಬಾಹ್ಯಪ್ರಪಂಚಗಳನ್ನೂ ಗಾಯತ್ರಿಯ ದ್ವಾರಾ ಧ್ಯಾನದಿಂದ ತಿಳಿದು ಅವೆಲ್ಲವೂ ಗಾಯತ್ರಿಯ ಪ್ರಕಾರಾಂತರಗಳೇ ಎಂದು ಮನನಮಾಡುವುದು. ಅಥವಾ ಪುರುಷನ ದೇಹಾಂತರ್ಗತವಾದ ತತ್ತ್ವವಿಶೇಷಗಳನ್ನೂ, ಅವೂ ಗಾಯತ್ರಿಯ ಪ್ರಕಾರಾಂತರಗಳು ಎಂಬುದನ್ನೂ ಆಧ್ಯಾತ್ಮಿಕದೃಷ್ಟಿಯಿಂದ ತಿಳಿದು ಉಪಾಸಿಸುವುದು.

ಹೀಗೆ ವಿಶ್ವವ್ಯಾಪಿಯೂ, ವಿಶ್ವಾತಿರಿಕ್ತವೂ ಆದ ಗಾಯತ್ರೀತತ್ತ್ವವು ನಾಲ್ಕು ಪಾದಗಳುಳ್ಳದ್ದು. ಇದರ ವರ್ಣನವೇ ಪರಮಪುರುಷನ ಮಾಹಾತ್ಮ್ಯ ವರ್ಣನವು.

" ಏತಾವಾನಸ್ಯ ಮಹಿಮಾತೋ ಜ್ಯಾಯಾಗ್ಂಶ್ಚ ಪೂರುಷಃ |
ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪದಸ್ಯಾಮೃತಂ ದಿವಿ "
(ಋ. ಸಂ. ೧೦.೯೦.೩.)

ಎಂಬ ಋಕ್ಸಂಹಿತಾವಾಕ್ಯದ ಯಾವ ಪರಮಪುರುಷನ ವರ್ಣನವಿದೆಯೋ ಅದೇ ಗಾಯತ್ರೀತತ್ತ್ವದ ವರ್ಣನೆಯೆಂದು ಉಪನಿಷದಾದಿಗಳು ತಿಳಿಸುತ್ತವೆ. ಈ ವರ್ಣನದಲ್ಲಿ ಪರಮಪುರುಷನಿಗೂ ಗಾಯತ್ರಿಗೂ ತಾದಾತ್ಮ್ಯವನ್ನು ಹೇಳಿದೆ. ಈ ತಾದಾತ್ಮ್ಯವರ್ಣನೆಯಲ್ಲಿ ಬೃಹದಾರಣ್ಯಕೋಪನಿಷತ್ತಿಗೂ ಛಾಂದೋಗ್ಯೋಪನಿಷತ್ತಿಗೂ ಕೊಂಚ ವ್ಯತ್ಯಾಸವಿದೆ.

ಸಕಲ ಭೂತಗಳೂ, ತ್ರಯೀವಿದ್ಯೆಯೂ, ಪೃಥ್ವಿಯೂ, ಶರೀರವೂ, ಹೃದಯವೂ, ಪರವಸ್ತುತತ್ತ್ವಾತ್ಮಕವಾದ ಗಾಯತ್ರಿಯ ಅಥವಾ ಗಾಯತ್ರ್ಯಾತ್ಮಕವಾದ ಪರವಸ್ತುವಿನ ಒಂದು ಪಾದ. ಈ ಪಾದವು ಮೂರ್ತ, ಎಂದರೆ ಲೌಕಿಕಪ್ರತ್ಯಕ್ಷಕ್ಕೆ ಗೋಚರವಾಗತಕ್ಕದ್ದು. ಉಳಿದ ಮೂರು ಪಾದಗಳೂ ಅಜರವಾದ ಅಂತರಿಕ್ಷಸ್ಥವಾಗಿ ಅಪ್ರಾಕೃತವಾದ ರೂಪವನ್ನು ಹೊಂದಿ ಅಗೋಚರವಾಗಿವೆ ಎಂಬುದು ಛಾಂದೋಗ್ಯದ ವರ್ಣನೆ. ಬೃಹದಾರಣ್ಯಕದ ವಿವರಣೆಯು ಸ್ವಲ್ಪ ವ್ಯತ್ಯಸ್ತವಾಗಿದೆ. ಮೊದಲನೆಯ ಮೂರು ಪಾದಗಳೂ ಲೋಕತ್ರಯಾತ್ಮಕವಾಗಿಯೂ ಋಗಾದಿ ವಾಗ್ರೂಪವಾಗಿಯೂ ಪ್ರಾಣಾಪಾನವ್ಯಾನರೂಪವಾಗಿಯೂ ಇವೆ. ಇವು ಮೂರ್ತ. ತುರೀಯಪಾದವು ಲೌಕಿಕ ಪ್ರತ್ಯಕ್ಷಕ್ಕೆ ಮೀರಿದ ಅಂತರಿಕ್ಷಸ್ಥವಾಗಿ ಆದಿತ್ಯಾಂತರ್ಗತವಾಗಿದೆಯೆಂಬುದು ಬೃಹದಾರಣ್ಯಕದ ವರ್ಣನೆ. ಇವೆರಡು ವಿವರಣೆಗಳಲ್ಲೂ ತಾತ್ತ್ವಿಕವಾದ ವ್ಯತ್ಯಾಸವೇನೂ ಇಲ್ಲ.

ಮಾಂಡೂಕ್ಯದಲ್ಲೂ ತತ್ಸಂಬಂಧವಾದ ಭಾಷ್ಯಗಳಲ್ಲೂ '**ತುರೀಯ**' ಪದವು ಪಾರಿಭಾಷಿಕವಾದ ಸಂಕೇತವನ್ನು ಹೊಂದಿದೆ. ಆಧ್ಯಾತ್ಮಿಕವಾದ ತತ್ತ್ವಸ್ವರೂಪವರ್ಣನಕಾಲದಲ್ಲಿ ಪುರುಷನ ಜಾಗ್ರದಾದ್ಯವಸ್ಥೆಗಳನ್ನು ವರ್ಣಿಸುವಾಗ ಆತ್ಮನಿಗೂ ಬ್ರಹ್ಮನಿಗೂ ತಾದಾತ್ಮ್ಯವನ್ನು ಹೇಳಿ[1] ಬ್ರಹ್ಮ

1 **" ಸರ್ವಂ ಹ್ಯೇತದ್ಬ್ರಹ್ಮಾಯ ಮಾತ್ಮಾ ಬ್ರಹ್ಮ ಸೋಽಯ
ಮಾತ್ಮಾ ಚತುಷ್ಪಾತ್ "**
(ಮಾ. ಉ. ೨.)

ವಸ್ತುವಿನ ಅಥವಾ ಬ್ರಹ್ಮರೂಪಿಯಾದ ಆತ್ಮನ ನಾಲ್ಕು ಅವಸ್ಥೆಗಳನ್ನೂ ತಿಳಿಸಿದೆ. **ಓಂಕಾರ** ದಿಂದ ಅಭಿಧೇಯನಾಗಿರುವ ಪರಬ್ರಹ್ಮವೂ ಅಪರ ಬ್ರಹ್ಮವೂ ಆಗಿರುವ ಆತ್ಮನು ನಾಲ್ಕು ಪಾದಗಳುಳ್ಳವನು. ಅವುಗಳ ಸ್ವರೂಪವೇನೆಂದರೆ—

(೧) ಜಾಗರಿತಸ್ಥಾನೋ ಬಹಿಷ್ಪ್ರಜ್ಞಃ
ಎಚ್ಚರವೆಂಬ ಸ್ಥಾನವುಳ್ಳ ಹೊರಗಿನ ಪ್ರಜ್ಞೆಯುಳ್ಳವನು.

(೨) ಸ್ವಪ್ನಸ್ಥಾನೋಽಂತಃ ಪ್ರಜ್ಞಃ
ಸ್ವಪ್ನಸ್ಥಾನವುಳ್ಳ ಅಂತಃಪ್ರಜ್ಞನು.

(೩) ಸುಷುಪ್ತಸ್ಥಾನ ಏಕೀಭೂತಃ
ಕನಸನ್ನೂ ಕಾಣದೆ ಪ್ರಜ್ಞಾನಘನವಾದ ಸುಷುಪ್ತಾವಸ್ಥೆಯಲ್ಲಿರುವ ಪ್ರಾಜ್ಞನು.

(೪) ನಾಂತಃ ಪ್ರಜ್ಞಂ, ನ ಬಹಿಷ್ಪ್ರಜ್ಞಂ, ನೋಭಯತಃ ಪ್ರಜ್ಞಂ... ಅದೃಷ್ಟಮವ್ಯವಹಾರ್ಯಂ........ ಶಾಂತಂ ಶಿವಮದ್ವೈತಂ ಚತುರ್ಥಂ ಮನ್ಯಂತೇ ಸ ಆತ್ಮಾ ಸ ವಿಜ್ಞೇಯಃ—

ಅಂತಃ ಪ್ರಜ್ಞನಲ್ಲದವನೂ, ಬಹಿಷ್ಪ್ರಜ್ಞನಲ್ಲದವನೂ ಲೌಕಿಕ ಪ್ರತ್ಯಕ್ಷಕ್ಕೆ ಸಿಲುಕದವನೂ ಶಾಂತನೂ, ಶಿವನೂ ಆದ ಆತ್ಮನು ತುರೀಯನು. ಲೋಕಕ್ಕೆ ಸಾಧಾರಣವಾಗಿ ಗೋಚರವಾಗುತ್ತಿರುವ ಮೂರು ಪಾದಗಳನ್ನೂ ಮೀರಿ ನಾಲ್ಕನೆಯ ಸ್ವರೂಪವುಳ್ಳವನೆಂದು ತಾತ್ಪರ್ಯ. ಇದೇ ಆತ್ಮನನ್ನು ಬೃಹದಾರಣ್ಯಕದಲ್ಲಿ ತಾನು ಲೋಕಕ್ಕೆಲ್ಲ ಸಾಕ್ಷಿ, ಆದರೆ ಲೋಕದ ದೃಷ್ಟಿಗೆ ಗೋಚರನಾಗದವನು, ತಾನು ಸಕಲವನ್ನೂ ಕೇಳತಕ್ಕವನು ಆದರೆ, ಲೋಕದ ಶ್ರವಣಕ್ಕೆ ಮಾತ್ರ ಸಿಲುಕದವನು ಇತ್ಯಾದಿಯಾಗಿ ಪ್ರಶಂಸಿಸಿದೆ. [1]

ಇದೇ ತಾತ್ಪರ್ಯವನ್ನು ಪ್ರಕೃತದಲ್ಲಿಯೂ ಗಾಯತ್ರ್ಯಾತ್ಮಕವಾದ ಪರಬ್ರಹ್ಮದ ಸ್ವರೂಪವರ್ಣನಕಾಲದಲ್ಲಿ ಹೇಳಬೇಕು. ಅಪ್ರಾಕೃತವೂ,

---

1 "ಅದೃಷ್ಟೋ ದ್ರಷ್ಟಾಽಶ್ರುತಃ ಶ್ರೋತಾಽಮತೋ ಮಂತಾಽ ವಿಜ್ಞಾತೋ ವಿಜ್ಞಾತಾ..."
III. 7.23.

ಅಲೌಕಿಕವೂ ಆದ ತತ್ತ್ವವಿಶೇಷವನ್ನು ವರ್ಣಿಸುವ ವೇಳೆಯಲ್ಲಿ ಋಕ್ಸಂಹಿತೆಯಲ್ಲಿಯೂ **ತುರೀಯ** ಪದವನ್ನು ಇದೇ ಅರ್ಥದಲ್ಲಿ ಉಪಯೋಗಿಸಿರುವುದು ಕಂಡುಬರುತ್ತದೆ.

" **ಏಷ ಸ್ಯ ಭಾನುರುದಿಯರ್ತಿ** " [1] ಎಂಬ ಮಂತ್ರದಲ್ಲಿ ಆದಿತ್ಯನ ಗತಿವರ್ಣನವಿದೆ. ಅವನ ರಥದಲ್ಲಿ ನಾಲ್ಕು ವಿಧವಾದ ಅನ್ನವಿದೆ. ಮೂರು ವಿಧಗಳು ಪ್ರತ್ಯಕ್ಷಗೋಚರವಾಗತಕ್ಕವು. ಇವನ್ನು ಮೀರಿ ಮಾಧುರ್ಯವುಳ್ಳದ್ದೂ (ಬೃಹದಾರಣ್ಯಕಾದಿಗಳಲ್ಲಿ **ಮಧು** ವೆಂದು ಪ್ರಸಿದ್ಧವಾದ) ಅಪ್ರಾಕೃತವೂ ಆದ ತುರೀಯಾನ್ನವೂ (ನಾಲ್ಕನೆಯದು) ಪ್ರಕಾಶಿಸುತ್ತಿದೆ. ನಾಲ್ಕನೇ ಭಾಗದ ಮಧುರೂಪವಾದ ಅನ್ನವು ಸ್ವಪ್ರಭೆಯಿಂದ ಪ್ರಕಾಶಿಸುತ್ತ ಮೊದಲಿನ ಮೂರು ವಿಧವಾದ ಅನ್ನಗಳಿಗಿಂತಲೂ ವೈಶಿಷ್ಟ್ಯವನ್ನು ಹೊಂದಿದೆ. ಆದಿತ್ಯಾಂತರ್ಗತನಾದ ಹಿರಣ್ಮಯಪುರುಷನ ಪ್ರಭೆಯು ಕೇವಲ ಸೂರ್ಯನ ಪ್ರಭೆಗಿಂತಲೂ ಅತಿಶಯವಾದ ಕಾಂತಿಯನ್ನು ಹೊಂದಿರುವಂತೆ ಮಧ್ವಾತ್ಮಕವಾದ ಈ ಅನ್ನದ ಪ್ರಭೆಯೂ ಅತಿಶಯವಾದ ಕಾಂತಿಯನ್ನು ಹೊಂದಿದೆ.

" **ಸ್ವರ್ಭಾನೋರಧ** .." (5.40 6) ಎಂಬಲ್ಲಿ ನಾಲ್ಕು ಮಂತ್ರಗಳಿಂದ ನಾಲ್ಕು ವಿಧವಾದ ತಮಸ್ಸನ್ನು ನಾಶಮಾಡಿ ಅದರಿಂದ ಆವೃತಗಳಾದ ಪ್ರಭಾವಿಶೇಷಗಳನ್ನು **ಅತ್ರಿ** ಋಷಿಯು ಅರಿತನು ಎಂದಿದೆ. ಇದು ಸೂರ್ಯಪ್ರಭೆಯ ವರ್ಣನೆ. ಎಂದರೆ, ಸೂರ್ಯನ ಸ್ವರೂಪವು ಪ್ರಪಂಚದ ದೃಷ್ಟಿಯಿಂದ ಒಂದೇ ವಿಧವಾದುದು. ಎಲ್ಲರ ಕಣ್ಣಿಗೂ ಬೀಳತಕ್ಕಪ್ರಭೆಯು ಲೋಕಸಾಧಾರಣವಾದುದು. ಅದಕ್ಕಿಂತಲೂ ಅತಿಶಯವಾದ ಪ್ರಭಾವಿಶೇಷವು ಸಾಧಾರಣವಾದ ದೃಷ್ಟಿಗೆ ಗೋಚರವಾಗತಕ್ಕದ್ದಲ್ಲ. ಅದಕ್ಕೆ ಮಂತ್ರಸಹಾಯವೂ ತತ್ಪ್ರೇರಿತವಾದ ಧ್ಯಾನವಿಶೇಷವೂ ಅವಶ್ಯವಾಗಿರು

---

1 **ಏಷ ಸ್ಯ ಭಾನುರುದಿಯರ್ತಿ ಯುಜ್ಯತೇ ರಥಃ ಪರಿಜ್ಮಾ**
**ದಿವೋ ಅಸ್ಯ ಸಾನವಿ ।**
**ಪೃಕ್ಷಾಸೋ ಅಸ್ಮಿನ್ಮಿಥುನಾ ಅಧಿ ತ್ರಯೋ ದೃತಿಸ್ತುರೀಯೋ**
**ಮಧುನೋ ವಿ ರಪ್ಶತೇ ॥**
**(ಋ. ಸಂ. ೪.೪೫.೧.)**

ತ್ತದೆ. ಇದರಂತೆಯೇ, ತಮೋರೂಪದ ಅಜ್ಞಾನವೆಂದಾಗಲಿ, ಅಜ್ಞಾನ ರೂಪದ ತಮಸ್ಸೆಂದಾಗಲಿ ಅರ್ಥಮಾಡಿದರೆ, ಆಗ **ತುರೀಯಾವಸ್ಥೆ**ಯಲ್ಲಿರುವ ಆದಿತ್ಯನ ದಿವ್ಯಪ್ರಭೆಯನ್ನರಿಯಲು **ತುರೀಯ** ಮಂತ್ರದ ಪ್ರಭಾವ ದಿಂದಲೇ ಸಾಧ್ಯವೆಂಬ ತಾತ್ಪರ್ಯವು ಸ್ಪಷ್ಟವಾಗಿದೆ. ಹೀಗೆಯೇ, **ಚಮೂಷ ಚ್ಛ್ಯೇನಃ ಶಕುನೋ** ಎಂಬ ಮಂತ್ರದಲ್ಲಿ ಚಂದ್ರಲೋಕದ ಸ್ತುತಿಯಿದೆ. ಅಂತರಿಕ್ಷವನ್ನು ಸೇವಿಸತಕ್ಕ ಸೋಮನು ಸೂರ್ಯಲೋಕವನ್ನೂ ಮೀರಿರುವ ಚಂದ್ರಲೋಕವನ್ನು ಸೇವಿಸುತ್ತ ಪ್ರಕಾಶಿಸುತ್ತಿದ್ದನು ಎಂಬುದು ಮಂತ್ರದ ತಾತ್ಪರ್ಯ. ಇದೇ ಚಂದ್ರಲೋಕವು ಉಪನಿಷತ್ತುಗಳಲ್ಲಿ ಬೇರೆ ವಿಧವಾಗಿ ವರ್ಣಿತವಾಗಿದೆ. ಇದು ಅಪ್ರಾಕೃತವಾದ ದಿವ್ಯಲೋಕವೆಂದು ತೋರಿಸಲು ಸಾಯಣರು **ಸೂರ್ಯಲೋಕಸ್ಯೋಪರಿ ವರ್ತಮಾನೇ** ಎಂದು ವಿವರಿಸಿದ್ದಾರೆ. ಇಲ್ಲಿಯೂ **ತುರೀಯ** ಪದವು ಚಂದ್ರನ ದಿವ್ಯಧಾಮವನ್ನು ನಿರ್ದೇಶಿಸುತ್ತ ವಿಶೇಷಾರ್ಥವನ್ನು ವ್ಯಕ್ತಪಡಿಸುತ್ತದೆ. ಹೀಗೆ ಋಕ್ಸಂಹಿತೆಯಲ್ಲಿಯೂ ಅಲೌಕಿಕವಾದ ಪರತತ್ತ್ವವನ್ನು ನಿರ್ದೇಶಿಸಲು "ತುರೀಯ" ಪದದ ಪ್ರಯೋಗವಿದೆ.

**ತುರೀಯ** (ನಾಲ್ಕನೇ) ಭಾಗವು ವಿಶ್ವದ ಉಳಿದ ಮೂರು ಭಾಗಗಳಿಗಿಂತಲೂ ಮೀರಿದುದು ಎನ್ನುವಾಗ ಅವಕ್ಕಿಂತಲೂ ಭಿನ್ನವಾದುದು ಎಂದರ್ಥಮಾಡಬಾರದು. ಒಂದೇ ತತ್ತ್ವವು ಪ್ರಾಕೃತವಾದ ವಿಶ್ವವನ್ನೆಲ್ಲ ವ್ಯಾಪಿಸಿ ಅದಕ್ಕಿಂತಲೂ ಅತೀತವಾಗಿದೆಯೆಂದು ತಾತ್ಪರ್ಯ. "ಒಂದೇ ಆದ ಪುರುಷತತ್ತ್ವವು ವಿಶ್ವವನ್ನೂ ವ್ಯಾಪಿಸಿ ದಶಾಂಗುಲಪರಿಮಾಣದಷ್ಟು ಅತೀತವಾಗಿ ನಿಂತಿತು" ಇತ್ಯಾದಿಯಾಗಿ ವರ್ಣಿತವಾಗಿದೆ.



# ಪ್ರಣವ, ಗಾಯತ್ರೀ ಮತ್ತು ಪರಂಜ್ಯೋತಿ.

ಹೃತ್ಪುಂಡರೀಕದಲ್ಲಿದ್ದು ಅನ್ನವನ್ನು ಭುಜಿಸುತ್ತಿರುವ ಪುರುಷನೇ ಸರ್ವಭಕ್ಷಕನೂ, ಕಾಲಾತ್ಮನೂ ಮತ್ತು ಆದಿತ್ಯರೂಪಿಯೂ ಆದ ದಿವ್ಯ ಜ್ಯೋತಿ. ಹೃತ್ಪುಂಡರೀಕವಾವುದು ಇದರ ಸ್ವರೂಪವೇನು ಎಂದರೆ, ಸರ್ವವ್ಯಾಪಿಯಾದ ಆಕಾಶವೇ ಹೃತ್ಪುಂಡರೀಕ. ನಾಲ್ಕು ಮುಖ್ಯದಿಕ್ಕುಗಳೂ, ನಾಲ್ಕು ಉಪದಿಕ್ಕುಗಳೂ ಆಕಾಶಾತ್ಮಕನಾದ ಪುಷ್ಕರದ ದಳಗಳು. ಪುಷ್ಕರಸ್ಥನಾದ ಆತ್ಮನೂ ಆಕಾಶಸ್ಥನಾದ ಆದಿತ್ಯನೂ ಪರಸ್ಪರ ಅಭಿಮುಖರು. **ಭೂಃ, ಭುವಃ, ಸ್ವಃ** ಎಂಬ ವ್ಯಾಹೃತಿಗಳಿಂದಲೂ, ಅಕ್ಷರವೂ ಓಂಕಾರರೂಪವೂ ಆದ ಪ್ರಣವದಿಂದಲೂ ಮತ್ತು "ತತ್ಸವಿತುರ್ವರೇಣ್ಯಂ" ಎಂಬ ಸಾವಿತ್ರೀರೂಪವಾದ ಗಾಯತ್ರೀಪಠನದಿಂದಲೂ ಈ ತತ್ತ್ವವನ್ನು ಅನುಸಂಧಾನಮಾಡಬೇಕು ಎಂದುಪದೇಶಿಸಿದೆ [1]

**ಭೂಃ, ಭುವಃ, ಸ್ವಃ** ಎಂಬ ವಿಭಾಗವು ಜ್ಯೋತೀರೂಪನಾದ ಬ್ರಹ್ಮನ ಸ್ವರೂಪವನ್ನು ವರ್ಣಿಸುವಂತೆಯೇ **ಪ್ರಣವ** ಮತ್ತು **ಗಾಯತ್ರೀ** ಸ್ವರೂಪಗಳನ್ನೂ ವರ್ಣಿಸುತ್ತದೆ. ಬ್ರಹ್ಮವು ಸಾಧ್ಯ, ಪ್ರಣವ ಮತ್ತು ಗಾಯತ್ರಿಗಳು ಸಾಧನಗಳೆಂಬ ವ್ಯಾವಹಾರಿಕದೃಷ್ಟಿಯಿಂದಲೂ, ಉಪಾಸ್ಯ ಮತ್ತು ಉಪಾಸನಸಾಧನ ಎಂಬ ವಿಭಾಗದೃಷ್ಟಿಯಿಂದಲೂ ಹೇಳಿದೆ. ಆದರೆ ಪಾರಮಾರ್ಥಿಕವಾಗಿ ಸಾಧ್ಯ ಮತ್ತು ಸಾಧನ ಎರಡೂ ಒಂದೇ ಎಂದು ತಿಳಿಯಬೇಕೆಂದು ಶ್ರುತಿಯು ಉಪದೇಶಿಸುತ್ತದೆ.

ಜ್ಯೋತೀರೂಪದ ತತ್ತ್ವವನ್ನರಿಯಲು ಜ್ಯೋತೀರೂಪದ ಸಾಧನದಿಂದ ಮಾತ್ರ ಸಾಧ್ಯ ಎಂಬಂಶವನ್ನು ಮುಖ್ಯವಾಗಿ ಗಮನಿಸಬೇಕು. ಈ ಸಾಧನವು ಧ್ಯಾನರೂಪವಾದುದು ಆದ್ದರಿಂದ ಸಾಧ್ಯವಾದ ಪರತತ್ತ್ವದ ಜ್ಯೋತಿಯ ಸ್ವರೂಪವೇನು? ಸಾಧನವಾದ ಗಾಯತ್ರಿಯ ಮತ್ತು ಪ್ರಣವದ

---

1 ಅಥ ಯ ಏಷೋಽನ್ತರೇ ಹೃತ್ಪುಷ್ಕರ ಏವ .... | ಅಸಾವಗ್ನಿಹರತ ಏತೌ ಪ್ರಾಣಾದಿತ್ಯೌ ಏತಾ ಉಪಾಸೀತೋಮಿತ್ಯೇತದಕ್ಷರೇಣ ವ್ಯಾಹೃತಿಭಿಃ ಸಾವಿತ್ರ್ಯಾ ಚೇತಿ ||

(ಮೈತ್ರ್ಯುಪನಿಷತ್. ೬.೨.)

ಜ್ಯೋತಿಯ ಸ್ವರೂಪವಾವುದು ಮತ್ತು ಪರಂಜ್ಯೋತಿಯನ್ನರಿಯುವ ಧ್ಯಾನದ ಕ್ರಮವೇನು ? **ತತ್ಸವಿತುಃ** ಎಂಬ ಮಹಾಮಂತ್ರವೊಂದರಿಂದಲೇ ಈ ಸಾಧ್ಯ, ಸಾಧನ ಮತ್ತು ಧ್ಯಾನ ಎಂಬ ಮೂರು ರೂಪಗಳೂ ನಿರ್ದಿಷ್ಟ ವಾಗಿವೆಯೆಂದು ಹೇಳಬಹುದೆ ಎಂದು ಪರಿಶೀಲಿಸುವುದು ಸದ್ಯಃ ಅವಶ್ಯ ವಾಗಿದೆ.

ಅಗ್ನ್ಯಾದಿ ಜ್ಯೋತಿತ್ರಯವನ್ನೊಳಗೊಂಡ ಮೂರು ಲೋಕಗಳ ವರ್ಣನವನ್ನೂ ಮೇಲೆ ತಿಳಿಸಿದೆ. ಜ್ಯೋತೀರೂಪನಾದ ವಿಶ್ವಪ್ರಭುವಿಗೆ **ಕೇಶೀ,**[1] **ತ್ರಯಃ ಕೇಶಿನಃ** ಇತ್ಯಾದಿ ವಿಶೇಷಣಗಳ ಔಚಿತ್ಯವನ್ನೂ ತಿಳಿಸಿದೆ. "ಯತ್ರ ಜ್ಯೋತಿರಜಸ್ರಂ".. (9.113.7) ಇತ್ಯಾದಿ ಶ್ರುತಿ ವಾಕ್ಯಗಳಲ್ಲೂ ಜ್ಯೋತೀರೂಪವಾದ ಬ್ರಹ್ಮನ ಸ್ತುತಿಯಿದೆ. ಇಂಥ ಜ್ಯೋತೀರೂಪವಾದ ಬ್ರಹ್ಮವು **ಭೂಃ, ಭುವಃ, ಸ್ವಃ** ಎಂಬ ಮೂರು ಲೋಕಗಳಲ್ಲೂ **ಅಗ್ನಿ, ವಾಯು** ಮತ್ತು **ಆದಿತ್ಯ** ಎಂಬ ಮೂರು ರೂಪ ಗಳಲ್ಲೂ ಪ್ರಕಾಶಿಸುತ್ತಿದೆಯೆಂದು ಮೇಲಿನ ವಾಕ್ಯಗಳ ತಾತ್ಪರ್ಯ. ಈ ಮೂರು ಜ್ಯೋತಿಗಳೂ ನಾಮಾಂತರಗಳಿಂದಲೂ ನಿರ್ದೇಶಿಸಲ್ಪಟ್ಟಿವೆ. ಅಗ್ನಿ, ವಾಯು, ಆದಿತ್ಯ ಎಂದು ಕೆಲವರೂ, ಕಾಲ, ಪ್ರಾಣ, ಅನ್ನ ಎಂದು ಕೆಲವರೂ, ಬ್ರಹ್ಮ, ರುದ್ರ, ವಿಷ್ಣು ಎಂದು ಕೆಲವರೂ ನಿರ್ದೇಶಿಸಿ ಉಪಾಸನೆ ಮಾಡುತ್ತಾರೆ.[2]

ಪರಂಜ್ಯೋತೀರೂಪವಾದ ಪರಬ್ರಹ್ಮವು ಯಾವ ರೀತಿ ಅಗ್ನ್ಯಾದಿ ಜ್ಯೋತೀರೂಪದಲ್ಲಿ ಪರಿಣಮಿತವಾಗಿದೆಯೆಂದು ವರ್ಣಿತವಾಗಿದೆಯೋ ಅದೇ ರೀತಿ ವ್ಯಾಹೃತ್ಯಾತ್ಮಕವಾದ ಪ್ರಣವವೂ ಅಗ್ನಿ, ವಾಯು ಮತ್ತು

---

1 ಕೇಶ್ಯಗ್ನಿಂ ಕೇಶೀ ವಿಷಂ ಕೇಶೀ ಬಿಭರ್ತಿ ರೋದಸೀ ।
ಕೇಶೀ ವಿಶ್ವಂ ಸ್ವರ್ದೃಶೇ ಕೇಶೀದಂ ಜ್ಯೋತಿರುಚ್ಯತೇ ॥
(ಋ. ಸಂ. ೧೦.೧೩೬.೧.)

2 ಅಗ್ನಿರ್ವಾಯುರಾದಿತ್ಯಃ ಕಾಲೋ ಯಃ ಪ್ರಾಣೋಽನ್ನಂ
ಬ್ರಹ್ಮಾ ರುದ್ರೋ ವಿಷ್ಣುರಿತ್ಯೇಕೇಽನ್ಯಮಭಿಧ್ಯಾಯಂತಿ
(ಮೈತ್ರ್ಯುಪನಿಷತ್. ೪.೫.)

ಆದಿತ್ಯರೂಪವಾದ ಜ್ಯೋತಿಗಳಿಗೆ ಆಧಾರವಾದ ಭೂವ್ಯಾದಿ ಲೋಕ ತ್ರಯಾತ್ಮಕವಾಗಿ ಪರಿಣಮಿತವಾಗಿದೆಯೆಂದು ಅನೇಕ ಶ್ರುತಿವಾಕ್ಯಗಳು ತಿಳಿಸುತ್ತವೆ. ಪ್ರಣವವು ಪರಬ್ರಹ್ಮನಲ್ಲದೆ ತದ್ಭಿನ್ನವಲ್ಲ ಎಂಬುದೂ ನಿಷ್ಕೃಷ್ಟ ವಾದ ಅಭಿಪ್ರಾಯ. ಪ್ರಣವಾತ್ಮಕವಾದ ಪರಬ್ರಹ್ಮವೇ ಮೂರು ಪ್ರಕಾರ ವಾಗಿ ಪರಿಣಮಿಸಿ ತತ್ತದ್ದೇಶಕಾಲೀನವಾದ ಮತ್ತು ಸ್ವರೂಪಾನುಗುಣ ವಾದ ನಾಮಾಂತರಗಳಿಂದ ಕರೆಯಲ್ಪಡುವುದೂ, ಸಾವಿತ್ರ್ಯಾಖ್ಯವಾದ ಗಾಯತ್ರಿಯಿಂದ ಪರಬ್ರಹ್ಮರೂಪಾತ್ಮಕವೆಂದು ಸ್ತುತವಾಗಿರುವುದೂ ಉಪ ನಿಷತ್ತುಗಳಲ್ಲಿ ವಿವೃತವಾಗಿದೆ. ಇದರಿಂದ ವ್ಯಾಹೃತ್ಯಾತ್ಮಕವಾದ ಗಾಯ ತ್ರಿಯೂ ವ್ಯಾಹೃತ್ಯಾತ್ಮಕವಾದ ಪ್ರಣವವೂ ಜ್ಯೋತೀರೂಪವಾದ ಒಂದೇ ಬ್ರಹ್ಮತತ್ತ್ವದ ನಾಮಾಂತರಗಳು ಎಂಬುದೂ ಸ್ಪಷ್ಟವಾಗಿದೆ.

ಜ್ಯೋತೀರೂಪನೂ, ಆದಿತ್ಯಾಖ್ಯನೂ ಆದ ಬ್ರಹ್ಮನಿಗೆ ಓಂಕಾರರೂಪ ವಾದ ಪ್ರಣವವೇ ಆತ್ಮ. ಪ್ರಣವದ ಅವಯವಗಳು ಮೂರು.[1] **ಅ, ಉ** ಮತ್ತು **ಮ.** ಪ್ರಣವದ **ಅ, ಉ, ಮ** ಎಂಬ ಅವಯವಗಳಿಂದಲೇ ಸಕಲ ಪ್ರಪಂಚಗಳೂ ಓತಪ್ರೋತಗಳಂತೆ ಹೆಣೆದುಕೊಂಡಿವೆ. ಆದ್ದರಿಂದ ವಿಶ್ವಾತ್ಮ ನಾದ ಆದಿತ್ಯನನ್ನು ಪ್ರಣವಾತ್ಮನೆಂದುಪಾಸಿಸಬೇಕು.

ಮೂರ್ತರೂಪದಲ್ಲಿ ಪ್ರಣವಾತ್ಮನಾದ ಬ್ರಹ್ಮನ ಪ್ರಕಾರವು ಮೂರು ವಿಧವಾಗಿದೆ. ಇವನ್ನೇ ಅವನ ಅವಯವಗಳೆಂದೂ ಕರೆಯಬಹುದು. (ಮೈ. ಉ. ೬.೫)

| | | | |
|---|---|---|---|
| ಸ್ತ್ರೀ | ಪುಮಾನ್ | ನಪುಂಸಕ | ಲಿಂಗಾತ್ಮಕ ವಿಭಾಗ |
| ಅಗ್ನಿ | ವಾಯು | ಆದಿತ್ಯ | ಪ್ರಕಾಶಾತ್ಮಕ |
| ಬ್ರಹ್ಮ | ರುದ್ರ | ವಿಷ್ಣು | ಅಧಿಪತಿರೂಪ |
| ಗಾರ್ಹಪತ್ಯ | ದಕ್ಷಿಣಾಗ್ನಿ | ಆಹವನೀಯ | ಮುಖಾತ್ಮಕ |

---

1 "....ತದ್ಬ್ರಹ್ಮ ತಜ್ಜ್ಯೋತಿಃ....ಸ ಆದಿತ್ಯಃ ಸವಾ ಏಷ ಓಮಿತ್ಯೇ ತದಾತ್ಮಾ ಭವತ್ ಸ ತ್ರೇಧಾತ್ಮಾನಂ ವ್ಯಕುರುತ ಓಮಿತಿ ತಿಸ್ರೋ ಮಾತ್ರಾ ಏತಾಭಿಃ ಸರ್ವಮಿದಂ ಓತಂ ಪ್ರೋತಂ ಚ.. "

(ಮೈ. ಉ. ೬.೩.)

| | | | |
|---|---|---|---|
| ಋಕ್ | ಯಜುಃ | ಸಾಮ | ವಿಜ್ಞಾನಾತ್ಮಕ |
| ಭೂಃ | ಭುವಃ | ಸ್ವಃ | ಲೋಕಾತ್ಮಕ |
| ಭೂತ | ವರ್ತಮಾನ | ಭವಿಷ್ಯತ್ | ಕಾಲಾತ್ಮಕ |
| ಪ್ರಾಣ | ಅಗ್ನಿ | ಸೂರ್ಯ | ಪ್ರತಾಪರೂಪ |
| ಅನ್ನ | ಆಪಃ | ಚನ್ದ್ರಮಾಃ | ವೃದ್ಧಿರೂಪ |
| ಬುದ್ಧಿ | ಮನಃ | ಅಹಂಕಾರ | ಚೈತನ್ಯರೂಪ |
| ಪ್ರಾಣ | ಅಪಾನ | ವ್ಯಾನ | ಪ್ರಾಣರೂಪ |

ಬ್ರಹ್ಮಾಂಡ ಅವಯವಗಳೇ ಪ್ರಣವದ ಅವಯವಗಳು. ಆದ್ದರಿಂದಲೇ ಬ್ರಹ್ಮವನ್ನು ಪ್ರಣವರೂಪದಿಂದ ಉಪಾಸಿಸಬೇಕು. ಸಕಲ ಜಗತ್ತೂ ಪ್ರಣವಾವಯವಗಳಾದ ವ್ಯಾಹೃತಿಸ್ವರೂಪವುಳ್ಳದ್ದಾಗಿದೆ. ಆದ್ದರಿಂದಲೇ, **ತತ್ಸವಿತುಃ** ಎಂಬ ಸವಿತೃದೇವತಾ ಪ್ರಾರ್ಥನಾರೂಪವಾದ ಮಂತ್ರದಿಂದಲೇ ಬ್ರಹ್ಮನನ್ನು ಆರಾಧಿಸಬೇಕು.

ಈ ರೀತಿಯಾದ ವಿವರಣದಲ್ಲಿ ಎರಡಂಶಗಳನ್ನು ಗಮನಿಸಬೇಕು. ಮೊದಲನೆಯದಾಗಿ, ಪೃಥಿವ್ಯಾದಿ ಲೋಕತ್ರಯವೂ ಭೂರಾದಿವ್ಯಾಹೃತಿಗಳ ಉಚ್ಚಾರಣೆಯಿಂದ ಉತ್ಪನ್ನವಾದವೆಂದೂ, ಎರಡನೆಯದಾಗಿ ಈ ಕಾರಣ ದಿಂದಲೇ ಗಾಯತ್ರ್ಯಾತ್ಮಕವಾದ ವ್ಯಾಹೃತಿಗಳಿಂದಲೇ ಬ್ರಹ್ಮೋಪಾಸನೆ ಯನ್ನು ಮಾಡಬೇಕೆಂದೂ ತಿಳಿಸಿದೆ. ಇದು ಹೇಗೆಂದರೆ—

ಪ್ರಥಮದಲ್ಲಿ ವಿಶ್ವವು ಅವ್ಯಾಕೃತವಾಗಿದ್ದಿತು. ಸತ್ಯಾತ್ಮಕನೂ, ಪ್ರಜಾಪತಿರೂಪನೂ ಆದ ಪರಮಪುರುಷನು ತಪಸ್ಸನ್ನಾಚರಿಸಿ ಭೂಃ, ಭುವಃ, ಸ್ವಃ (ಪೃಥ್ವೀ, ಅಂತರಿಕ್ಷ, ಆದಿತ್ಯಲೋಕ) ಎಂದು ವ್ಯಾಹರಿಸಿದನು. ಇದೇ ಪ್ರಜಾಪತಿಯ ಪ್ರಪಂಚಾತ್ಮಕವಾದ ಸ್ಥೂಲರೂಪ. ಆದಿತ್ಯಲೋಕವೇ ಈ ರೂಪದ ಶಿರಸ್ಸು. ಅಂತರಿಕ್ಷವೇ ನಾಭಿ. ಪೃಥ್ವಿಯೇ ಪಾದಗಳು. ಸರ್ವ ವನ್ನೂ ವೀಕ್ಷಿಸಲು ಸಾಧನವಾದ ಚಕ್ಷುಸ್ಸೇ ಆದಿತ್ಯರೂಪ. ಇವನನ್ನು ಉಪಾಸಿಸುವ ಕ್ರಮ.

" ತತ್ಸವಿತುರ್ವರೇಣ್ಯಮಿತ್ಯಸೌ ವಾ ಆದಿತ್ಯಃ ಸವಿತಾ...

ಆಹುರ್ಬ್ರಹ್ಮವಾದಿನಃ "

ಅತ್ಯಂತ ಪೂಜ್ಯವಾದ ಸವಿತೃವಿನ ತೇಜಸ್ಸು ಉಪಾಸ್ಯ. ಸ್ವರ್ಗಲೋಕದಲ್ಲಿ ಪ್ರಕಾಶಿಸುವ ಆದಿತ್ಯನೇ ಸವಿತೃ. ಆತ್ಮಾನುಸಂಧಾನ ಮಾಡಬೇಕೆಂಬ ಪುರುಷನು ಸವಿತೃವಿನ ಸ್ವರೂಪವನ್ನರಿತು ಉಪಾಸಿಸಬೇಕು.

ಭರ್ಗೋ ದೇವಸ್ಯ ಧೀಮಹೀತಿ ಸವಿತಾ ವೈ ದೇವಃ....

ಇತ್ಯಾಹು ಬ್ರಹ್ಮವಾದಿನಃ ||

ಸವಿತೃವಿನ ಭರ್ಗವನ್ನು ನಾವು ಅರಿಯೋಣ, ಮತ್ತು ಉಪಾಸಿಸೋಣ ಸವಿತೃವೇ ಪರಬ್ರಹ್ಮ, ಇದರ ಅನುಸಂಧಾನಮಾಡಬೇಕು.

ಧಿಯೋ ಯೋ ನಃ ಪ್ರಚೋದಯಾತ್ ಇತಿ ಬುದ್ಧಯೋ

ವೈ ಧಿಯಃ .... ||

ಅದೇ ಸವಿತೃವು ನಮಗೆ ಪ್ರಜ್ಞೆಯನ್ನುಂಟುಮಾಡಲಿ. ಸವಿತೃವಿನ ಭರ್ಗವನ್ನರಿಯಲು ನಮಗೆ ಚೈತನ್ಯವನ್ನುಂಟುಮಾಡಲಿ ಎಂದು ಪ್ರಾರ್ಥಿಸಬೇಕೆಂದು ಬ್ರಹ್ಮವಾದಿಗಳು ಹೇಳಿದ್ದಾರೆ ಎಂದು ಮೈತ್ರ್ಯುಪನಿಷತ್ತಿನಲ್ಲಿ **ತತ್ಸವಿತುಃ** ಎಂಬ ಋಕ್ಕಿನ ನಿರ್ವಚನರೂಪವಾದ ವಿವರಣೆಯನ್ನು ಹೇಳಿದೆ.

" **ಸರ್ವಮೋಂಕಾರ ಏವ** " ವಿಶ್ವವೆಲ್ಲ ಓಂಕಾರಮಯ, ಎಂಬ ಮಾಂಡೂಕ್ಯೋಪನಿಷತ್ತಿಗೆ ವ್ಯಾಖ್ಯಾನಮಾಡುತ್ತ "ನಾಮರೂಪಗಳಿಂದ ನಿರ್ದೇಶಿಸಲ್ಪಟ್ಟ ಯಾವ ಯಾವ ವಸ್ತುಗಳು ಲೋಕದಲ್ಲಿ ಅಭಿಧೇಯವಾಗಿರುವುವೋ ಅವೆಲ್ಲವೂ ಓಂಕಾರಮಯವೇ ಆಗಿವೆ. ನಿರ್ದೇಶಮಾಡುವ ಕ್ರಮವೂ ಓಂಕಾರವೇ. ಅಭಿಧಾನ ಮತ್ತು ಅಭಿಧೇಯ ಎಂಬ ಸಾಧನ ರೂಪದಲ್ಲಿ ತಿಳಿಯಬರುವುದರಿಂದ ಪರಬ್ರಹ್ಮವೂ ಓಂಕಾರ. ಪರಾಪರ ಬ್ರಹ್ಮರೂಪವಾದ **ಓಂ** ಎಂಬ ಅಕ್ಷರದ ಉಪಾಖ್ಯಾನವು ಬ್ರಹ್ಮವನ್ನು ಅರಿತುಕೊಳ್ಳುವುದಕ್ಕೆ ಸಾಧನವಾಗಿದೆ" ಎಂದು ಪ್ರಣವಕ್ಕೂ ಬ್ರಹ್ಮಕ್ಕೂ ಇರುವ ತಾದಾತ್ಮ್ಯವನ್ನು ಶಂಕರಾಚಾರ್ಯರು ತೋರಿಸಿದ್ದಾರೆ.[1] ತೈತ್ತಿರೀಯೋಪನಿಷದ್ವಾಕ್ಯವು ಈ ಅಭಿಪ್ರಾಯವನ್ನು ವಿಶದವಾದ ವಾಕ್ಯಗಳಿಂದ ಸಮರ್ಥಿಸುತ್ತದೆ.

---

: **ತಸ್ಯೈತಸ್ಯ ಪರಾಪರಬ್ರಹ್ಮರೂಪಸ್ಯ ಅಕ್ಷರಸ್ಯ ಓಮಿತ್ಯೇತಸ್ಯೋಪ ವ್ಯಾಖ್ಯಾನಮ್** |

" ಓಮಿತಿ ಬ್ರಹ್ಮ | ಓಮಿತೀದಗ್ಂ ಸರ್ವಂ....
ಬ್ರಹ್ಮೈವೋಪಾಪ್ನೋತಿ "

(ತೈ. ಉ. ೧.೮.)

**ಓಂ** (ಪ್ರಣವ) ಎಂಬುದೇ ಬ್ರಹ್ಮ. ವಿಶ್ವವೆಲ್ಲವೂ **ಓಂ**ಮಯ. ಅದೇ ಅನುಕರಣ. ಸಾಮಗಾನಮಾಡುವವರೂ, ಅಧ್ವರ್ಯ್ವಾದಿಗಳೂ ಇದರಿಂದಲೇ ಪ್ರತಿಗರವನ್ನು ಹೇಳುತ್ತಾರೆ. ಅಧ್ಯಯನವನ್ನು ಮಾಡುವುದಕ್ಕೆ ಮೊದಲು ಬ್ರಹ್ಮನನ್ನು ಪಡೆಯೋಣ ಎಂದು ವೇದಾಧ್ಯಯನವನ್ನು ಮಾಡತಕ್ಕವನು ಓಂಕಾರೋಚ್ಚಾರಣದಿಂದ ಬ್ರಹ್ಮನನ್ನೇ ಪಡೆಯುತ್ತಾನೆ. **ಓಂ** ಎಂದರೆ ಪರಮಾತ್ಮನು. ಇದರ ಧ್ಯಾನರೂಪದಲ್ಲಿ ಇದರ ಉಚ್ಚಾರಣೆಯಿಂದ ಪರಮಾತ್ಮನ ಪ್ರಾಪ್ತಿ.

**ಓಂ**ಕಾರ ರೂಪವಾದ ಪ್ರಣವವು ಅಮೃತವೂ ಅಭಯಾತ್ಮಕವೂ ಆಗಿದೆ. ದೇವತೆಗಳೂ ಇದರ ಆಶ್ರಯವನ್ನು ಪಡೆದು ಅಮೃತತ್ವವನ್ನೂ ಅಭಯುವನ್ನೂ ಪಡೆದರು. ಯಾರು ಈ ತತ್ತ್ವವನ್ನರಿತು **ಓಂ**ಕಾರ ರೂಪವಾದ ಸ್ವರದ ಆಶ್ರಯವನ್ನು ಪಡೆಯುವರೋ ಅವರು ಅಮೃತರಾಗುತ್ತಾರೆ. ಅಭಯವನ್ನು ಪಡೆಯುತ್ತಾರೆ[1] ಎಂದು ಛಾಂದೋಗ್ಯವು ಪ್ರಶಂಸಿಸಿದೆ.

" ಯುಞ್ಜತೇ ಮನ ಉತ ಯುಞ್ಜತೇ " ಎಂಬ ಋಙ್ಮನ್ತ್ರದಿಂದ ನಿರ್ದಿಷ್ಟವಾಗಿರುವ ಚಿತ್ತಸ್ಥಿತಿಯೂ ಅದರಲ್ಲಿ ಧ್ಯಾನಾತ್ಮಕವಾದ ಜ್ಞಾನಾನ್ವೇಷಣೆಯೂ ಪ್ರಣವದ ಪ್ರಭಾವದ ಮೂಲಕ ಹೇಗೆ ಲಭ್ಯ, ಅದನ್ನು ಪಡೆಯುವ ಪ್ರಕಾರವೇನು ಎಂದರೆ,

ಪ್ರಣವವೇ ಧನುಸ್ಸು. ಆತ್ಮನೇ ಬಾಣ. ಬ್ರಹ್ಮವೇ ಲಕ್ಷ್ಯ. ಅದನ್ನು ಎಚ್ಚರತಪ್ಪದೆ ಹೊಡೆಯಬೇಕು. ಬಾಣದಂತೆ ತನ್ಮಯವಾಗಬೇಕು. ಬಾಣವು ಗುರಿಯಲ್ಲಿ ಹೋಗಿ ಸೇರಲು ಧನುಸ್ಸು ಹೇಗೆ ಕಾರಣವಾಗಿರುವುದೋ ಅದರಂತೆ ಆತ್ಮನೆಂಬ ಬಾಣವು ಅಕ್ಷರವೆಂಬ ಗುರಿಯಲ್ಲಿ ಸೇರು

---

1 ಸ ಯ ಏತದೇವಂ ವಿದ್ವಾನಕ್ಷರಂ ಪ್ರಣೌತ್ಯೇತದೇವಾಕ್ಷರಂ
ಸ್ವರಮಮೃತಮಭಯಂ ಪ್ರವಿಶತಿ... ||

(ಛಾ. ಉ. ೧.೪.೫.)

ವುದಕ್ಕೆ ಪ್ರಣವವು ಸಾಧಕವಾಗಬೇಕು ಎಂದು ಧ್ಯಾನಸಾಧನವಾದ ಪ್ರಣವದ ಮಹಿಮೆಯನ್ನು ಸ್ತುತಿಸಿದೆ.[1]

ಪ್ರಣವದ ಅವಯವಗಳೂ, ಗಾಯತ್ರಿಯ ಅವಯವಗಳಾದ **ಭೂಃ, ಭುವಃ, ಸ್ವಃ** ಎಂಬ ಮೂರು ಲೋಕಗಳನ್ನೂ ನಿರ್ದೇಶಿಸುವುವೂ ಆದ **ಅ, ಉ, ಮ** ಎಂಬ ಮೂರು ಮಾತ್ರೆಗಳ ಸಹಾಯದಿಂದ ಪರಮಪುರುಷನನ್ನು ಧ್ಯಾನಿಸುವ ಪುರುಷನು ಆದಿತ್ಯನ ತೇಜಸ್ಸಿನೊಡನೆ ಐಕ್ಯವನ್ನು ಪಡೆಯುತ್ತಾನೆ. ಸರ್ಪವು ತನ್ನ ಪೊರೆಯನ್ನು ಕಳೆದುಕೊಂಡು ಶುದ್ಧವಾಗುವಂತೆ ಇಂಥ ಉಪಾಸಕನೂ ಸಹ ಪೂರ್ಣವಾಗಿ ತನ್ನ ಪಾಪವನ್ನು ಕಳೆದುಕೊಂಡು ಪೂತಾತ್ಮನಾಗುತ್ತಾನೆ ಮತ್ತು ಸಾಮಗಾನದ ಮೂಲಕ ಬ್ರಹ್ಮಲೋಕಕ್ಕೆ ಒಯ್ಯಲ್ಪಡುತ್ತಾನೆ. ಚೇತನಾತ್ಮಕವಾದ ಸಕಲ ಜೀವಘನಕ್ಕಿಂತಲೂ ಉತ್ತಮನೂ ಹೃದಯಾಂತರ್ಗತನೂ ಆದ ಪರಮಾತ್ಮನ ದರ್ಶನವನ್ನು ಪಡೆಯುತ್ತಾನೆ.[2]

ಈ ರೀತಿ ಉಪಾಸನೆ ಮಾಡತಕ್ಕ ಪುರುಷನು ಋಕ್ಕುಗಳಿಂದ ಈ ಲೋಕವನ್ನೂ, ಯಜುಸ್ಸಿನಿಂದ ಅಂತರಿಕ್ಷವನ್ನೂ ಸಾಮಗಳಿಂದ ಕವಿಗೋಚರವಾದ ಆದಿತ್ಯಲೋಕವನ್ನೂ ಪಡೆಯುತ್ತಾನೆ. ಇವುಗಳೆಲ್ಲದರ ಸಮನ್ವಯರೂಪವಾದ ಓಂಕಾರದ ಸಹಾಯದಿಂದ ಶಾಂತವೂ ಜರೆಯಲ್ಲದ್ದೂ ಮರಣರಹಿತವಾದದ್ದೂ ಭಯರಹಿತವಾದದ್ದೂ ಮತ್ತು ಪರಾತ್ಪರವಾದುದೂ ಆದ ತತ್ತ್ವವನ್ನು ಸಾಕ್ಷಾತ್ಕಾರಮಾಡಿಕೊಳ್ಳುತ್ತಾನೆ.[3]

---

1 ಪ್ರಣವೋ ಧನುಃ ಶರೋಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ ।
ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್ ॥
(ಮು. ಉ. ೨.೨.೪)

2 ಯಥಾ ಪಾದೋದರಸ್ತ್ವಚಾ ವಿನಿರ್ಮುಚ್ಯತ ಏವಂ ಹ ವೈ ಸ
ಪಾಪ್ಮನಾ ವಿನಿರ್ಮುಕ್ತಃ ಸ ಸಾಮಭಿರುನ್ನೀಯತೇ ಬ್ರಹ್ಮಲೋಕಂ ॥
(ಪ್ರಶ್ನ. ೫. ೫.)

3 ಋಗ್ಭಿರೇತಂ ಯಜುರ್ಭಿರಂತರಿಕ್ಷಂ ಸಾಮಭಿರ್ಯತ್ತತ್ಕವಯೋ
ವೇದಯಂತೇ ।
ತಮೋಙ್ಕಾರೇಣೈವಾಯತನೇನಾನ್ವೇತಿ ವಿದ್ವಾನ್
ಯತ್ತಚ್ಛಾಂತ ಮಜರಮಮೃತಮಭಯಂ ಪರಂ ಚೇತಿ ॥
(ಪ್ರ. ಉ. ೫. ೭.)

ಹೀಗೆ ಗಾಯತ್ರಿಗೂ ಪ್ರಣವಕ್ಕೂ ಸಮಾನಧರ್ಮವನ್ನು ಸೂಚಿಸಿದಂತಾಗಿದೆ. ವ್ಯಾವಹಾರಿಕದೃಷ್ಟಿಯಿಂದ ಪ್ರಣವವು ಪೂರ್ವ, ಗಾಯತ್ರಿಯು ಪಶ್ಚಾತ್ ಎಂಬ ಉಚ್ಚಾರಣೆಯ ಕಾಲಕ್ರಮವು ತಿಳಿಸಿದ್ದರೂ ಎರಡರ ಸ್ವರೂಪ ಪ್ರಭಾವಗಳೂ ಒಂದೇ ಆಗಿವೆ.

ಬ್ರಹ್ಮಸಾಕ್ಷಾತ್ಕಾರಕ್ಕೆ ಸಾಧನವಾದ ಪ್ರಣವ ಮತ್ತು ಗಾಯತ್ರೀ ಇವೆರಡೂ ಬ್ರಹ್ಮರೂಪಗಳೇ ಆಗಿವೆಯೆಂದು ಹೇಳಿದರೆ, ಸವಿತೃವೆಂದು ನಿರ್ದಿಷ್ಟನಾಗಿರುವ ಬ್ರಹ್ಮನ ಲೌಕಿಕ ಪ್ರಭೇದರೂಪಗಳೂ, ಪ್ರಣವ ಮತ್ತು ಗಾಯತ್ರಿಗಳ ಸಮಾನಾವಯವಗಳೂ ಆದ ವ್ಯಾಹೃತಿಗಳ ಸ್ವರೂಪವೇನು ಅವುಗಳ ಪ್ರಭೇದಗಳೆಷ್ಟು, ಪ್ರಣವಾತ್ಮಕವೂ ಗಾಯತ್ರ್ಯಾತ್ಮಕವೂ ಆದ ಧ್ಯಾನಕ್ಕೆ ವ್ಯಾಹೃತಿಗಳ ಸಾಧಕಸ್ವರೂಪವೇನು ಮುಂತಾದ ವಿಷಯಗಳನ್ನೂ ಪರಿಶೀಲಿಸಬೇಕು.

ಪ್ರಣವಾವಯವಗಳಾದ ಅ, ಉ, ಮ ಎಂಬ ಅಕ್ಷರಗಳು ಪುಂ, ಸ್ತ್ರೀ, ನಪುಂಸಕಾದಿ ಅನೇಕ ರೂಪಗಳಲ್ಲಿ ಪರಿಣತವಾಗುವ ವಿವರಣೆಯನ್ನು ಮೈತ್ರ್ಯುಪನಿಷತ್ತಿನಲ್ಲಿ ಹೇಳಿದೆ. ಅದೇ ರೀತಿಯಾದ ವಿಭಾಗಗಳನ್ನು ತೈತ್ತಿರೀಯೋಪನಿಷತ್ತಿನಲ್ಲೂ ಕೊಂಚ ವ್ಯತ್ಯಾಸಮಾಡಿ ತಿಳಿಸಿದೆ. ಆದರೆ, ತೈತ್ತಿರೀಯೋಪನಿಷತ್ತಿನ ವಿಭಾಗಗಳು ಆಧ್ಯಾತ್ಮಿಕಜ್ಞಾನದೃಷ್ಟಿಯಿಂದಲೂ, ಉಪಾಸನಾದೃಷ್ಟಿಯಿಂದಲೂ ಬಹಳ ಪ್ರಾಧಾನ್ಯವನ್ನು ಪಡೆದಿವೆ. ಶಂಕರಾಚಾರ್ಯರೂ ಈ ವಿಭಾಗಗಳಿಗೆ ಉಪಾಸನಾದೃಷ್ಟಿಯಿಂದ ಬಹಳ ಪ್ರಾಧಾನ್ಯವನ್ನು ತೋರಿಸಿ ವಿಸ್ತಾರವಾಗಿ ವಿವರಿಸಿದ್ದಾರೆ.

ಸ್ವಾರಾಜ್ಯವೆಂಬ ಫಲವನ್ನು ಕೊಡುವ ವ್ಯಾಹೃತಿರೂಪವಾದ ಬ್ರಹ್ಮವನ್ನು ಅಂತತಃ ಉಪಾಸನೆಮಾಡುವ ಕ್ರಮವೇನೆಂದರೆ.

**ಭೂಃ, ಭುವಃ, ಸುವಃ** ಎಂಬ ಮೂರು ಅಂಗರೂಪವಾದ ವ್ಯಾಹೃತಿಗಳು. ನಾಲ್ಕನೆಯ **ಮಹಃ** ಎಂಬ ವ್ಯಾಹೃತಿಯನ್ನು ಮಾಹಾಚಮಸ್ಯನು ತಿಳಿದನು. [1] (ಋಷಿಯ ನಾಮಸ್ಮರಣೆಯೂ ಉಪಾಸನಾಂಗ). **ಮಹಃ** ಎಂಬ ನಾಮಾಂಕಿತವಾದ ಈ ವ್ಯಾಹೃತಿಯೇ ಮಹತ್ತಾದ ಬ್ರಹ್ಮ ಅದೇ ಸರ್ವವ್ಯಾಪಿಯಾದ ಆತ್ಮ. ಉಳಿದವೆಲ್ಲ ಅದರ ಅಂಗಗಳು.

---

1 " **ಋಷ್ಯನುಸ್ಮರಣಮಪಿ ಉಪಾಸನಾಂಗಂ** "

**(ತೈ. ಉ. ಶ. ಭಾ. ೧.೫)**

ಭೂರಾದಿ ಸಕಲ ಲೋಕಗಳೂ, ದೇವತೆಗಳೂ, ವೇದಗಳೂ, ಪ್ರಾಣಗಳೂ, ಆದಿತ್ಯ, ಚಂದ್ರ, ಬ್ರಹ್ಮ ಮತ್ತು ಅನ್ನ ಎಂಬ ವಿಭಾಗಗಳನ್ನೂ ಹೊಂದಿರುವ **ಮಹಃ** ಎಂಬ ಮಹಾವ್ಯಾಹೃತಿರೂಪವಾದ ಆತ್ಮನಿಂದ ವ್ಯಾಪಿಸಲ್ಪಟ್ಟವೆ. ಆದ್ದರಿಂದ ಅವೆಲ್ಲವೂ **ಮಹಃ** ಎಂಬ ಆತ್ಮನ ಅಂಗಗಳು. **ಅಂಗಾನ್ಯನ್ಯಾ ದೇವತಾಃ** ಎಂಬಲ್ಲಿ **ದೇವತಾಃ** ಎಂಬುದು ಉಪಲಕ್ಷಣ. ಆತ್ಮವ್ಯಾಪ್ಯವಾದ ಸಕಲ ಲೌಕಿಕಸತ್ವಗಳೂ ಇದರಲ್ಲಿ ಅಡಕವಾಗಿವೆ.

**ತಾ ವಾ ಏತಾಶ್ಚತಸ್ರಶ್ಚತುರ್ಧಾ** ಎಂದರೆ ಪ್ರತಿಯೊಂದೂ ನಾಲ್ಕು ವಿಭಾಗಗಳನ್ನು ಹೊಂದಿವೆ. ಹೇಗೆಂದರೆ,

**ಭೂಃ**—ಈ ಲೋಕ, ಅಗ್ನಿ, ಋಕ್ಕುಗಳು, ಪ್ರಾಣ.

**ಭುವಃ**—ಅಂತರಿಕ್ಷ; ವಾಯು, ಸಾಮ, ಅಪಾನ.

**ಸುವಃ**—ದ್ಯುಲೋಕ, ಆದಿತ್ಯ, ಯುಜುಸ್ಸು, ವ್ಯಾನ.

**ಮಹಃ**—

ಆದಿತ್ಯ—ಆದಿತ್ಯಸಿಂದಲೇ ಸಕಲ ಲೋಕಗಳೂ ಮಹತ್ತಾಗುತ್ತವೆ.

ಚಂದ್ರ—ಚಂದ್ರನಿಂದಲೇ ಜ್ಯೋತಿಗಳೆಲ್ಲವೂ ಮಹತ್ತಾಗುತ್ತವೆ. (ಈ ಚಂದ್ರಲೋಕವು ಆದಿತ್ಯಲೋಕಕ್ಕಿಂತಲೂ ಮೀರಿರುವುದೆಂಗೂ, ರೂಢವಾಗಿರುವ ಚಂದ್ರಬಿಂಬವೆಂಬರ್ಥವಲ್ಲವೆಂದೂ ಋ. ಸಂ. ೧.೧೬೪ ನೇ ಸೂಕ್ತದಲ್ಲಿ ತಿಳಿಸಿದೆ.)

ಬ್ರಹ್ಮ—ಬ್ರಹ್ಮನಿಂದಲೇ ಸಕಲವೂ ಮಹತ್ತಾಗುತ್ತದೆ.

ಅನ್ನ—ಸಕಲ ಭೂತಗಳ ಮಹತ್ವಕ್ಕೂ ಅನ್ನವೇ ಕಾರಣ.

ಹೀಗೆ ನಾಲ್ಕು ಬಗೆಯಾಗಿರುವ ಈ ನಾಲ್ಕು ವ್ಯಾಹೃತಿಗಳ ಸ್ವರೂಪವನ್ನು ಯಾವನು ಅರಿಯುವನೋ ಅವನು ಪೂರ್ಣವಾದ ಬ್ರಹ್ಮವನ್ನು ಅರಿತಂತೆಯೇ ಆಗುತ್ತದೆ. ದೇವತೆಗಳೆಲ್ಲರೂ ಇವನನ್ನು ಸೇವಿಸುತ್ತಾರೆ.

" **ಚತಸ್ರಶ್ಚತಸ್ರೋ ವ್ಯಾಹೃತಯಃ । ತಾ ಯೋ ವೇದ । ಸ ವೇದ ಬ್ರಹ್ಮ । ಸರ್ವೇಽಸ್ಮೈ ದೇವಾ ಬಲಿಮಾವಹಂತಿ** "

(ತೈ. ಉ. ೧.೫.)

**ಭೂಃ, ಭುವಃ ಸುವಃ** ಎಂಬ ನಾಮಾಂಕಿತರಾದ ಇತರ ಎಲ್ಲ ದೇವತೆಗಳೂ **ಮಹಃ** ಎಂದು ಪ್ರಸಿದ್ಧನಾದ ಬ್ರಹ್ಮನಿಗೆ ಅಂಗಗಳಾಗಿದ್ದಾರೆ ಎಂದು ಮೇಲೆ ಯಾವ ಬ್ರಹ್ಮಸ್ವರೂಪವನ್ನು ವಿವರಿಸಿದೆಯೋ ಅಂಥ ಪರಬ್ರಹ್ಮನ ಸಾಕ್ಷಾತ್ಕಾರಸಾಧನವಾದ ಉಪಾಸನಾಕ್ರಮ.

ಹೃದಯಾಂತರ್ಗತವಾದ ಯಾವ ಆಕಾಶವಿದೆಯೋ ಅದರಲ್ಲಿ ಮನೋಮಯನೂ, ಅಮೃತನೂ, ಹಿರಣ್ಮಯನೂ ಆದ ಪುರುಷನೂ ಇದ್ದಾನೆ. ಉಪಾಸಕನು **ಭೂಃ** ಎಂಬ **ಅಗ್ನಿ**ಯಲ್ಲಿಯೂ, **ಭುವಃ** ಎಂಬ **ವಾಯು**ವಿನಲ್ಲಿಯೂ **ಸುವಃ** ಎಂಬ **ಆದಿತ್ಯ**ನಲ್ಲಿಯೂ, **ಮಹಃ** ಎಂಬ **ಬ್ರಹ್ಮ**ನಲ್ಲಿಯೂ ಪ್ರತಿಷ್ಠಾಪಿತನಾಗುತ್ತಾನೆ. ಸ್ವಾರಾಜ್ಯವನ್ನೂ ಪಡೆಯುತ್ತಾನೆ. ಮನಸ್ಸಿನ ಪ್ರಭುವಾಗುತ್ತಾನೆ ವಾಕ್ಕುಗಳಿಗೂ, ಚಕ್ಷುಸ್ಸುಗಳಿಗೂ, ಶ್ರೋತ್ರಗಳಿಗೂ, ವಿಜ್ಞಾನಗಳಿಗೂ ಒಡೆಯನಾಗುತ್ತಾನೆ. ಅದಕ್ಕಿಂತಲೂ ಅಧಿಕವಾಗಿ ಆಕಾಶಶರೀರವೂ, ಸರ್ವಾತ್ಮವೂ, ಪ್ರಾಣಾರಾಮವೂ, ಮನಆನನ್ದವೂ, ಶಾಂತಿಸಮೃದ್ಧವೂ, ಅಮೃತವೂ ಆಗಿರುವ ಬ್ರಹ್ಮನಲ್ಲಿಯೇ ಪ್ರತಿಷ್ಠಾಪಿತನಾಗಿ ಬ್ರಹ್ಮರೂಪಿಯೇ ಆಗುತ್ತಾನೆ.

ಸಕಲ ವ್ಯಾಹೃತಿಗಳಲ್ಲಿಯೂ ಆತ್ಮಭಾವದಿಂದ ಇದ್ದು ಬ್ರಹ್ಮವೇ ಆಗಿ ಸ್ವಾರಾಜ್ಯವನ್ನು ಪಡೆಯುತ್ತಾನೆ. ಅವನು ತಾನೇ ರಾಜನು. ಅಂಗವಾಗಿರುವ ದೇವತೆಗಳಿಗೆ ಬ್ರಹ್ಮವು ಅಧಿಪತಿಯಾಗಿರುವಂತೆಯೇ ತಾನೂ ಅಧಿಪತಿ. ಆನನ್ದಸ್ವರೂಪನೂ, ಶಾಂತಚಿತ್ತನೂ, ಮರಣರಹಿತನೂ ಆಗುವುದರಿಂದ ವ್ಯಾಹೃತ್ಯಾತ್ಮನಾದ ಬ್ರಹ್ಮದ ಉಪಾಸನೆಯನ್ನು ಮಾಡು ಎಂದು ಪ್ರಾಚೀನಯೋಗ್ಯನಿಗೆ ಮಾಡಿರುವ ಉಪದೇಶದಲ್ಲಿ ವ್ಯಾಹೃತಿರೂಪವಾದ ಉಪಾಸನೆಯ ಸ್ವರೂಪವು ತಿಳಿಯುತ್ತದೆ.

**ಈ** ರೀತಿ, ಭೂರಾದಿವ್ಯಾಹೃತ್ಯಾತ್ಮಕಗಳಾದ ಪ್ರಣವವೂ ಗಾಯತ್ರಿಯೂ ತದಕ್ಷರನಿರ್ದಿಷ್ಟಗಳಾದ ಭೂವ್ಯಾದಿ ಲೋಕಗಳನ್ನೆಲ್ಲ ವ್ಯಾಪಿಸಿರುವ ಪರತತ್ತ್ವದ ಅನುಸಂಧಾನಕ್ಕೆ ಸಾಕ್ಷಾತ್ಸಾಧನವಾಗುತ್ತವೆಂದು ಶ್ರುತಿಗಳು ಪ್ರಶಂಸಿಸಿವೆ. ಯಾವ ಮಹಾಮಂತ್ರವಾದ ಗಾಯತ್ರಿಯನ್ನು

**ಗಾಯತಿ, ತ್ರಾಯತೇ ಚ**(ಅದು ಗಾನಮಾಡುತ್ತದೆ ಮತ್ತು ರಕ್ಷಿಸುತ್ತದೆ) ಎಂದು ವರ್ಣಿಸಿ ಅದರ ವಿಶೇಷಗುಣಗಳನ್ನು ತೋರಿಸಿದೆಯೋ ಅದೇ ರೀತಿ ಓಂಕಾರಾತ್ಮಕವಾದ ಪ್ರಣವವನ್ನೂ ಸ್ತುತಿಸಿದೆ.

ಓಂ ಇತ್ಯೇತದಕ್ಷರಮುದ್ಗೀಥ ಮುಪಾಸೀತ ।
ಓಮಿತಿಹ್ಯುದ್ಗಾಯತಿ ॥
(ಛಾ. ಉ. ೧.೧.೧.)

**ಓಂ** ಎಂಬ ವರ್ಣವನ್ನು ಉದ್ಗೀಥವೆಂದುಪಾಸಿಸಬೇಕು. ಇದು ಬ್ರಹ್ಮ ತತ್ತ್ವವನ್ನು ಗಾನರೂಪದಲ್ಲಿ ಸ್ತುತಿಸುತ್ತದೆ. ವಿಶ್ವವ್ಯಾಪಕವಾದ ಈ ಬ್ರಹ್ಮ ತತ್ತ್ವವೇ ಉದ್ಗೀಥರೂಪದಲ್ಲಿದೆ.

ಉದ್ಗೀಥವೇ ಪ್ರಣವ, ಪ್ರಣವವೇ ಉದ್ಗೀಥ. ಅದಿತ್ಯನೇ ಪ್ರಣವ ಮತ್ತು ಉದ್ಗೀಥ. ಯಾವ ಆದಿತ್ಯರೂಪದ ಬ್ರಹ್ಮನನ್ನೇ ಪ್ರಣವ ಮತ್ತು ಉದ್ಗೀಥ ಎಂದು ಕರೆಯುವರೋ ಅದೇ ರೂಪದಲ್ಲಿ ಹೃದಯಾಂತರ್ಗತನಾದ ಪುರುಷನೂ ಇದ್ದಾನೆ.[1]

ಆದಿತ್ಯಲೋಕದಲ್ಲಿ ಪರತತ್ತ್ವವು ಯಾವ ರೀತಿ ಗಾನಾತ್ಮಕವಾಗಿ ವಿಹರಿಸುವುದೋ ಅದರಂತೆಯೇ ಪುರುಷಾಂತರ್ಗತವಾದ ತತ್ತ್ವವೂ ಅದೇ ನಾಮದಿಂದ ಅದೇ ರೀತಿ ಗಾನಾತ್ಮಕವಾಗಿ ವಿಹರಿಸುತ್ತದೆ.[2] ಇಂಥ ಗಾನಾತ್ಮಕನಾದ ದಿವ್ಯಪುರುಷನನ್ನು ಗಾನಾತ್ಮಕವೂ ಜಗದ್ರಕ್ಷಕವೂ ಆದ ಪ್ರಣವದಿಂದಲೂ ಗಾಯತ್ರೀ ಮಹಾಮಂತ್ರದಿಂದಲೂ ಉಪಾಸಿಸಬೇಕು ಎಂಬುದೇ ತಾತ್ಪರ್ಯ.

ಲೋಕಕ್ಕೆಲ್ಲ ಪೂಜ್ಯವಾದ ಸವಿತೃವಿನ ಭರ್ಗವನ್ನು ಧ್ಯಾನರೂಪದಲ್ಲಿ ಅನುಸಂಧಾನಮಾಡಿ ಉಪಾಸಿಸುವುದೇ ಮಂತ್ರದ ಉದ್ದಿಶ್ಯ. ಯಾವ

---

1 ಅಥ ಖಲು ಯ ಉದ್ಗೀಥಃ ಸ ಪ್ರಣವೋ ಯಃ ಪ್ರಣವಃ ಸ ಉದ್ಗೀಥ ಇತ್ಯಸೌ ವಾ ಆದಿತ್ಯ ಉದ್ಗೀಥ ಏಷ ಪ್ರಣವ ಓಮಿತಿ ಹ್ಯೇಷ ಸ್ವರನ್ನೇತಿ ।
(ಛಾ. ಉ. ೧.೫.೧.)

2 "....ತಸ್ಯೈತಸ್ಯ ತದೇವ ರೂಪಂ ಯದಮುಷ್ಯ ರೂಪಂ ..."
(ಛಾ. ಉ. ೧.೭.೫.)

ತತ್ತ್ವದಿಂದ ಸಕಲ ಜಗತ್ತೂ ಉತ್ಪನ್ನವಾಗುವುದೋ, ಯಾವುದರ ಶಕ್ತಿಯಿಂದ ಉತ್ಪನ್ನವಾದ ಸಕಲ ಭೂತಗಳೂ ಜೀವಿಸುವುವೋ ಮತ್ತು ಪುನಃ ಲಯಕಾಲದಲ್ಲಿ ಯಾವ ತತ್ತ್ವವನ್ನೇ ಜಗತ್ತೆಲ್ಲವೂ ಸೇರಿಕೊಳ್ಳುವುದೋ ಅಂಥ ಬ್ರಹ್ಮವು ಸವಿತೃಶಬ್ದವಾಚ್ಯವಾಗಿದೆಯೆಂದು ಮೇಲಿನ ವಿವರಣೆಗಳಲ್ಲಿ ತಿಳಿಸಿದೆ. ಇಂಥ ಬ್ರಹ್ಮತತ್ತ್ವವನ್ನರಿಯಲು ಗಾಯತ್ರ್ಯುಪಾಸನೆಯೇ ಮುಖ್ಯಸಾಧನವೆಂದೂ ಸ್ಪಷ್ಟಪಡಿಸಿದೆ.

## "ತತ್ಸವಿತುಃ" ಎಂಬ ಮಂತ್ರದ ಪ್ರತಿಪದಾರ್ಥ.

### ತತ್.

"ತತ್ಸವಿತುಃ"[1] ಎಂಬ ಮಂತ್ರದಲ್ಲಿ **ತತ್** ಎಂಬ ಪದಕ್ಕೆ ಎರಡು ವಿಧವಾದ ಅನ್ವಯವನ್ನು ತೋರಿಸಿದೆ. ಈ ಪದವು **ಸವಿತುಃ** ಎಂಬುದಕ್ಕೆ ವಿಶೇಷಣವೆಂದು ಕೆಲವರೂ, **ಭರ್ಗಃ** ಎಂಬುದಕ್ಕೆ ವಿಶೇಷಣವೆಂದು ಇನ್ನು ಕೆಲವರೂ ಅಭಿಪ್ರಾಯಪಟ್ಟಿದ್ದಾರೆ. ವಿವರಣೆಯಲ್ಲಿ ಈ ರೀತಿ ಎರಡು ಮತಗಳಿದ್ದರೂ ಒಟ್ಟಿನಲ್ಲಿ ಎರಡರ ತಾತ್ಪರ್ಯವೂ ಒಂದೇ. ಹೇಗೆಂದರೆ, ಮೊದಲನೆಯದಾಗಿ, ತಚ್ಛಬ್ದದ ಷಷ್ಠ್ಯಂತವಾದ **ತಸ್ಯ** ಎಂಬರ್ಥವು **ತಚ್ಛಬ್ದಕ್ಕೆ** ಪ್ರಾಪ್ತವಾಗುತ್ತದೆ. **ತಸ್ಯ ದೇವಸ್ಯ** ಎಂದರ್ಥ ಅಥವಾ **ತಸ್ಯ** ಎಂಬ ಪದಕ್ಕೆ **ಬ್ರಹ್ಮಣಃ** ಎಂದೂ ತಾತ್ಪರ್ಯ. **ತತ್** ಎಂಬ ಪದವೇ ಬ್ರಹ್ಮವಾಚಿಯಾಗಿದೆ.[2] **ಓಂ ತತ್ಸತ್** ಎಂಬ ಭಗವದ್ಗೀತಾ ವಾಕ್ಯಕ್ಕೆ ತಾತ್ಪರ್ಯವನ್ನು ಹೇಳುವಾಗ **ತಚ್ಛಬ್ದೋ ಹಿ ಬ್ರಹ್ಮ ವಾಚೀ ಪ್ರಸಿದ್ಧಃ** ಎಂದು ರಾಮಾನುಜಾಚಾರ್ಯರೂ, ತತ್ ಇತಿ ಬ್ರಹ್ಮಾಭಿಧಾನಂ ಉಚ್ಚಾರ್ಯ ಎಂದು ಶಂಕರಾಚಾರ್ಯರೂ ತಚ್ಛಬ್ದದ ಅರ್ಥವನ್ನು ಹೇಳಿದ್ದಾರೆ.

ಉಪನಿಷತ್ತುಗಳಲ್ಲಿ **ತತ್** ಶಬ್ದವನ್ನು ಅನೇಕ ಕಡೆಗಳಲ್ಲಿ ಬ್ರಹ್ಮಪರ್ಯಾಯವಾಗಿಯೇ ಉಪಯೋಗಿಸಿದೆ. "ತತ್ತ್ವಮಸಿ ಶ್ವೇತಕೇತೋ" ಎಂಬ ಪ್ರಯೋಗವು ಜಗತ್ಪ್ರಸಿದ್ಧವಾದುದು. **ತತ್** ಎಂದರೆ ಬ್ರಹ್ಮ, **ತ್ವಂ** ಎಂದರೆ ಜೀವಾತ್ಮ. ತತ್ತ್ವಮಸಿ ಎಂಬುದರಿಂದ ಜೀವಬ್ರಹ್ಮರಿಗೆ ಅಭೇದಸಂಬಂಧವನ್ನುಹೇಳಿದಂತಾಯಿತು. ಸರ್ವಜ್ಞನೂ ಸತ್ಯಸಂಕಲ್ಪನೂ

---

1 ಋ. ಸಂ. ೩.೬೨.೧೦.

2 "ಓಂ ತತ್ಸದಿತಿ ನಿರ್ದೇಶಸ್ತ್ರಿವಿಧೋ ಬ್ರಹ್ಮಣಃ ಸ್ಮೃತಃ"

(ಭ. ಗೀ. ೧೭.೨೩.)

ಜಗತ್ಕಾರಣನೂ ಆದ ಬ್ರಹ್ಮನನ್ನೇ **ತತ್ಪದವು** ನಿರ್ದೇಶಿಸುತ್ತದೆ. **ತದೈಕ್ಷತ** ಇತ್ಯಾದಿ ವಾಕ್ಯಗಳೂ ಇದನ್ನೇ ಬೋಧಿಸುತ್ತವೆ ಇತ್ಯಾದಿಯಾಗಿ ಸರ್ವತ್ರ ನಿವರಿಸಲ್ಪಟ್ಟದೆ. ಛಾಂದೋಗ್ಯದಲ್ಲಿ **ತಜ್ಜಲಾನಿತಿ**[1] ಎಂಬ ಪ್ರಕರಣಕ್ಕೆ **ತತ್ಕ್ರತುಮಯ** ಪ್ರಕರಣವೆಂದೇ ಹೆಸರು. **ಓಂ ತತ್ಬ್ರಹ್ಮ ಓಂ ತದ್ವಾಯುಃ, ಓಂ ತದಾತ್ಮಾ** ಇತ್ಯಾದಿ ವಾಕ್ಯಗಳೂ ಇದನ್ನೇ ಪ್ರತಿಪಾದಿಸುತ್ತವೆ. ಆದ್ದರಿಂದ ಪ್ರಕೃತವಾದ ಮಂತ್ರದಲ್ಲಿ **ತತ್** ಶಬ್ದವು ಬ್ರಹ್ಮಪರ್ಯಾಯವಾದುದರಿಂದ ಪರಬ್ರಹ್ಮರೂಪಿಯಾದ ಸವಿತೃವಿಗೆ ವಿಶೇಷಣವಾಗಿ ಉಪಯೋಗಿಸಲ್ಪಟ್ಟದೆ. ಆದ್ದರಿಂದ **ತಸ್ಯ ಸವಿತುಃ** ಎಂದರ್ಥ ಮಾಡಬೇಕೆಂದು ಹೇಳಿರುವುದು ಒಂದು ಮತ.

ಎರಡನೆಯದಾಗಿ **ತತ್** ಶಬ್ದವು **ಭರ್ಗಃ** ಎಂಬುದಕ್ಕೆ ವಿಶೇಷಣವಾಗಿದೆಯೆಂದು ಹೇಳುವುದು ಇನ್ನೊಂದು ಮತ. ಭಟ್ಟಭಾಸ್ಕರರು ತೈತ್ತಿರೀಯಾರಣ್ಯಕದಲ್ಲಿ ಉದ್ಧೃತವಾಗಿರುವ ಈ ಮಂತ್ರಕ್ಕೆ ತಾತ್ಪರ್ಯವನ್ನು ಹೇಳುವಾಗ ತೈತ್ತಿರೀಯ ಸಂಹಿತೆಯಲ್ಲಿ **ಸಂ ಪಶ್ಯಾಮಿ** ಎಂಬ ಪ್ರಕರಣದಲ್ಲಿ ಈ ಮಂತ್ರಕ್ಕೆ ವ್ಯಾಖ್ಯಾನವನ್ನು ಹೇಳಿದೆಯೆಂದು ತಿಳಿಸಿ ಪುನಃ ಅದನ್ನೇ ವಿವರಿಸುತ್ತಾರೆ. ಆದರೆ, ಆರಣ್ಯಕದಲ್ಲಿ ಹೇಳಿರುವ ವಿವರಣೆಗೂ, ಸಂಹಿತಾ ಪ್ರಕರಣದಲ್ಲಿ ಹೇಳಿರುವ ವಿವರಣೆಗೂ ವ್ಯತ್ಯಾಸವಿದೆ. ಆರಣ್ಯಕದಲ್ಲಿ ಜಗತ್ಪ್ರೇರಕನಾದ ಸವಿತೃದೇವನ ಜಗತ್ಪ್ರಸಿದ್ಧವೂ ಪೂಜ್ಯವೂ ಆದ ತೇಜಸ್ಸು ಎಂದು ವಿವರಿಸಿ **ತತ್** ಶಬ್ದವು **ಭರ್ಗ** ಶಬ್ದಕ್ಕೆ ವಿಶೇಷಣವೆಂದಿದ್ದಾರೆ.[2] ಆದರೆ, ತೈತ್ತಿರೀಯ ಸಂಹಿತೆಯಲ್ಲಿ **ತಸ್ಯ ಸವಿತುಃ**

---

1 ಛಾ. ಉ. ೩.೧೪.೧.

2 "ತತ್ತಸ್ಯ ಸುಪಾಂ ಸುಲುಕ್" ಇತಿ ಷಷ್ಠ್ಯಾ ಲುಕ್, ತಸ್ಯ ಸವಿತುಃ ದೇವಸ್ಯ ದಾನಾದಿಗುಣಯುಕ್ತಸ್ಯ ||

(ತೈ. ಸ. ಭಾಷ್ಯ. ೧.೫.೬.)

ತತ್ ಎಂಬುದು ಸವಿತೃಶಬ್ದಕ್ಕೆ ವಿಶೇಷಣವಾಗಿದೆಯೆಂದು ತಾತ್ಪರ್ಯ. ಇದು ಸಂಹಿತಾವಾಕ್ಯದ ಭಾಷ್ಯ. ಇದೇ ವಾಕ್ಯವನ್ನು ಅರಣ್ಯಕದಲ್ಲಿ ವಿವರಿಸುವಾಗ ಭಾಷ್ಯವು ಈ ರೀತಿಯಿದೆ.

"ಸವಿತುಃ ದೇವಸ್ಯ ಪ್ರೇರಯಿತುಃ ತತ್ ತಾದೃಶಂ... ವರೇಣ್ಯಂ ಭರ್ಗಃ ತೇಜಃ"

(ತೈ. ಆ. ಭಾ. ೧.೧೧.)

ಎಂದರ್ಥ ಮಾಡಬೇಕೆಂದು ಸ್ಪಷ್ಟಪಡಿಸಿದ್ದಾರೆ. ಈ ರೀತಿ ವಿವರಣೆಯಲ್ಲಿ ವ್ಯತ್ಯಾಸವಿದ್ದರೂ ತಾತ್ತ್ವಿಕವಾದ ವಿರೋಧವೇನೂ ಕಾಣುವುದಿಲ್ಲ.

"ಜ್ಯೋತಿಷಾಂ ಜ್ಯೋತಿಃ" ಇತ್ಯಾದಿ ವಾಕ್ಯಗಳಲ್ಲಿ ಬ್ರಹ್ಮನಿಗೂ ಜ್ಯೋತಿಗೂ ತಾದಾತ್ಮ್ಯವನ್ನೇ ಹೇಳಿದೆ. ಒಂದೇ ತತ್ತ್ವವು ಎರಡು ಹೆಸರುಗಳಿಂದ ಕರೆಯಲ್ಪಡುವುದು ಎಂದು ತೋರಿಸಿರುವುದರಿಂದ **ಸವಿತೃ** ಶಬ್ದಕ್ಕೆ ವಿಶೇಷಣವಾದರೆ **ತಸ್ಯ ಜಗತ್ಪ್ರೇರಕಸ್ಯ ಸವಿತುಃ** ಎಂದೂ **ಭರ್ಗ** ಶಬ್ದಕ್ಕೆ ವಿಶೇಷಣವಾದರೆ **ಜಗತ್ಪ್ರಸಿದ್ಧಂ ಜ್ಯೋತಿಃ** ಎಂದೂ ಅರ್ಥವಾಗುತ್ತದೆ.

## ಸವಿತುಃ.

**ಸವಿತೃ** ಶಬ್ದದ ನಿರ್ವಚನವನ್ನೂ ಪರಬ್ರಹ್ಮನೇ ಸವಿತೃ ಶಬ್ದವಾಚ್ಯನೆಂದೂ ಮೇಲೆ ತಿಳಿಸಿದೆ. ಸಕಲ ಲೋಕಕ್ಕೂ ತೃಪ್ತಿಕರವಾದ ವೃಷ್ಟಿಯನ್ನು ಉತ್ಪನ್ನಮಾಡುವುದರಿಂದ ಆದಿತ್ಯನಿಗೆ ಸವಿತೃವೆಂದು ಹೆಸರೆಂದು ಒಂದು ವಿಧವಾದ ನಿರ್ವಚನ.

**ಸೌತಿ ಸಕಲಶ್ರೇಯಾಂಸಿ**—ಉಪಾಸಕರಿಗೆ ಸಕಲ ಶ್ರೇಯಸ್ಸುಗಳನ್ನೂ ಕೊಡುವುದರಿಂದ ಈ ಹೆಸರಿನಿಂದ ಕರೆಯಲ್ಪಡುತ್ತಾನೆ ಆದ್ದರಿಂದ ಸವಿತೃವೆಂದು ಇನ್ನೊಂದು ವಿಧವಾದ ನಿರ್ವಚನ. ಹೀಗೆ ಅನೇಕವಿಧವಾದ ನಿರ್ವಚನಗಳನ್ನು ಹೇಳಬಹುದು. ಈ ಸವಿತೃವಿಗೆ **ವರೇಣ್ಯತ್ವವು** ಹೇಗೆ ಎಂಬ ವಿಷಯವನ್ನು ಋಕ್ಸಂಹಿತೆಯು ತಿಳಿಸುತ್ತದೆ.

ಕವಿಯಾದ ಸವಿತೃವು ಜಗತ್ತಿನ ಸಕಲ ರೂಪಗಳನ್ನೂ ತನ್ನಲ್ಲೇ ಧರಿಸಿದ್ದಾನೆ. ಎರಡು ಪಾದಗಳುಳ್ಳವೂ ನಾಲ್ಕು ಪಾದಗಳುಳ್ಳವೂ ಆದ ಸಕಲ ಜಗತ್ಪ್ರಜೆಗಳಿಗೂ ಮಂಗಳವನ್ನು ಪ್ರಸವಿಸುತ್ತಾನೆ. ಸಕಲ ಚೈತನ್ಯಗಳ ಪ್ರೇರಕನು. ಆದ್ದರಿಂದಲೇ **ವರೇಣ್ಯನು.**[1] ಇತ್ಯಾದಿಯಾದ ವರ್ಣ

---

1 **ವಿಶ್ವಾ ರೂಪಾಣಿ ಪ್ರತಿಮುಂಚತೇ ಕವಿಃ ಪ್ರಾಸಾವೀದ್ಭದ್ರಂ**
**ದ್ವಿಪದೇ ಚತುಷ್ಪದೇ**
**ವಿ ನಾಕಮಖ್ಯತ್ಸವಿತಾ ವರೇಣ್ಯೋಽನು ಪ್ರಯಾಣ**
**ಮುಷಸೋ ವಿ ರಾಜತಿ ॥**
**(ಋ. ಸಂ. ೫.೮೧.೨.)**

ನವು “ ತಸ್ಯ ಭಾಸಾ ಸರ್ವಮಿದಂ ವಿಭಾತಿ ” ಎಂಬ ಉಪನಿಷದ್ವಾಕ್ಯಗಳ ಪ್ರಶಂಸೆಯಂತೆಯೇ ಇದೆ. ಮತ್ತು ಸವಿತೃವೇ ಸಕಲ ಜಗದ್ವ್ಯವಹಾರಗಳಿಗೂ ಪ್ರಭು. ಸಕಲ ಜಗತ್ಪಾಲಕನು. ಸಕಲ ಸೃಷ್ಟಿ ಸ್ಥಿತಿಲಯಗಳಿಗೂ ಇವನೇ ಕಾರಣ.[1] ಇತ್ಯಾದಿಯಾಗಿ ಪರದೇವತಾತ್ವವೂ ಸ್ತುತವಾಗಿದೆ. “ ದೇವಾಯ ಸವಿತ್ರೇ ಸತ್ಯಪ್ರಸವಾಯ ”[2] ಇತ್ಯಾದ್ಯುಪನಿಷದ್ವಾಕ್ಯಗಳು ಈ ಸ್ವರೂಪವನ್ನು ವಿಶದವಾಗಿ ತಿಳಿಸುತ್ತವೆ.

ಚೈತನ್ಯಪ್ರೇರಕನಾದ ಸವಿತೃವು ಪ್ರಥಮತಃ ಸಂಯಮಚಿತ್ತನಾಗಿ ಸತ್ಯಪ್ರಸವಾತ್ಮಕವಾದ ಬುದ್ಧಿಯನ್ನು ಹೊಂದಿದನು. ನಂತರ ಅಗ್ನಿರೂಪವಾದ ಜ್ಯೋತಿಯನ್ನು ಲೋಕದಲ್ಲಿ ಪ್ರಸರಿಸುವಂತೆ ಮಾಡಿದನು. ಆದ್ದರಿಂದಲೇ,

“ ಯುಂಜತೇ ಮನ ಉತ ಯುಂಜತೇ ಧಿಯೋ ವಿಪ್ರಾ
ವಿಪ್ರಸ್ಯ ಬೃಹತೋ ವಿಪಶ್ಚಿತಃ

ಇಂಥ ಧ್ಯಾನರೂಪದಲ್ಲಿಯೇ ಜಗತ್ಕಾರಣನಾದ ಸವಿತೃವನ್ನು ಅಥವಾ ಸವಿತ್ರಾತ್ಮಕವಾದ ದಿವ್ಯಜ್ಯೋತಿಯನ್ನು ಸಾಕ್ಷಾತ್ಕರಿಸಲು ಸಂಯಮಚಿತ್ತದಿಂದ ಧ್ಯಾನರೂಪದಲ್ಲಿಯೇ ಅನುಸಂಧಾನ ಮಾಡತಕ್ಕದ್ದೆಂದು ಉಪಾಸನಾಕ್ರಮವು ವಿಹಿತವಾಗಿದೆ.

## ವರೇಣ್ಯಂ.

ಸಕಲ ಪುರುಷಾರ್ಥಗಳೂ ಸವಿತೃವಿನ ಅನುಗ್ರಹದಿಂದಲೇ ಲಭಿಸುವುದರಿಂದಲೂ ಮತ್ತು ಜ್ಯೋತೀರೂಪವಾಗಿ ಅತ್ಯಂತ ಶ್ರೇಷ್ಠವಾದುದರಿಂದಲೂ ಜಗತ್ತಿಗೆ ಅತ್ಯಾದೃತವಾಗಿದೆ. ಇದೇ ಜಗತ್ತಿನ ಆತ್ಮವೂ ಸತ್ಯವೂ ಆರಾಮಸ್ಥಾನವೂ, ಆನಂದಭೂಮಿಯೂ ಶಾಂತಿಸಮೃದ್ಧಿಯೂ ಆಗಿರುವುದರಿಂದ ಈ ದಿವ್ಯಜ್ಯೋತಿಯೇ ಶ್ರವಣಯೋಗ್ಯ, ಮನನಯೋಗ್ಯ ಮತ್ತು ಧ್ಯಾನಯೋಗ್ಯ ಎಂದು ಸ್ತುತವಾಗಿದೆ. (ಶ್ರೋತವ್ಯೋ ಮನ್ತವ್ಯೋ ನಿದಿಧ್ಯಾಸಿತವ್ಯಃ).

---

1 ಉತೇಶಿಷೇ ಪ್ರಸವಸ್ಯ ತ್ವಮೇಕ ಇದುತ ಪೂಷಾ ಭವಸಿ
ದೇವ ಯಾಮಭಿಃ |
ಉತೇದಂ ವಿಶ್ವಂ ಭುವನಂ ವಿರಾಜಸಿ ....”
(ಋ. ಸಂ. ೫.೮೧.೫.)

2 ಬೃ. ಉ. ೬.೫.೯.

## ಭರ್ಗಃ.

ಸವಿತೃವಿನ ವರೇಣ್ಯವಾದ ಜ್ಯೋತಿಯೇ **ಭರ್ಗ**ಶಬ್ದವಾಚ್ಯವಾಗಿದೆ. ಅಜ್ಞಾನ, ಅದರ ಫಲವಾದ ಪಾಪ ಮತ್ತು ದುಃಖ ಇವನ್ನು ನಾಶಪಡಿಸುವುದರಿಂದ ಪರಬ್ರಹ್ಮನ ಪರಂಜ್ಯೋತಿಯು ಭರ್ಗವೆಂದು ಪ್ರಸಿದ್ಧವಾಗಿದೆ. **ಈ ಪದದ ನಿರ್ವಚನಪೂರ್ವಕ ತಾತ್ಪರ್ಯವನ್ನು ಮೈತ್ರ್ಯುಪನಿಷತ್ತಿನಲ್ಲಿ ಈ ರೀತಿ ತಿಳಿಸಿದೆ.**

(೧) **ಭಾಃ** ಎಂದರೆ ತೇಜೋಯುತವಾದ ಕಿರಣವೆಂದರ್ಥ. ಇಂಥ ಕಿರಣರೂಪದಲ್ಲಿ ಚಲನವಿರುವುದರಿಂದಲೂ ಈ ಚಲನದಿಂದಲೇ ಸರ್ವ ವ್ಯಾಪಕತ್ವವೂ ಇರುವುದರಿಂದಲೂ ಆದಿತ್ಯನ ಪ್ರಭೆಗೆ **ಭರ್ಗ**ವೆಂದು ಹೆಸರು ಎಂದು ಒಂದು ವಿಧವಾದ ನಿರ್ವಚನ.[1]

(೨) ಜಗತ್ತನ್ನು ಸಂಹರಿಸುವುದರಿಂದ ರುದ್ರನಿಗೆ **ಭರ್ಗ**ನೆಂಬ ಹೆಸರು, ಎಂದು ಬ್ರಹ್ಮವಾದಿಗಳ ಮತ.[2]

(೩) ಮೂರನೆಯದಾಗಿ **ಭ**, ರ, ಗ ಎಂಬ ಮೂರು ಅಕ್ಷರಗಳಿಗೂ ಪ್ರತ್ಯೇಕವಾದ ನಿರ್ವಚನವನ್ನು ಹೇಳಬಹುದು. ಹೇಗೆಂದರೆ—

(1) ಸಕಲ ಲೋಕಗಳನ್ನು ತನ್ನ ತೇಜಸ್ಸಿನಿಂದ ಭಾಸಮಾನವನ್ನಾಗಿ ಮಾಡುವುದರಿಂದ **ಭ.**

(2) ಸ್ಥಾವರಜಂಗಮಾತ್ಮಕಗಳಾದ ಸಕಲ ಭೂತಗಳನ್ನೂ ತನ್ನ ಚಿದಾನಂದ ಸ್ವರೂಪದಿಂದ ರಂಜಿಸಿ ಅವುಗಳಿಗೆ ಸುಖವನ್ನುಂಟುಮಾಡುವುದರಿಂದ **ರ.**

(3) ಸುಷುಪ್ತಿಯಲ್ಲಿಯೂ, ಲಯಕಾಲದಲ್ಲಿಯೂ ಸಕಲ ಭೂತಗಳೂ ಸರ್ವಕಾರಣನಾದ ಪರಬ್ರಹ್ಮನಲ್ಲೇ ಲಯವನ್ನು ಹೊಂದುವುದರಿಂದಲೂ ಪ್ರಬೋಧಕಾಲದಲ್ಲೂ ಸೃಷ್ಟಿಕಾಲದಲ್ಲೂ ಬ್ರಹ್ಮನಿಂದಲೇ ಆಗಮಿಸುವುದರಿಂದಲೂ **ಗ** ಎಂಬ ಹೆಸರು.[3]

---

1 **ಭಾಭಿಃ ಕಿರಣೈರಧಿಷ್ಠಾನಧರ್ಮೈರಸ್ಯ ಗತಿರ್ಗಮನಂ**

2 **ಭರ್ಜಯತಿ ಜಗತ್ ಸಂಹರತೀತಿ ರುದ್ರೋ ಭರ್ಗ ಇತಿ—**

3 **ಭ ಇತಿ ಭಾಸಯತೀಮಾನ್ ಲೋಕಾನ್;**
**ರ ಇತಿ ರಂಜಯತೀಮಾನಿ ಭೂತಾನಿ,**
**ಗ ಇತಿ ಗಚ್ಛಂತ್ಯಸ್ಮಿನ್ನಾಗಚ್ಛಂತ್ಯಸ್ಮಾದಿಮಾಃ**
**ಪ್ರಜಾಸ್ತಸ್ಮಾದ್ಭರಗತ್ವಾದ್ಭರ್ಗಃ ||**

**(ಮೈ. ಉ. ೬. ೭)**

ಪರಬ್ರಹ್ಮನು ಈ ರೀತಿ **ಭ, ರ, ಗ** ಎಂಬವುಗಳ ಸಮುಚ್ಚಯವೂ ಸಾಮರಸ್ಯಾತ್ಮಕನೂ ಆದುದರಿಂದ ಅವನಿಗೆ **ಭರ್ಗ**ವೆಂದು ಹೆಸರು.

ಉಳಿದ ವ್ಯಾಖ್ಯಾಕಾರರು ವಿವರಿಸುವಂತೆ, **ಭರ್ಗ** ಶಬ್ದಕ್ಕೆ ತೇಜಸ್ಸು, ಅನ್ನ ಅಥವಾ ಧನ ಎಂಬ ಯಾವ ಅರ್ಥವನ್ನೂ ಹೇಳಬಹುದು.

## ದೇವಸ್ಯ

ದ್ಯುಲೋಕವರ್ತಿಯಾದುದರಿಂದಾಗಲಿ, ಪ್ರಕಾಶಮಾನನಾದುದರಿಂದಾಗಲಿ ಅಥವಾ ಕ್ರೀಡಾತ್ಮಕವಾದ ಸ್ವರೂಪವಿರುವುದರಿಂದಾಗಲಿ ಸವಿತೃವು ದೇವ ಶಬ್ದವಾಚ್ಯನು.[1] ಅಥವಾ ಕ್ರೀಡಾರೂಪವಾದ ಆನಂದದಲ್ಲಿಯೇ ಸರ್ವದಾ ಇರುವುದರಿಂದಲೂ, ಆನಂದರೂಪನೇ ಆಗಿರುವುದರಿಂದಲೂ ಈ ವಿಶೇಷಣ.

ಆನನ್ದಮಯನಾದ ಈ ಪುರುಷನು ಮೋದಪ್ರಮೋದ ರೂಪಗಳಾದ ಪಕ್ಷಗಳಿಂದ ಯುಕ್ತನಾಗಿ ಆನನ್ದಾತ್ಮಕನೇ ಆಗಿದ್ದಾನೆಂದು ವರ್ಣಿಸಿರುವ ಪರಬ್ರಹ್ಮನ ವಿಶೇಷಗುಣವೇ ದೇವಶಬ್ದವಾಚ್ಯ.

"ಬ್ರಹ್ಮಜಜ್ಞಂ ದೇವಮೀಡ್ಯಂ ವಿದಿತ್ವಾ", "ಆತ್ಮರತಿಃ, ಆತ ಕ್ರೀಡ ಯಸ್ಯ ವಿಶ್ವ ಉಪಾಸತೇ" ಇತ್ಯಾದಿ ವಾಕ್ಯಗಳೆಲ್ಲವೂ ಈ ಗುಣವನ್ನೇ ಪ್ರಶಂಸಿಸಿವೆ.

## ಧೀಮಹಿ

ಧೀಮಹಿ ಪದಕ್ಕೆ ಧ್ಯಾಯಾಮಃ, ಮನಸಾ ಧಾರಯಾಮಃ ಎಂಬರ್ಥಗಳನ್ನು ಹೇಳಿದೆ. ಅಥವಾ ಧ್ಯೇಯತಯಾ ಧಾರಯಾಮಃ ಎಂಬೆರಡು ಅರ್ಥಗಳನ್ನೂ ಹೇಳಿದಂತಾಯಿತು. ಧ್ಯಾನದ ಆವಶ್ಯಕತೆಯನ್ನೂ ಪ್ರಯೋಜನವನ್ನೂ ಮೇಲೆ ತಿಳಿಸಿದೆ. ಪರಬ್ರಹ್ಮನು ವಾಕ್ಕಿಗೂ ಮನಸ್ಸಿಗೂ ಗೋಚರನಲ್ಲ. ಆದ್ದರಿಂದ ಧ್ಯಾನರೂಪವಾದ ಉಪಾಸನೆಯಿಂದಲೇ ಸಾಕ್ಷಾತ್ಕಾರಮಾಡಿಕೊಳ್ಳಬೇಕು.

ಆಹಂ ವಿಶ್ವಂ ಭುವನಭ್ಯಭವಾಂ । ಸುವರ್ನ ಜ್ಯೋತೀಃ ॥
(ತೈ. ಉ. ೩.೮.)

---

1 ದಿವ್ಯತೇ ಕ್ರೀಡತೇ ಯಸ್ಮಾದ್ರೋಚತೇ ದ್ಯೋತತೇ ದಿವಿ ।
ತಸ್ಮಾದ್ದೇವ ಇತಿ ಪ್ರೋಕ್ತಃ....॥

ಭೇದಾತ್ಮಕವಾದ ಸಕಲ ಲೋಕಗಳನ್ನೂ ಮೀರಿದ ಪರಂಜ್ಯೋತೀ ರೂಪನಾದ ಬ್ರಹ್ಮಸಾಕ್ಷಾತ್ಕಾರವನ್ನು ಪಡೆದು ಬ್ರಹ್ಮನರೂಪನೇ ಆಗಿರುವೆನು ಎಂಬ ಐಕ್ಯಭಾವನೆಯು ಬರಲು ಯಾವ ಧ್ಯಾನರೂಪವಾದ ಸಾಧನವಿದೆಯೋ ಅದನ್ನು ಆಶಂಸಿಸಿದೆ ಈ ಜ್ಞಾನಾತ್ಮಕವಾದ ಧ್ಯಾನದ ಫಲವಾಗಿ ಮರ್ತ್ಯನು ಅಮೃತತ್ವವನ್ನು ಪಡೆಯುತ್ತಾನೆ ಅಂತರಿಕ್ಷದಲ್ಲಿ ಆದಿತ್ಯನು ಪ್ರಕಾಶಿಸುವಂತೆ ತಾನೂ ಬ್ರಹ್ಮರೂಪವಾದ ದಿವ್ಯತೇಜಸ್ಸಿನಿಂದ ಪ್ರಕಾಶಿಸುತ್ತಾನೆ.

## ಧಿಯಃ

ಬ್ರಹ್ಮೈಕ್ಯಜ್ಞಾನವನ್ನು ಪಡೆಯಬೇಕಾದರೆ ತತ್ಸಾಧನವಾದ ಜ್ಞಾನವೂ ತದ್ಧ್ಯಾನಸಾಧಕವಾದ ಕರ್ಮವೂ ಅತ್ಯವಶ್ಯವಾಗಿರುತ್ತೆ. ಅಂಥ ಧೀಯನ್ನು ಸವಿತೃವು ಪ್ರೇರಿಸಲಿ ಎಂದು ಪ್ರಾರ್ಥಿಸಿದೆ. ಇಲ್ಲಿ ಧೀ ಶಬ್ದಕ್ಕೆ ಬುದ್ಧಿ ಅಥವಾ ಪ್ರಜ್ಞೆಯೆಂದಾಗಲಿ, ಕರ್ಮವೆಂದಾಗಲಿ ಎರಡು ವಿಧವಾದ ಅರ್ಥವನ್ನು ಹೇಳಬಹುದು. ಅವಿದ್ಯೆಯು ನಾಶವಾಗಬೇಕಾದುದರಿಂದ ಪ್ರಜ್ಞೆಯು ಅತ್ಯವಶ್ಯ. ಈ ಪ್ರಜ್ಞೆಯು ಉಪಾಸನಾರೂಪವಾದ ಕರ್ಮದಿಂದಲೇ ಸಾಧ್ಯ. ಆದ್ದರಿಂದ ಎರಡರ್ಥವೂ ಸಮಂಜಸ. ಅಲ್ಲದೆ, ಸವಿತೃವಿನ ಸ್ತುತಿ ರೂಪವಾದ ಧ್ಯಾನವಾದುದರಿಂದ ಧೀ ಶಬ್ದಕ್ಕೆ ಸ್ತುತಿಯೆಂದರ್ಥಮಾಡಿದರೂ ತಪ್ಪಾಗಲಾರದು. ಬ್ರಹ್ಮಜ್ಞಾನಕ್ಕೆ ಸತ್ಕರ್ಮವೇ ಸಾಧನ. ವಿಶೇಷಜ್ಞಾನ ಪೂರ್ವಕವಾದ ಕರ್ಮವೂ ಸ್ತುತಿರೂಪವೇ ಆಗಿದೆ. ಈ ಜ್ಞಾನಕರ್ಮಗಳ ತಾದಾತ್ಮ್ಯ ಅಥವಾ ಸಾಹಚರ್ಯವನ್ನು ತೈತ್ತಿರೀಯೋಪನಿಷತ್ತಿನಲ್ಲಿ ಈ ರೀತಿ ತಿಳಿಸಿದೆ.

ವಿಜ್ಞಾನಂ ಯಜ್ಞಂ ತನುತೇ । ಕರ್ಮಾಣಿ ತನುತೇಽಪಿ ಚ ।
ವಿಜ್ಞಾನಂ ದೇವಾಸ್ಸರ್ವೇ ಬ್ರಹ್ಮಜ್ಯೇಷ್ಠಮುಪಾಸತೇ ।

(ತೈ. ಉ. ೨.೧.)

ವಿಶೇಷವಾದ ಜ್ಞಾನವಿರುವವನೇ ಯಜ್ಞವನ್ನಾಚರಿಸುವನು. ಈ ರೀತಿ ವಿಜ್ಞಾನರೂಪವಾದ ಕರ್ತೃತ್ವವಿರುವುದರಿಂದಲೇ ವಿಜ್ಞಾನಮಯನಾದ ಆತ್ಮನೇ ಬ್ರಹ್ಮ ಎಂಬ ವ್ಯವಹಾರವಿದೆ. ಆದರೆ, ವಿಜ್ಞಾನಮಯನಾದ ಬ್ರಹ್ಮನಿಗಿಂತಲೂ ಮೀರಿದ ಆನನ್ದಮಯನಾದ ಬ್ರಹ್ಮನನ್ನು ಸಾಕ್ಷಾತ್ಕರಿ

ಸಲು ವಿಜ್ಞಾನಾತ್ಮಕವಾದ ಕರ್ಮರೂಪದ ಧ್ಯಾನವು ಅವಶ್ಯವೆಂದು ಜ್ಞಾನ, ಕರ್ಮ, ಧ್ಯಾನ ಇವುಗಳ ಸಮುಚ್ಚಯಾತ್ಮಕವಾದ ಧೀ ಶಬ್ದವು ಪ್ರಕೃತದಲ್ಲಿ ಜ್ಞಾನಪೂರ್ವಕವೂ ಕರ್ಮಾತ್ಮಕವೂ ಆದ ಧ್ಯಾನವನ್ನು ತಿಳಿಸುತ್ತದೆ. ಇಂಥ ಕರ್ಮಾತ್ಮಕವಾದ ಧ್ಯಾನಕ್ಕೆ ನಮ್ಮನ್ನು ಪ್ರೇರಿಸಲಿ ಎಂಬುದೇ ಪ್ರಾರ್ಥನೆ.

## ಯಃ

"ಯಃ ಸವಿತಾ ಸೂರ್ಯಃ"| ಯಾವ ಸವಿತೃನಾಮಕನಾದ ಸೂರ್ಯನಿರುವನೋ ಅವನು ನಮ್ಮನ್ನು ಪ್ರೇರಿಸಲಿ ಎಂದು ಒಂದರ್ಥ. ಅಥವಾ "ಯಃ ಇತಿ ಲಿಂಗವ್ಯತ್ಯಯಃ ಯದ್ಭರ್ಗೋ ಧಿಯಃ ಪ್ರಚೋದಯಾತ್ | ತತ್ ಧ್ಯಾಯೇಮ ಇತಿ ಸಮನ್ವಯಃ"| ಯಾವ ಭರ್ಗವು ಎಂದರೆ ಆದಿತ್ಯ ಜ್ಯೋತಿಯು ನಮ್ಮ ಜ್ಞಾನಪೂರ್ವಕವಾದ ಕರ್ಮವನ್ನು ಪ್ರೇರಿಸುವುದೋ ಅಂಥ ಭರ್ಗವನ್ನು ಧ್ಯಾನಿಸೋಣ ಎಂಬ ಆಶಂಸೆಯನ್ನು ತೋರಿಸುವ ಇನ್ನೊಂದರ್ಥ, ಎಂದು ಸಾಯಣರು ಎರಡು ವಿಧವಾದ ತಾತ್ಪರ್ಯವನ್ನು ಹೇಳಿದ್ದಾರೆ. ಅಲ್ಲದೇ, **ಯಃ** ಎಂಬುದು ಲಿಂಗವ್ಯತ್ಯಯವನ್ನು ಹೊಂದಿ ಪ್ರತ್ಯಗ್ಬ್ರಹ್ಮನನ್ನೇ ನಿರ್ದೇಶಿಸುತ್ತದೆ ಎಂಬುದೂ ಒಂದು ಮತ.

"ತಸ್ಯ ಯಚ್ಛಬ್ದನಿರ್ದಿಷ್ಟಸ್ಯಾತ್ಮನಃ ಸ್ವರೂಪ ಭೂತಂ ಪರಂ ಬ್ರಹ್ಮ ತತ್ಸವಿತುರಿತ್ಯಾದಿಪದೈರ್ನಿರ್ದಿಶ್ಯತೇ"|| ಆತ್ಮಸ್ವರೂಪಭೂತವಾದ ಯಾವ ಪರಬ್ರಹ್ಮವುಂಟೋ ಅದೇ **ಸವಿತುಃ** ಇತ್ಯಾದಿಗಳಿಂದ ನಿರ್ದೇಶಿಸಲ್ಪಟ್ಟಿದೆಯೆಂದು **ಯಃ** ಎಂಬ ಪದಕ್ಕೆ ಪರಬ್ರಹ್ಮಪರವಾದ ಅರ್ಥವನ್ನು ಶಂಕರಾಚಾರ್ಯರು ಹೇಳಿದ್ದಾರೆ.

## ನಃ

"**ನಃ**" ಎಂದರೆ ನಮಗೆ ಎಂದರ್ಥ. ಬ್ರಹ್ಮನು ಬೇರೆ, ಜೀವಾತ್ಮರಾದ ನಾವು ಬೇರೆಯೆಂಬ ಅರ್ಥವು ತೋರುತ್ತದೆ. ವಸ್ತುತಃ ಪರಮಾತ್ಮನಿಗೂ, ಜೀವಾತ್ಮನಿಗೂ ಯಾವ ವಿಧವಾದ ಭೇದವಿಲ್ಲದಿದ್ದರೂ, ಪುರುಷನಿಗೆ ತನ್ನ ಸಹಜವಾದ ಅಜ್ಞಾನದಿಂದ ಈ ಭೇದ ಬುದ್ಧಿಯು ಬೆಳೆಯುತ್ತದೆಂದು ಕೆಲವರ ಮತ ಆದ್ದರಿಂದಲೇ, ಜೀವಾತ್ಮರನ್ನು, ಬ್ರಹ್ಮನಿಗಿಂತಲೂ ಪ್ರತ್ಯೇಕವಾದ ಸ್ಥಿತಿಯುಳ್ಳವರು ಎಂದು ಬೇರ್ಪಡಿಸಿ, "ನಿನಗಿಂತಲೂ

ಭಿನ್ನರಾದ ನಮಗೆ ಸತ್ಕರ್ಮಕ್ಕೆ ಪ್ರೇರಕವೂ, ನಿನ್ನ ಉಪಾಸನೆಗೆ ಸಾಧಕವೂ ಆದ ಬುದ್ಧಿಯನ್ನನುಗ್ರಹಿಸು" ಎಂಬ ಪ್ರಾರ್ಥನೆಯಿದೆಯೆಂದು ತಿಳಿಸಿದ್ದಾರೆ.

## ಪ್ರಚೋದಯಾತ್

ಪ್ರಚೋದಯಾತ್—ಪ್ರೇರಯೇತ್ । ಸತ್ಕರ್ಮಕಾರಕವಾದ ಸದ್ಬುದ್ಧಿಯನ್ನು ಪ್ರೇರಿಸಲಿ. ಜ್ಞಾನಪೂರ್ವಕವಾದ ಕರ್ಮದಿಂದ ಸವಿತೃವಿನ ಭರ್ಗವನ್ನು ತಿಳಿಯಲು ಶಕ್ತಿಯನ್ನು ಕೊಡಲಿ ಎಂದು ಪ್ರಾರ್ಥಿಸಿದೆ. ಈ ಪ್ರಾರ್ಥನೆಯಲ್ಲಿ ಒಂದು ಮುಖ್ಯವಾದ ಅಂಶ. ಈಶ್ವರಾನುಗ್ರಹವನ್ನು ಪಡೆದ ಹೊರತು ಜ್ಞಾನದ ಫಲವು ಪೂರ್ಣವಾಗಿ ಲಭಿಸಲಾರದು ಎಂಬುದೇ ಮುಖ್ಯವಿಷಯ.

ಮಯಾ ಪ್ರಸನ್ನೇನ ತವಾರ್ಜುನೇದಂ ರೂಪಂ ಪರಂ
ದರ್ಶಿತಮಾತ್ಮಯೋಗಾತ್ ॥
(ಭ. ಗೀ. ೧೧.೪೭)

ದಿವ್ಯಜ್ಯೋತೀರೂಪನಾದ ನನ್ನ ವಿಶ್ವರೂಪ ದರ್ಶನವು ನನ್ನ ಅನುಗ್ರಹದಿಂದಲೇ ನಿನಗೆ ಲಭಿಸಿತು ಎಂಬ ಗೀತಾವಾಕ್ಯವೂ ಈಶ್ವರಾನುಗ್ರಹದ ಆವಶ್ಯಕತೆಯನ್ನು ತಿಳಿಸುತ್ತದೆ.

ನಾಯಮಾತ್ಮಾ ಪ್ರವಚನೇನ ಲಭ್ಯಃ ನ ಮೇಧಯಾ
ನ ಬಹುನಾ ಶ್ರುತೇನ ।
ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ
ವಿವೃಣುತೇ ತನೂಂ ಸ್ವಾಂ ॥
(ಕಠ. ೨.೨೩.)

ಪರಮಾತ್ಮನು ಪ್ರವಚನದಿಂದ ದೊರೆಯತಕ್ಕವನಲ್ಲ. ಮೇಧಾಶಕ್ತಿಯಿಂದ ದೊರೆಯುವವನಲ್ಲ. ಶ್ರುತಿಶ್ರವಣದಿಂದಲೂ ಲಭಿಸುವವನಲ್ಲ. ಯಾರು ಪರಮಾತ್ಮನನ್ನೇ ಆಶ್ರಯಿಸಿ ಅವನ ಅನುಗ್ರಹವನ್ನು ಸಂಪಾದಿಸುವನೋ ಅವನಿಗೆ ಮಾತ್ರ ಲಭ್ಯ. ಜ್ಞಾನಕರ್ಮಪೂರ್ವಕವಾದ ಧ್ಯಾನದಿಂದ ಉಪಾಸಿಸುವ ಪುರುಷನಿಗೆ ಮಾತ್ರ ಈಶ್ವರನು ತನ್ನ ತನುವನ್ನು ಬಿಚ್ಚಿತೋರುವನು

ಎಂದು ಈಶ್ವರಾನುಗ್ರಹದ ಆವಶ್ಯಕತೆಯನ್ನು ತಿಳಿಸಿದೆ. "ಅಗ್ನೇ ನಯ" ಇತ್ಯಾದಿ ವಾಕ್ಯಗಳಲ್ಲಿ ಪ್ರಾರ್ಥಿಸಿರುವಂತೆ "ತತ್ಸವಿತುಃ" ಎಂಬ ಮಂತ್ರದಲ್ಲೂ ಈಶ್ವರನ ಭರ್ಗವನ್ನು ತಿಳಿಯುವ ಸಾಧನವಾದ ಜ್ಞಾನವನ್ನೂ, ತದಾತ್ಮ್ಯವಾದುದೂ ಈಶ್ವರಸೇವಾರೂಪವಾದುದೂ ಆದ ಕರ್ಮವನ್ನೂ ನಮಗೆ ತಿಳಿಸಿ ಅದನ್ನು ಆಚರಿಸಿ ತನ್ಮೂಲಕ ಈಶ್ವರಸಾಕ್ಷಾತ್ಕಾರವನ್ನು ಮಾಡುವ ಶಕ್ತಿಯನ್ನುಂಟುಮಾಡು ಎಂದೂ ಪ್ರಾರ್ಥಿಸಿದೆ.

ಹೀಗೆ

(೧) ನಾಮರೂಪಾತ್ಮಕವಾಗಿ ವೈವಿಧ್ಯವನ್ನು ಹೊಂದಿರುವ ಜಗದ್ವ್ಯಾಪಿಯೂ, ಜಗದತಿರಿಕ್ತವೂ, ಸಕಲ ದ್ವಂದ್ವಗಳಿಗೂ ಮೂಲ ಕಾರಣವೂ ಹಾಗೆಯೇ ಸಾಮರಸ್ಯಕಾರಕವೂ, ಜ್ಯೋತೀ ರೂಪವೂ ಆದ ದಿವ್ಯತತ್ತ್ವದ ಜ್ಞಾನ ;

(೨) ಋಕ್ಪ್ರತಿಪಾದಿತವೂ, 'ಪರಮವ್ಯೋಮಸ್ಥವೂ', 'ಗಹನ'ವೂ, 'ಗಭೀರ'ವೂ, ಆದ ದಿವ್ಯತತ್ತ್ವದ ಉಪಾಸನೆಯ ಮೂಲಕ ಕ್ರತುಮಯನಾದ ವ್ಯಕ್ತಿಯು ತಾನೂ ಆ ದಿವ್ಯ ಸ್ವರೂಪವನ್ನು ಹೊಂದುವುದು ;

ಇದೇ ಪುರುಷನ ಚರಮ ಧ್ಯೇಯ ; ಆತ್ಮ ಕಲ್ಯಾಣದ ಪರಮಾವಧಿ ; ಎಂದು ಗಾಯತ್ರ್ಯಾದಿ ಮಹಾ ಮಂತ್ರ ದ್ರಷ್ಟರಾದ ಮಹರ್ಷಿಗಳು ಲೋಕಕ್ಕೆ ಸಾರಿರುವ ಉದ್ದೇಶದ ಸಾರ.



# ಮುಂದಿನ ಸಂಪುಟಗಳು.



1. ಋಕ್ಸಂಹಿತೆ ಭಾಗ—೨

   ವಿಶ್ವಜ್ಯೋತಿ ಆದರ ನಾನಾಮುಖಗಳು

2. ಋಕ್ಸಂಹಿತೆ ಭಾಗ—೩

   ವಿಶ್ವನಿಯಮ ಮತ್ತು ಪುರುಷಸ್ವಾತಂತ್ರ್ಯ

3. ಆರಣ್ಯಕಗಳು —

   ಕರ್ಮ ಮತ್ತು ಜ್ಞಾನಕಾಂಡಗಳು